# ಮೊದಲ ಮಾತು

ಅಭಿಮಾನಿ ಓದುಗರ ಮುಂದೆ **'ಹೊಸ ಹೆಜ್ಜೆ'** ಕಾದಂಬರಿಯನ್ನು ಇರಿಸಿ ದ್ದೇನೆ. ಹದಿಮೂರು ವರ್ಷದ ಬಾಲಕನೊಬ್ಬನ ಬದುಕಿನ ಸುತ್ತ ರಚಿಸಿರುವ ಈ ಕಾದಂಬರಿಯನ್ನು ಓದುಗರು ಸಹೃದಯತೆಯಿಂದ ಸ್ವಾಗತಿಸುವರೆಂದು ನಂಬಿದ್ದೇನೆ.

ಈ ಕಾದಂಬರಿಯನ್ನು ಪ್ರಕಟಿಸುತ್ತಿರುವ 'ಗೀತಾ ಬುಕ್ ಹೌಸ್' ಪ್ರಕಾಶಕರಿಗೆ ನನ್ನ ಅನಂತ ಕೃತಜ್ಞತೆಗಳು.

**ಎ. ಪಿ. ಮಾಲತಿ**

# ಹೊಸ ಹೆಜ್ಜೆ

## 1

ಒಳಗಿನಿಂದ ಮೂರನೆಯ ಬಾರಿ ಸ್ವರ ಕೇಳಿಬಂದರೂ ಏಳಲಾರದೆ ಕಂಬಳಿಯಲ್ಲಿ ಮೈಯೆಲ್ಲ ಮುದ್ದೆಮಾಡಿಕೊಂಡು ಮಲಗಿದ್ದ ಗಣೇಶ ತನ್ನಲ್ಲೇ ಕನಸು ಕಾಣುತ್ತಿದ್ದಾನೆ. ಪೂರ್ವದಿಂಗತವೆಲ್ಲ ರಂಗೇರಿ ಹೊಸ ಬೆಳಕು ಗೋಚರಿಸುತ್ತಿದ್ದಂತೆ ಅವನ ಕನಸುಗಳೂ ರಂಗೇರುತ್ತ ಅಲ್ಲಿ ಏನೇನೋ ಹೊಸ ಆಸೆಗಳನ್ನು ಹುಟ್ಟಿಸುತ್ತಿವೆ. ಚಳಿಗಾಲದ ಬೆಳಗಿನ ಚಳಿಯಲ್ಲಿ ಅವನು ಹಿತವಾಗಿ ನಗುತ್ತಿದ್ದಾನೆ.

"ಗಣೇಶ, ಆಗಲೇ ಬೆಳಗಾಯಿತು. ನಿದ್ರೆ ಮಾಡಿದ್ದು ಸಾಕು, ಏಳು." ಹೆಣ್ಣಿನ ಸ್ವರ ಇನ್ನೊಂದು ಬಾರಿ ಕೇಳಿಸಿದಾಗ ಗಣೇಶ ಹೊದಿಕೆಯೊಳಗಿನಿಂದ ಮಿಸುಕಾಡಲಿಲ್ಲ. ಇವತ್ತು ಅವನಿಗೆ ಬಹಳ ಆಲಸ್ಯ. ಏಳುವುದಕ್ಕೆ ಮನಸ್ಸಿಲ್ಲ. ನಿನ್ನೆಯೆಲ್ಲ ಗದ್ದೆ ಹೂಟಿ ಮಾಡಿಮಾಡಿ ಸುಸ್ತಾಗಿಹೋಗಿದ್ದಾನೆ. ಅಂಗೈ ಮೇಲೆ ಅಡಿಕೆ ಗಾತ್ರದ ಬೊಕ್ಕೆಗಳು ಎದ್ದಿವೆ. ಗದ್ದೆಯ ಕೆಸರಿನಲ್ಲಿ ಕೋಣಗಳ ಹಿಂದೆ ಹೆಜ್ಜೆ ಹಾಕಿ ಹಾಕಿ. ಅವನ ಪುಟ್ಟ ಪಾದಗಳು ಊದಿಕೊಂಡಿವೆ. ಮೈಕೈ ಎಲ್ಲ ಹುಣ್ಣಿನಂತೆ ನೋವು.

ಬೆಳಗಿನ ಮಧುರ ಕೋಲಾಹಲದೊಂದಿಗೆ ಕಾಡನ್ನು ಎಬ್ಬಿಸುವ ಹಕ್ಕಿಗಳ ಉಲಿತದಿಂದ ಅವನು ಎಚ್ಚರಗೊಂಡಿದ್ದ. ಒಳಗಿನ ಕರೆ ಕೇಳಿಸುವ ಮೊದಲೇ ಕರ್ತವ್ಯಪ್ರಜ್ಞೆಯೊಂದಿಗೆ ಅವನು ಹಾಸಿಗೆ ಬಿಟ್ಟು ಏಳಲೇಬೇಕಿತ್ತು. ಚಳಿಯಿರಲಿ, ಮಳೆಗಾಳಿಯೇ ಬೀಸುತ್ತಿರಲಿ, ನಸುಕಿನ ಕೆಲಸಗಳಿಗೆ ಗೊಣಗಾಡದೆ ಅವನು ಸಿದ್ಧನಾಗಲೇಬೇಕು. ಹಾಗಲ್ಲ ಹೀಗೆ ಎಂದು ಹೇಳುವ, ಅದು ಬೇಡ ಇದು ಬೇಕು ಎಂದು ಕೇಳುವ ಅಧಿಕಾರ ಅವನಿಗಿಲ್ಲ. ಹೇಳಿದಂತೆ ಮಾಡುವ, ಕುಣಿಸಿದಂತೆ ಕುಣಿಯುವ ಗೊಂಬೆ ಅವನಾಗಿದ್ದಾನೆ.

"ಗಣೇಶ, ಆಗಲೇ ಬೆಳಗಾಯಿತು. ಏಳು ಬೇಗ. ಎಷ್ಟು ಸಾರೆ ಹೇಳಲಿ ನಿನಗೆ? ಬಿಸಿಲೇರುವ ಮೊದಲೇ ಒಂದು ಸಾಲು ಉತ್ತುಬಿಡು." ಇನ್ನೊಮ್ಮೆ ಕೇಳಿಸಿತು ಸ್ವರ.

ಗಣೇಶ ಮೈಯನ್ನು ಮತ್ತಷ್ಟು ಮುದ್ದೆಮಾಡಿಕೊಂಡು ಮಲಗಿದ. ಇನ್ನೊಂದು ಅರ್ಧಗಂಟೆ ಮಲಗಿದರೆ ಇವಳ ಅಪ್ಪನ ಗಂಟು ಖರ್ಚಾಗುವುದಿಲ್ಲ ವಲ್ಲ. ಹೇಗೂ ಕೆಲಸದವರು ಬರುವುದು ಎಂಟು ಗಂಟೆಯನಂತರ. ಅಷ್ಟು ಹೊತ್ತಿಗೆ ಭರಭರಾ ಅಂತ ಒಂದು ಸಾಲು ಹೂಟಿ ಮಾಡಿದರಾಯಿತು. ಅದೇನು ಮಹಾ ಹೊತ್ತಿನ ಕೆಲಸ? ಈ ನಸುಕಿನಲ್ಲಿ ಎದ್ದು ಚಳಿಯಲ್ಲಿ ಹೂಟಿ ಮಾಡಲು ತನ್ನಿಂದ ಸಾಧ್ಯವಿಲ್ಲ.

ಅಷ್ಟರಲ್ಲಿ ಮತ್ತೊಂದು ದಪ್ಪದ ಒರಟು ಸ್ವರ ಕೇಳಿಸಿತು: "ಕೋಣ! ಇನ್ನೂ ಏಳಲಿಲ್ಲವೇ? ಒಂದು ಕೊಡಪಾನ ನೀರು ತಂದು ಸುರಿ ಅವನ ಮೈ ಮೇಲೆ. ಏಳ್ತಾನೆ."

ಗಣೇಶ ಹೊದಿಕೆಯನ್ನು ಅತ್ತ ಸರಿಸಿ ಆ ಗಳಿಗೆಯಲ್ಲಿ ಎದ್ದುಬಿಟ್ಟ. ಯಾವಾಗಲೋ ಒಂದು ದಿನ ಅವನು ಏಳಲಿಲ್ಲವೆಂದು ಅವನ ಅಪ್ಪ ಮೈಮೇಲೆ ನೀರು ಸುರಿದು ಎಬ್ಬಿಸಿದ್ದ. ಆ ನೆನಪು ಇನ್ನೂ ಹಸಿರಾಗಿಯೇ ಇದೆ ಮನದಲ್ಲಿ. ಮೈಮೇಲೆ ನೀರು ಸುರಿಸಿಕೊಂಡು ಏಳುವ ಶಿಕ್ಷೆ ಯಾರಿಗೆ ಬೇಕು? ನಿದ್ದೆಗಣ್ಣು ತೆರೆದು ಚಾಪೆಯನ್ನು ಸುರುಳಿಮಾಡಿ ಸುತ್ತಿಟ್ಟು, ಜಗಲಿಯ ಮೂಲೆಯಲ್ಲಿ ಒತ್ತಿಟ್ಟು, ಹೊರಗೆ ಕಾಲಿರಿಸಿದ. ಮುಂಜುಗಾಳಿ ಮುಖಕ್ಕೆ ಬಡಿದು ನಡುಗಿಸಿತು ಮೈಯನ್ನು.

"ತುಂಬ ಚಳಿಯಲ್ಲವೇ? ಬಚ್ಚಲು ಒಲೆಗೆ ಬೆಂಕಿ ಹಾಕಿ ಕೋಣಗಳಿಗೆ ಅಕ್ಕಚ್ಚು ಕೊಟ್ಟು ಬೇಗ ಅವುಗಳನ್ನು ಗದ್ದೆ ಹತ್ರ ಹೊಡ್ಕೊಂಡು ಹೋಗು." ಕಿಟಕಿಯೊಳಗಿನಿಂದಲೇ ಆಜ್ಞೆಯಾಯಿತು: "ಬೆಂಕಿ ಕಾಯಿಸ್ತ ಕೂತ್ಕೋ ಬೇಡ."

"ಆಯ್ತು ದೊಡ್ಡಮ್ಮಾ." ಸ್ವಲ್ಪ ಗಟ್ಟಿಯಾಗಿಯೇ ಉತ್ತರಿಸಿ ಬಚ್ಚಲು ಒಲೆಗೆ ಬೆಂಕಿ ಹಾಕಿದ. ಒಲೆಯ ಉರಿಗೆ ಚಳಿ ತಗ್ಗಿದರೂ ಅಲ್ಲಿಂದ ಬೇಗನೆ ಎದ್ದು ಹೋಗುವ ಮನಸ್ಸು ಅವನಿಗಿರಲಿಲ್ಲ. ಇನ್ನಷ್ಟು ಹೊತ್ತು ಚಳಿ ಕಾಯಿಸಿಕೊಳ್ಳುತ್ತ ಹಾಗೇ ಮುದುರಿ ಕುಳಿತುಕೊಳ್ಳಬೇಕು. ಆದರೆ ಬದಿಯ ಕೊಟ್ಟಿಗೆಯಲ್ಲಿದ್ದ ಕೋಣಗಳು ಅವನನ್ನು ನೋಡಿದಾಕ್ಷಣ ವಾಂಯ್.... ಎನ್ನಲಾರಂಭಿಸಿದವು. ಅವನು ನಿಧಾನವಾಗಿ ಎದ್ದು ಕೊಟ್ಟಿಗೆಯತ್ತ ಬಂದ. ನಿನ್ನೆ ರಾತ್ರಿಯೇ ಬೇಯಿಸಿಟ್ಟ ಅಕ್ಕಚ್ಚನ್ನು ಬಾಲ್ದಿಗೆ ತೋಡಿಹಾಕಿ ಉಪ್ಪು

ಬೆರೆಸಿ ಕೋಣಗಳ ಎದುರು ಇರಿಸಿದ. ಎರಡು ಕೋಣಗಳೂ ಬಾಲ್ದಿಯಲ್ಲಿ ಮುಖವನ್ನು ಅದ್ದಿ ಸೊರಬರನೆ ಸದ್ದು ಮಾಡುತ್ತ ಅಕ್ಕಚ್ಚನ್ನು ಹೀರುವಾಗ ಅವನಿಗೆ ಮೀಸೇ ಅಣ್ಣನ ಅಂಗಡಿಯ ಚಹದ ನೆನಪು ಬಂದಿತು.

ತಲೆಗೆ ಕಟ್ಟಿಕೊಂಡ ಬಟ್ಟೆಯನ್ನು, ಸರಿಪಡಿಸಿಕೊಂಡ ಚಡ್ಡಿಯನ್ನು. ಕೋಣಗಳ ಕೊರಳ ಹಗ್ಗವನ್ನು ಬಿಡಿಸಿ ಮೂಗುದಾರವನ್ನು ಬಿಗಿಯಾಗಿ ಕೈಯಲ್ಲಿ ಹಿಡಿದುಕೊಂಡು ನಡೆದ ಗದ್ದೆಯತ್ತ. ಮನೆಯೆದುರಿನಲ್ಲಿ ಇದೆ ವಿಸ್ತಾರವಾದ ಮೂರು ಎಕರೆಯ ಗದ್ದೆ. ಆದರೆ ಏರುತಗ್ಗುಗಳಿಂದಾಗಿ ಬೇಸಾಯಕ್ಕೆ ಅನುಕೂಲವಾಗುವಂತೆ ಹುಣಿಗಳನ್ನು ಕೆತ್ತಿ ನಾಲ್ಕಾರು ಭಾಗಗಳನ್ನು ಮಾಡಿದ್ದಾರೆ. ಮೊದಲನೆಯ ಬೆಳೆಯನ್ನು ಕುಯ್ದು ಎರಡನೆಯ ಬೆಳೆಯ ಕೆಲಸ ಇಷ್ಟು ಹೊತ್ತಿಗಾಗಲೇ ಮುಗಿಯಬೇಕಿತ್ತು. ಕೆಲಸ ನಿಧಾನವಾದುದರಿಂದ ಮನೆಯ ಎಡಪಾರ್ಶ್ವದ ಗದ್ದೆಯ ಒಂದು ಭಾಗದಲ್ಲಿ ಹೂಟಿಯ ಕೆಲಸ ಮತ್ತು ನೇಜಿ ನೆಡುವ ಕೆಲಸ ಹಾಗೇ ಉಳಿದುಕೊಂಡಿತ್ತು.

ಗದ್ದೆಯ ಹತ್ತಿರ ಬಂದ ಗಣೇಶ ಅಲ್ಲೇ ಇದ್ದ ಹುಣಿಸೇಮರದ ಕೆಳಗೆ ಇರಿಸಿದ್ದ ನೇಗಿಲನ್ನು ಎತ್ತಿಕೊಂಡು ಕೋಣಗಳಿಗೆ ಕಟ್ಟಿ ಅವುಗಳನ್ನು ಗದ್ದೆಗೆ ಇಳಿಸಿದ. ಕೆಸರು ನೀರನ್ನು ನೋಡಿದ ಕೋಣಗಳಿಗೆ ಎಲ್ಲಿಲ್ಲದ ಖುಷಿ. ಅವನಿಗೂ ಎಲ್ಲಿಲ್ಲದ ರೋಷ. ಹಗ್ಗವನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ಚಾಟಿಯೆತ್ತಿಕೊಂಡು "ಹೇ ಹೇಯರ್...." ಎಂದ ಜೋರಾಗಿ. ಕೆಸರಿನ ಗದ್ದೆಯಲ್ಲಿ ಹೆಜ್ಜೆ ಹಾಕಿದವು ಕೋಣಗಳು. ಅವುಗಳ ಹಿಂದೆ ಹೆಜ್ಜೆ ಹಾಕಿದ ಗಣೇಶ.

"ನಿನ್ನ ಕಾಲು ಹಿಡಿದು ಬೇಡಿಕೊಳ್ಳೇನೆ, ಅಪ್ಪ. ಗದ್ದೆಯ ಕೆಲಸಗಳಿಗೆ ನನ್ನನ್ನು ಕಳುಹಿಸಬೇಡ. ನನ್ನಿಂದ ಸಾಧ್ಯವೇ ಇಲ್ಲ" ಎಂದು ಅನೇಕ ಬಾರಿ ಗೋಗರೆದಿದ್ದ ತಂದೆಯ ಎದುರಿನಲ್ಲಿ. ಆದರೆ ತಂದೆ ಕೃಷ್ಣಯ್ಯ ನಿರ್ಲಿಪ್ತನಾಗಿದ್ದ.

ಈ ಸ್ಥಳದ ಒಡತಿಯಾದ ಕೂಡುಹುಬ್ಬಿನ ಸುಮಿತ್ರ ಒಂದು ದಿನ ಗಣೇಶನ ಆಯಾಸಗೊಂಡ ಸೋತ ಮುಖವನ್ನು ನೋಡಿ ಕನಿಕರದ ನೋಟವನ್ನು ಬೀರಿ ಅಂದಿದ್ದಳು:

"ಶಾಲೆಯನ್ನು ಬಿಡಿಸಿಬಿಟ್ರೆ ಅಂತ ಬೇಸರಿಸಬೇಡ, ಗಣೇಶ. ನಮಗೆಲ್ಲ

ನೀನು ಓದಿ ದೊಡ್ಡವನಾಗಬೇಕು ಅಂತ ಆಸೆ. ಏನ್ಮಾಡೋದು ಹೇಳು? ಇಲ್ಲಿ ಕೆಲಸದವರು ಸಿಗುವದೂ ಕಷ್ಟ. ಅಲ್ಲದೆ ನಿನ್ನ ತಲೆಗೆ ಓದು, ವಿದ್ಯೆ ಅಷ್ಟು ಬೇಗನೆ ಹಿಡಿಸುವದಿಲ್ಲ."

"ಯಾರು ಹೇಳಿದರು ದೊಡಮ್ಮ?" ಗಣೇಶನ ಕಣ್ಣುಗಳಲ್ಲಿ ವಿಶ್ವಾಸದ ಬೆಳಕು ಮಿಂಚಿತ್ತು, "ನಾಲ್ಕು ವಿಷಯಗಳಲ್ಲಿ ಎಲ್ಲರಿಗಿಂತ ಹೆಚ್ಚಿನ ಮಾರ್ಕ್ಸ್ ತೆಗೆದುಕೊಂಡು ಏಳನೆಯ ಕ್ಲಾಸ್‌ನ ವರೆಗೆ ಎಲ್ಲಿಯೂ ಫೇಲಾಗದೆ ಓದಿಕೊಂಡು ಬಂದಿದ್ದೇನೆ. ಬೇಕಿದ್ದರೆ ಅಪ್ಪನ ಹತ್ರವೇ ಕೇಳು."

"ಹತ್ತು ಸಲ ಉರುಹಾಕಿ ಹೇಗ್ಹೇಗೋ ಪಾಸಾಗ್ತಿಯಾ ಎಂದು ನಿನ್ನ ಅಪ್ಪ ಅಂತ ಅನ್ನಿಸಿಕೊಂಡವರು ಹೇಳಿದ್ದಾರೇನೋ ನಿಜ." ಸುಮಿತ್ರ ಮಾತಿಗೆ ಬೆಣ್ಣೆ ಸವರಿ ರಾಗ ಎಳೆದಳು: "ನೀನೇ ನೋಡಿದ್ದೀಯಲ್ಲ, ಈಗೆಲ್ಲ ಎಷ್ಟು ಕಲಿತರೂ ಒಂದೇ. ನೌಕರಿಗಾಗಿ ಪರದಾಟ ತಪ್ಪಿದ್ದಲ್ಲ. ನಿಜವಾದ ವಿದ್ಯೆ ಅನ್ನುವದು ನಾಲ್ಕು ಗೋಡೆಗಳ ಮಧ್ಯೆ ಕಲಿತುಬರುವಂತಹದಲ್ಲ. ನಮ್ಮನಮ್ಮ ಬದುಕಿನ ಪರಿಸರಕ್ಕೆ ಹೊಂದಿಕೊಂಡು ಕಲಿಯುವಂತಹದು ಬಹಳಷ್ಟಿದೆ. ನೀನು ಅದನ್ನೆಲ್ಲ ಮೊದಲು ಕಲ್ತುಕೋ."

ಸುಮಿತ್ರ ಅವನನ್ನು ಶಾಲೆಯಿಂದ ಬಿಡಿಸಿ ಹಳ್ಳಿಯ ಕಷ್ಟದ ಕೆಲಸಗಳಿಗೆ ಹಚ್ಚಿದಾಗ ಹೌಹಾರಿಹೋದ ಗಣೇಶ. ತಂದೆಯನ್ನು ಹಗಲಿರುಳೂ ಬೇಡಿಕೊಂಡ. ಶಾಲೆಗೆ ಹೋಗದೆ ತನಗೆ ಒಗ್ಗದ ಕೆಲಸಗಳನ್ನು ಮಾಡುವ ಇಷ್ಟವಿರಲಿಲ್ಲ ಅವನಿಗೆ. ಕೃಷ್ಣಯ್ಯನಿಗೂ ಹುಡುಗ ಕಲಿಯಲಿ ಎಂಬ ಆಸೆಯೂ ಇತ್ತು. ಆದರೆ ಸುಮಿತ್ರಳದು ನೇರನುಡಿ, "ಮನಸ್ಸಿದ್ದರೆ ಇಲ್ಲಿರಲಿ, ಇಲ್ಲವಾದರೆ ಅವನಿಗೆ ಎಲ್ಲಿ ಇಷ್ಟವೋ ಅಲ್ಲಿಗೆ ಹೋಗಲಿ!"

ಗಣೇಶ ಅಜ್ಜನ ಮನೆಯವರೆಗೂ ತನ್ನ ದೂರನ್ನು ತೆಗೆದುಕೊಂಡು ಹೋದ. "ನಿನ್ನ ಜವಾಬ್ದಾರಿಯೆಲ್ಲವೂ ಕೃಷ್ಣಯ್ಯನ ಮೇಲಿರುವದರಿಂದ ನಾವ್ಯಾಕೆ ನಡುಮಧ್ಯೆ?" ಎಂದ ಅಜ್ಜ ಗಂಗಯ್ಯ.

ದೊಡ್ಡಮಾವ ನಾಗಪ್ಪಯ್ಯ ಸ್ವರ ಏರಿಸಿದ: "ಸುಮಿತ್ರ ಹೇಳಿದಂತೆ ಕೇಳಿಕೊಂಡಿರು, ಬೆಪ್ಪತಕ್ಕಡಿ!....ನಾಳೆ ಅವಳು ನಮ್ಮನ್ನು ದೂರುವದು ಬೇಡ."

ಸಣ್ಣಮಾವ ಶೀನಪ್ಪಯ್ಯ "ಇವ ಎತ್ಲಾಗೆ ಹೋದರೂ ಯಾರಿಗೇನಂತೆ.

ನಮಗೆಂತದಕ್ಕೆ ಇಲ್ಲದ ತಲೆಬಿಸಿ" ಎಂದ ಅವನಿಗೆ ಕೇಳಿಸುವಂತೆ.

ಗಣೇಶ ಇನ್ನಷ್ಟು ತಬ್ಬಿಬ್ಬಾಗಿಹೋದ. ಏನಾಶ್ಚರ್ಯ! ಅಕ್ಕ ತೀರಿ ಹೋದಾಕ್ಷಣ ಪರಿಸ್ಥಿತಿ ಎಷ್ಟೊಂದು ಬದಲಾಗಿ ಹೋಯಿತು? ಅವನಿಗೇ ಅರ್ಥವಾಗಲಿಲ್ಲ.

'ಹೇ ಹೇಂಯ್....' ನೇಗಿಲನ್ನು ಹಿಡಿದುಕೊಂಡ ಗಣೇಶ ಚಾಟಿಯಿಂದ ನಾಲ್ಕು ಬಾರಿಸಿದ ಕೋಣಗಳ ಬೆನ್ನಮೇಲೆ. ಕೆಸರುಗದ್ದೆಯಲ್ಲಿ ಮುಂದುವರಿದ ಕೋಣಗಳನ್ನು ನೋಡುತ್ತ ಮೂರನೆಯ ಕೋಣನಂತೆ ಇರುವ ತಾನೂ ತನ್ನೊಳಗೇ ಹುಚ್ಚಿನ ಉತ್ಸಾಹವನ್ನು ತುಂಬಿಸಿಕೊಳ್ಳಲು ಪ್ರಯತ್ನಿಸಿದ. 'ಪಾತರಗಿತ್ತಿ ಪಕ್ಕ, ನೋಡಿದೇನೇ ಅಕ್ಕ' ಎಂದು ಹಾಡನ್ನು ತನ್ನಲ್ಲೇ ಗುಣುಗುಣಿಸುತ್ತಿದ್ದಂತೆ ಮೂಡಲಮನೆಯಿಲ್ಲಿ ಪೂರ್ಣ ಬೆಳಗಾಗಿ ನೇಸರಿನ ಎಳೆಯ ಕಿರಣಗಳು ಗದ್ದೆಯುದ್ದಕ್ಕೂ ಹರಡಿನಿಂತವು. ಅವನ ಕೈಕಾಲುಗಳು ಪೂರ್ಣ ಸೋಲಲಾರಂಭಿಸಿದವು. ಇನ್ನೆಷ್ಟು ಹೊತ್ತು ಕೆಸರಿನಲ್ಲಿ ಹೀಗೆ ಹೆಜ್ಜೆ ಹಾಕಬೇಕು? ಅವನಿಗೆ ಸುಮಿತ್ರಳ ಮೇಲೆ ಎಲ್ಲಿಲ್ಲದ ಕೋಪ ಉಕ್ಕಿಬಂದಿತು. ಒಂದಿಷ್ಟು ಬುದ್ಧಿಯಿಲ್ಲ ಅವಳಿಗೆ. ತನ್ನ ಪಾಡಿಗೆ ತಾನಿರುವವನ್ನು ಬಿಟ್ಟು ತನ್ನನ್ನು ಅಪ್ಪನನ್ನು ಎಷ್ಟು ಕಷ್ಟಕ್ಕೆ ಸಿಲುಕಿಸಿಬಿಟ್ಟಳಲ್ಲ? ಆದರೆ ಅಪ್ಪ ಯಾಕೆ ಹೀಗಾದ? ಒಂದೇ ಒಂದು ಮಾತನ್ನೂ ಅವಳಿಗೆ ಹೇಳುವದೇ ಇಲ್ಲ. ತಾನು ಬೆಳಗ್ಗೆ ಏಳಲಿಲ್ಲವೆಂದು 'ಹೋಗಿ ಒಂದು ಕೊಡಪಾನ ನೀರು ಸುರಿ!' ಎಂದು ಅಬ್ಬರಿಸಿದ್ದಾನೆ. ಛೀ! ಯಾಕೆ ಎಲ್ಲರಿಗೂ ತನ್ನ ಮೇಲೆ ಸಿಟ್ಟು?

ಅವನೂ ಸಿಟ್ಟಿನಿಂದ ಚಾಟಿಯನ್ನು ಎತ್ತಿ ಬೀಸಿದ ಮೂಕಪಶುಗಳ ಮೇಲೆ. ಇನ್ನೂ ಹದಿಮೂರರಗಡಿಯಲ್ಲಿ ಕಾಲಿರಿಸಿದ್ದ ಗಣೇಶ ತನ್ನ ಸುತ್ತಲಿನ ಜಗತ್ತನ್ನು ಸರಿಯಾಗಿ ಅರಿತವನಲ್ಲ. ತಾಯಿಯ ಮೃದು ಅಪ್ಪಿಕೆ, ಸ್ನೇಹಮಯ, ವಾತ್ಸಲ್ಯಮಯದ ತೊಡ್ಡಿಕೆಯಲ್ಲಿ ಕಣ್ಣು ಮುಚ್ಚಿಕೊಂಡೇ ತನ್ನ ಹನ್ನೆರಡು ವರ್ಷಗಳನ್ನು ಕಳೆದಿದ್ದಾನೆ. ಯಾವ ಕೊರತೆಯನ್ನೂ ಕಾಣದ ಆ ದಿನಗಳು ಅವನ ಪಾಲಿಗೆ ಚೇತೋಹಾರಿಯಾಗಿತ್ತು. ಶಾಲೆ, ಗೆಳೆಯರು, ಮನೆ ಇವಿಷ್ಟು ಅವನ ಜಗತ್ತು. ಅದರಾಚೆ ಇನ್ನೇನೂ ಇರಲಿಲ್ಲ. ಅವನ ಕೂದಲಿಗೂ ನೋವಾಗದಂತೆ ನೋಡಿಕೊಳ್ಳುತ್ತಿದ್ದ ಅಕ್ಕನಿಗೆ ಶಂಕರ ಮತ್ತು ಸುನಂದೆಯರಿಗಿಂತ ಅವನ ಮೇಲೆಯೇ ಭರವಸೆ ಅಧಿಕ.

ಆಗಾಗ ಅವನ ವಿಷಯದಲ್ಲಿ ಕೇಳಿಬರುತ್ತಿತ್ತು ಅಪಸ್ವರ. ಅದೇನು ಹೇಳಿಕೊಳ್ಳುವಂತಹ ದೊಡ್ಡ ಸಂಗತಿಯಲ್ಲ. ಅಪಸ್ವರದ ಎಳೆಗಳನ್ನಲ್ಲಿ ಅಲ್ಲಲ್ಲೇ ಹೊಸಕಿಬಿಡುತ್ತಿದ್ದಳು ಅಕ್ಕ. ತನ್ನ ಎಚ್ಚರಿಕೆಯ ಕಣ್ಣುಗಳಿಗೆ ಕಸಬೀಳುವುದು ಬೇಕಿರಲಿಲ್ಲ. ಒಂದು ಬಾರಿ ನಾಗಪ್ಪಯ್ಯ,

"ಇನ್ನೂ ಇವನು ಯಾಕೆ ನಿನಗೆ? ಈಗೇನೋ ಸರಿ, ದೊಡ್ಡವನಾದ್ಮೇಲೆ ಕಷ್ಟ. ಸುಮ್ಮನೆ ಅನಾಥಾಶ್ರಮಕ್ಕೆ ಸೇರಿಸಿಬಿಡು!" ಎಂದಾಗ ಕೋಪದಲ್ಲಿ ಉರಿದಿದ್ದಳು ಅಕ್ಕ:

"ಅನಾಥಾಶ್ರಮಕ್ಕೆ ಸೇರಿಸಲು ಇವನೇನು ಹೆಳವನೇ? ಕುರುಡನೇ? ರೋಗಿಷ್ಠನೇ? ಶ್ರೀಮಂತರ ಮಡಿಲಲ್ಲಿ ಬೆಳೆಯಬೇಕಾದವ. ಇನ್ಮೇಲೆ ಈ ಬಗ್ಗೆ ಚಕಾರ ಎತ್ತಬೇಡ, ಅಣ್ಣಯ್ಯ...."

ಅಜ್ಜನ ಮನೆಗೆ ಹೋದಾಗಲೆಲ್ಲ ಅಲ್ಲಿಯವರು ಶಂಕರ ಸುನಂದೆಯರಂತೆ ತನ್ನನ್ನು ನೋಡಿಕೊಳ್ಳುವುದಿಲ್ಲ ಎಂದು ಭಾಸವಾಗುತ್ತಿತ್ತು. ತನ್ನಿಂದ ಅವರೆಲ್ಲ ಏನೋ ಮುಚ್ಚಿಡುತ್ತಿದ್ದಾರೆ ಎಂಬ ಸಂಶಯ. ಆದರೆ ಪಾಪ, ಅಕ್ಕನನ್ನು ಕೇಳಿದರೆ "ನಿಂಗೆಲ್ಲೋ ಭ್ರಮೆ. ಎಲ್ಲರಿಗೂ ನೀನೆಂದರೆ ಬಹಳ ಇಷ್ಟ––" ಎನ್ನುತ್ತಿದ್ದಳು ನಗುತ್ತ.

ಕೃಷ್ಣಯ್ಯನಿಗೆ ಇದ್ದದ್ದು ಮಂಗಳೂರಿನಲ್ಲಿ ಒಂದು ಸಣ್ಣ ಚಹದಂಗಡಿ. ಜನಸಂಚಾರವಿರುವ ಸ್ಥಳವಾದರೂ ಅವನ ಚಹದಂಗಡಿಯಲ್ಲಿ ವ್ಯಾಪಾರ ಅಷ್ಟಕ್ಕಷ್ಟೇ. ಬಿದಿರುಗಳ ಕಂಭ, ಸೋಗೆಮಾಡು, ತೆಂಗಿನ ತಟ್ಟೆಗಳನ್ನು ಮುಚ್ಚಿದ ಗೂಡಂಗಡಿ ಅದು. ಒಳಗೆ ಬಣ್ಣ ಮಾಸಿದ ಮೂರುನಾಲ್ಕು ಬೆಂಚು, ಕುರ್ಚಿಗಳು. ವ್ಯವಸ್ಥಿತ ಪಿಂಗಾಣಿ ಬಟ್ಟಲುಗಳಾಗಲೀ, ಪ್ಲೇಟು, ಗಾಜಿನ ಲೋಟಗಳಾಗಲೀ ಅಲ್ಲಿರಲಿಲ್ಲ. ಬರುವ ಗಿರಾಕಿಗಳನ್ನು ಮೆಚ್ಚಿಸುವ, ಓಲೈಸುವ ಯಾವ ಬುದ್ಧಿವಂತಿಕೆಯೂ ಇರಲಿಲ್ಲ. ಮಾಡುವ ತಿಂಡಿ, ಚಹಗಳ ರುಚಿಯೂ ಅಷ್ಟಕ್ಕಷ್ಟೆ. ಈ ಕಾರಣದಿಂದಲೋ ಅಥವಾ ಇನ್ನಾವುದೋ ಕೊರತೆಯಿಂದಲೋ ಚಹದಂಗಡಿ ಹುಟ್ಟಿದಂದಿನಿಂದ ಯಾವ ಹೊಸ ರೂಪವನ್ನೂ ತಳೆಯಲಿಲ್ಲ! ಅಂಗಡಿಯ ಹಿಂಭಾಗದಲ್ಲಿ ಒಂದು ಸೋಗೆಯ ಮಾಡನ್ನು ಇಳಿಸಲಾಗಿತ್ತು. ಅಲ್ಲಿ ಸಂಸಾರದ ವಾಸಕ್ಕೆ ಏರ್ಪಾಟು.

ಅಕ್ಕ ತನ್ನ ಮೂರು ಮಕ್ಕಳೊಡನೆ ಚಹದಂಗಡಿಯ ಹಿಂಭಾಗದ ಒಂದು

ಕೋಣೆಯ ಮನೆಯಲ್ಲಿ ಯಾವ ಕೊರತೆಯನ್ನೂ ಕಾಣದೆ ಕಳೆದಿದ್ದಾಳೆ ದಿನಗಳನ್ನು. ಒಲೆಯ ಮುಂದೆ ಕುಳಿತು ಚಹದಂಗಡಿಗೆ ಬೇಕಾದ ತಿಂಡಿತಿನಿಸುಗಳನ್ನು ತಯಾರಿಸಿ ಕೊಟ್ಟಿದ್ದಾಳೆ. ಒಲೆಯ ಮುಂದೆ ಕುಳಿತು ತಿಂಡಿ ತಯಾರಿಸುವಾಗ, ಕೃಷ್ಣಯ್ಯ ಚಹವನ್ನು ಸೊರಭರ ಸದ್ದು ಮಾಡುತ್ತ ಗಿರಾಕಿಗಳ ಎದುರು ಬಟ್ಟಲಿನಲ್ಲಿ ಇಡುವಾಗ, ಯಾವ ಗಿರಾಕಿಗಳೂ ಇಲ್ಲದೆ ಸುಮ್ಮನೆ ನೊಣ ಹೊಡೆಯುತ್ತ ಕುಳಿತುಕೊಳ್ಳುವಾಗ ಅಕ್ಕು ತನ್ನ ಮೂವರು ಮಕ್ಕಳತ್ತ ಕರುಣೆಯ ನೋಟ ಬೀರುತ್ತಿದ್ದಳು. ಇರುವ ಒಬ್ಬಳೇ ಮಗಳು ಸುನಂದಳ ಭವಿಷ್ಯದಲ್ಲಿ ಅವಳಿಗೆ ಹೆದರಿಕೆಯಿಲ್ಲ. ಇದ್ದದ್ದು ಗಣೇಶ ಮತ್ತು ಶಂಕರರ ಮೇಲೆ. ಅವರಿಬ್ಬರೂ ಇಂತಹ ವೃತ್ತಿಗೆ ಇಳಿಯದೆ, ಓದಿ ದೊಡ್ಡ ನೌಕರಿಯನ್ನು ಮಾಡಲಿ ಎಂಬ ಆಸೆ. ಕೃಷ್ಣಯ್ಯನಂತೆ ಆಗಬಾರದು ಎಂಬ ಚಿಂತೆ.

ಕ್ಲಾಸಿನಲ್ಲಿ ಎರಡು ಅಂಕ ಕಡಿಮೆ ತೆಗೆದುಕೊಂಡು ಪಾಸಾದರೆ ಸಾಕು, ಗದರಿಕೊಳ್ಳುತ್ತಿದ್ದಳು ಅಕ್ಕು, "ಏಯ್....!" ನಮ್ಮ ಮನೆಯವರೆಲ್ಲ ಕಲಿಯೊದ್ರಲ್ಲಿ ಜೀರೋ ಮಾರ್ಕ್ಸ್ ತೆಗೆಯುವಷ್ಟು ಗಟ್ಟಿಗರು! ನೀನೊಬ್ಬನಾದರೂ ಚೆನ್ನಾಗಿ ಓದಿ ಕ್ಲಾಸಿಗೆ ಮೊದಲನೆಯವನಾಗಿ ಬಾ. ಎಲ್ಲಿಯಾದರೂ ಒಂದು ಕ್ಲಾಸಿನಲ್ಲಿ ನಾಪಾಸು ಆದಿ ಅಂದ್ರೆ ಮತ್ತೆ ನೋಡು!....ಗೊಬ್ಬರ ಹೊರಲು ಕಳಿಸ್ತೇನೆ ನಿನ್ನನ್ನು...."

ಆಗ ಅಮ್ಮನ ಮುಖವನ್ನು ನೋಡಿ ಕಿಲಕಿಲನೆ ನಗುತ್ತಿದ್ದ ಗಣೇಶ. ಅವನ ಮುದ್ದಾದ ನಗುವಿಗೆ ಮನಸೋತ ಅಕ್ಕು ಅವನನ್ನು ತನ್ನತ್ತ ಎಳೆದುಕೊಂಡು ನೆತ್ತಿಯನ್ನು ಮುದ್ದಿಸಿ "ಕಟ್ಟಪೋರ! ನೀನು ಎಷ್ಟು ಚೆಂದವಾಗಿದಿಯಲ್ಲೊ?" ಎನ್ನುತ್ತಿದ್ದಳು. ಶಂಕರನಿಗಿಂತ ಅವನ ಮೇಲೆಯೇ ಅಧಿಕ ಪ್ರೀತಿ ವ್ಯಕ್ತಪಡಿಸುವಾಗ ಕೃಷ್ಣಯ್ಯ ಎಚ್ಚರಿಸುತ್ತಿದ್ದ ಹೆಂಡತಿಯನ್ನು:

"ಅತಿಪ್ರೀತಿ, ಅತಿಮುದ್ದು ಯಾವಾಗಲೂ ಒಳ್ಳೆಯದಲ್ಲ, ಅಕ್ಕು."

ಕೆಸರಿನಲ್ಲಿ ಕಾಲನ್ನು ಎತ್ತಿ ಎತ್ತಿ ಇಡುತ್ತ, 'ಹೋ ಹೋ ಹೊಯ್' ಎಂದು ಜೋರಾಗಿ ಸದ್ದು ಮಾಡುತ್ತ ಚಾಟಿಯಿಂದ ಕೋಣಗಳನ್ನು ಬಡೆಯುತ್ತ ಮುಂದೆ ನಡೆಯುತ್ತಿದ್ದ ಗಣೇಶನ ನೆನಪು ಸರಿದಿತ್ತು ಹಿಂದಕ್ಕೆ.

ಕೃಷ್ಣಯ್ಯ ಆಗಾಗ ಅವನ ಬಗ್ಗೆ ಏನಾದರೊಂದು ಹೇಳುವದಿತ್ತು, ರೇಗಿಕೊಳ್ಳುವದೂ ಇತ್ತು. ಅಪ್ಪನಿಗೆ ತನಗಿಂತ ಶಂಕರ, ಸುನಂದೆಯ ಮೇಲೆ

ಪ್ರೀತಿ ಹಬ್ಬಿದೆ ಎಂದು ಯಾವಾಗಲೋ ಅರ್ಥವಾಗಿತ್ತು ಅವನಿಗೆ. ಎಷ್ಟಿದ್ದರೂ ಅವರಿಬ್ಬರೂ ಕಿರಿಯರು. ಅವರ ಮೇಲೆ ಪ್ರೀತಿ ಹೆಚ್ಚು ಎಂದುಕೊಂಡಿದ್ದಾನೆ. ಚಹದಂಗಡಿಯಲ್ಲಿ ತಂದೆಯ ಜೊತೆ ಕುಳಿತಾಗ ಅಲ್ಲಿಗೆ ಬಂದ ಗಿರಾಕಿಗಳು ಅನೇಕರು, "ಇವನು ನಿನ್ನ ಮಗನೇ?" ಎಂದು ಕೇಳುತ್ತಿದ್ದರು ಅಚ್ಚರಿಯಲ್ಲಿ. ಆಗ ಕೃಷ್ಣಯ್ಯ, "ಹೌದು" ಎಂದು ತಲೆಯಲ್ಲಾಡಿಸುತ್ತಿದ್ದ.

ಹಾಗೆ ನೋಡಿದರೆ ಕೃಷ್ಣಯ್ಯನ ಯಾವ ರೂಪವನ್ನೂ ಪಡೆದಿರಲಿಲ್ಲ ಗಣೇಶ. ಹೇಳಿಕೊಳ್ಳುವಂತಹ ದೃಢಕಾಯನಲ್ಲದ ಕೃಷ್ಣಯ್ಯನದು ಬಿದಿರಿನಂತೆ ಕೋಲುಮುಖ, ಉಬ್ಬಿದ ಹಣೆ, ಒರಟಾದ ಕೆಂಚುಕೂದಲು, ಇಲಿ ತಿಂದಂತಹ ಮೀಸೆ, ಕುರುಚಲು ಗಡ್ಡ, ಹರಕು ಪಂಚೆ, ಮಾಸಿದ ಬನಿಯನ್‌ನಲ್ಲಿ ರೋಮ ಭರಿತವಾದ ದೇಹ. ಬಿಲ್ಲಿನಂತೆ ಬಗ್ಗಿದ ಅಟ್ಟೆಕಾಲುಗಳು. ಶಂಕರ ಮತ್ತು ಸುಸಂಪ ತಂದೆಯಿಂದ ಈ ಎಲ್ಲ ರೂಪಗಳನ್ನು ಅಷ್ಟಿಷ್ಟು ಹಂಚಿಕೊಂಡಿದ್ದರು. ಗಣೇಶನಿಗೆ ಅಕ್ಕುವಿನ ಹೋಲಿಕೆಯೂ ಇದ್ದಿರಲಿಲ್ಲ. ಸಾಧಾರಣ ಬಿಳಿಬಣ್ಣದ ದೃಢವಾದ ಮೈಕಟ್ಟಿನ ಅಂದವಾದ ಮುಖಲಕ್ಷಣಗಳನ್ನು ಪಡೆದ ಹುಡುಗನಿಗೆ ಇದ್ದ ದೊಡ್ಡ ದೋಷವೆಂದರೆ ಅಗಲವಾದ ಗೆರಸೆ ಕಿವಿಗಳು. ಅವನ ತುಂಬಿದ ಮುಖಕ್ಕೆ ಗೆರಸೆಯಂತಹ ಕಿವಿಗಳೂ ಚೆನ್ನಾಗಿ ಒಪ್ಪುತ್ತವೆಯೆಂದು ಅಕ್ಕುವಿನ ಹೇಳಿಕೆ.

"ನೀನು ಹೆಣ್ಣಾಗಿ ಹುಟ್ಟಿದ್ದರೆ ಗಂಡಸರ ದಂಡು ನಿನ್ನ ಕಾಲಿಗೆ ಬಂದು ಅಡ್ಡಬೀಳ್ತ ಇತ್ತಲ್ಲೋ" ಎನ್ನುತ್ತಿದ್ದಳು ಮಗನ ಮುಖವನ್ನೇ ನೋಡುತ್ತ.

"ಹೋ ಗಣೇಶಾ....ಈ ಚಳಿಯಲ್ಲಿ ಗದ್ದೆ ಉಳ್ತಾ ಇದ್ದೀಯೇನೋ?" ಮರಗಳ ಗುಂಪಿನ ಮರೆಯಿಂದ ಹೊರಬಂದ ನರಹರಿಯ ಸ್ವರ ಎಚ್ಚರಿಸಿತು ಅವನನ್ನು.

"ನಾ ಎದ್ದದ್ದೇ ಈಗ. ಹೊರಕಡೆಗೆ ಹೋದ್ರೂ ಬಿಡಲಾರದ ಚಳಿ. ನೀ ಅದ್ಹೇಗೆ ಕೆಲ್ಸ ಮಾಡ್ತಿಯಪ್ಪೋ?" ನರಹರಿ ಚಡ್ಡಿಯ ಗುಂಡಿಗಳನ್ನು ಸರಿ ಪಡಿಸಿಕೊಳ್ಳುತ್ತ ಕಿಸಕ್ಕನೆ ನಕ್ಕು ಗದ್ದೆ ಏರಿ ಮೇಲೆ ಬಂದು ನಿಂತ, ಅರೆಗಳಿಗೆ ಹೊತ್ತು.

"ನಂಗೆ ಚಳಿಯೂ ಒಂದೇ, ಮಳೆಯೂ ಒಂದೇ."

"ಹೌದು, ಹೌದು. ಅಮ್ಮನಿಲ್ಲದ ಕೂಸು ನೀನು. ಕಾಫಿ ತಿಂಡಿ

ಏನಾದ್ರೂ ಹೊಟ್ಟೆಗೆ ಹಾಕ್ಕೊಂಡ್ಯಾ....ಇಲ್ವಾ?"

"ಎಲ್ಲ ಗಟ್ಟಿಮಾಡಿಕೊಂಡೇ ಗದ್ದೆಗೆ ಇಳಿದದ್ದು" ಎಂದು ಉತ್ತರಿಸಿದ ಗಣೇಶನಿಗೆ ನಿಜಸ್ಥಿತಿ ಹೇಳುವ ಮನಸ್ಸಿರಲಿಲ್ಲ. ಗಟ್ಟಿಯಾದದ್ದು ಹೊಟ್ಟೆಯಲ್ಲ, ಅವನ ಮನಸ್ಸು! ಅದೀಗ ದಿನದಿಂದ ದಿನಕ್ಕೆ ಗಟ್ಟಿಗೊಳ್ಳುತ್ತ ಬಂದಿದೆ. ಏಕೆ, ಹೇಗೆ? ಒಂದೂ ಅರಿಯ. ನರಹರಿಗೆ ಅವನದೇ ಪ್ರಾಯ. ಶಾಲೆಗೆ ಶಿಸ್ತಿನಿಂದ ಹೋಗುವ ಮಧ್ಯಮವರ್ಗದ ಗೌಡರ ಮಗ. ತಾನು ಹೀಗೆ ಗದ್ದೆಗೆ ಇಳಿದಾಗಲೆಲ್ಲ ಏನಾದರೊಂದು ತಮಾಷೆಯ ಮಾತನ್ನಾಡಿ ಕೆಣಕುವುದು ಅವನ ಅಭ್ಯಾಸ. ಅವನೊಡನೆ ಮಾತನಾಡುವುದಕ್ಕಿಂತ ಮೂಕ ಕೋಣಗಳೊಡನೆ ಮಾತನಾಡುವುದು ಎಷ್ಟೋ ವಾಸಿ.

ಬೆಳ್ಳಿಪಾಡಿಗೆ ಬಂದು ಒಂದು ವರ್ಷ ಸಂದರೂ ಈ ಊರಿನ ಅವನ ಪ್ರಾಯದ ಯಾವ ಹುಡುಗನ ಜೊತೆಯಲ್ಲಿಯೂ ಬೆಸೆದುಕೊಳ್ಳಲಿಲ್ಲ ಸ್ನೇಹದ ಕೊಂಡಿ. ಅಪರಿಚಿತ ಊರು, ಅಪರಿಚಿತ ಜನರು, ತಾನು ಇಲ್ಲಿಯವನಲ್ಲ ಎಂಬ ಅಪರಿಚಿತ ಭಾವನೆಯೇ ನೆಲೆಯೂರಿದೆ ಅವನಲ್ಲಿ. ಮೊದಲು ಯಾವ ವಿಧದ ಕಷ್ಟವನ್ನೂ ಉಂಡವನಲ್ಲ ಅವನು. ಶ್ರೀಮಂತರ ಕುವರನಿಗಿರುವ ಯಾವ ಅನುಕೂಲತೆಯೂ ಇರದೇ ಇದ್ದರೂ ಬಡತನದಲ್ಲಿ ಅಮ್ಮನ ಪ್ರೀತಿಯ ಧಾರೆಯಿತ್ತು. ಉಗುರು ನೀರಿಗೆ ಅದ್ದಿಯೂ ತಿಳಿಯದವ! ಅವನ ಅಜ್ಜನ ಮನೆಯವರಿಗೆ ಗದ್ದೆಯಿತ್ತು, ಇಲ್ಲಿಯಂತೆ ಬೇಸಾಯವೂ ಇತ್ತು. ಆದರೆ ಅವನೆಂದೂ ಕೆಸರುಗದ್ದೆಗೆ ಕಾಲಿರಿಸಿದವನಲ್ಲ. ಕೋಣ ಎತ್ತುಗಳನ್ನು ನೋಡಿದರೇ ಹೆದರಿಕೆ.

ಈಗ ಹಠಾತ್ತನೆ ಮೇಲುಸ್ತರದಿಂದ ಬಿದ್ದು ಬಿಟ್ಟಿದ್ದಾನೆ ಕೆಳಗೆ. ಅವನ ಜೀವನದ ಗತಿ ಹೊಸ ತಿರುವನ್ನು ಪಡೆದಿತ್ತು ಬೆಳ್ಳಿಪಾಡಿಯಲ್ಲಿ. ಕುಡಿಯೊಡೆದು ಹಬ್ಬಬೇಕಿದ್ದ ಎಳೆ ಬಳ್ಳಿಯನ್ನು ಯಾರೋ ತುಳಿಯುತ್ತಾ ಇದ್ದಾರೆ— ಬಲಾತ್ಕಾರದಲ್ಲಿ. ಅಮ್ಮ ಬದುಕಿದ್ದರೆ ಈ ಅವಸ್ಥೆ ಒದಗಿಬರುತ್ತಿತ್ತೆ. ಅಪ್ಪನೊ ತುಂಬ ನಿಷ್ಕರುಣಿ. ಅವನ ಎರಡನೆಯ ಹೆಂಡತಿ ಸುಮಿತ್ರ. ಅವನಿಗೆ ಅಪ್ಪ ಮತ್ತು ಅವಳು ಒಂದಾಗಿ ಇರುವುದನ್ನು ನೋಡುವಾಗಲೆಲ್ಲ ಮನಸ್ಸಿನಲ್ಲಿ ಒಂದು ವಿಧದ ವಿಚಿತ್ರ ಭಾವನೆಯ ತರಂಗಗಳು. ಅದೇನೆಂದು ಅರ್ಥವಾಗುವದಿಲ್ಲ ಮುಗ್ಧ ಮನಸ್ಸಿಗೆ.

'ಅಮ್ಮ ಯಾಕೆ ಜ್ವರದಲ್ಲಿ ಕಣ್ಣು ಮುಚ್ಚಿ ನನ್ನನ್ನೂ ಶಂಕರ, ಸುನಂದೆಯನ್ನೂ ತಬ್ಬಲಿಯನ್ನಾಗಿ ಮಾಡಿಬಿಟ್ಟಳು?'—ಗಣೇಶನ ಮನಸ್ಸು ಉದ್ವಿಗ್ನಗೊಂಡಿತು, 'ಅವಳು ಮತ್ತೊಮ್ಮೆ ಬದುಕಿ ತನ್ನ ಬಳಿಗೆ ಬಂದು ಇಲ್ಲಿಂದ ಬಿಡಿಸಿಕೊಳ್ಳಬಾರದೇ....ತಾನು ಇಲ್ಲಿಂದ ಎಲ್ಲಿಗಾದರೂ ದೂರ ಹೊರಟುಹೋಗಬೇಕು...."

## 2

"ಗಣೇಶ...." ದೂರದಿಂದ ಕೇಳಿಬಂದ ಸ್ವರದಿಂದ ತಟ್ಟನೆ ತಡೆದು ನಿಂತವು ಕಾಲುಗಳು. ಹೌದು, ಇದೂ ದೊಡ್ಡಮ್ಮನ ಕರೆ. ಅವನು ತಡಮಾಡದೆ ಕೋಣಗಳನ್ನು ಅಲ್ಲಿಯೇ ಕಟ್ಟಿ ಹತ್ತಿರದ ತೋಡುನೀರಿನಲ್ಲಿ ಕೆಸರು ಮೆತ್ತಿದ ಕೈಕಾಲುಗಳನ್ನು ತೊಳೆದುಕೊಂಡು ಓಡಿಬಂದ ಮನೆಯತ್ತ.

"ಆಗಲೆ ಬಿಸಿಲೇರಿದೆ. ಎಷ್ಟು ಉತ್ತಾಯ್ತು?"—ಕೇಳಿದಳು ಸುಮಿತ್ರ.

"ಇನ್ನು ಒಂದು ಸಾಲು ಉತ್ತರ ಸಾಕು, ದೊಡ್ಡಮ್ಮ."

ಅವನು ಅಡಿಗೆಕೋಣೆಗೆ ಬಂದು ಅವನಿಗಾಗಿ ಇರಿಸಿದ್ದ ಬಟ್ಟಲಿನ ಮುಂದೆ ಕುಳಿತ. ಅರಳಿದ ಕಣ್ಣುಗಳು ನೋಡಿದವು ಬಟ್ಟಲನ್ನು. ತಂಗಳು ಅನ್ನ, ಉಪ್ಪಿನಕಾಯಿ, ನೀರುಮಜ್ಜಿಗೆ ಜೊತೆಯಲ್ಲಿ ಚಿಕ್ಕದಾದ ಒಂದು ದೋಸೆ. ಅಲ್ಲಿಯೇ ಗೋಡೆಗೊರಗಿ ಆಗತಾನೇ ದೋಸೆ ತಿಂದು ಮುಗಿಸಿ ಬಿಸಿಕಾಫಿಯನ್ನು ಕುಡಿಯುತ್ತಿದ್ದ ಕೃಷ್ಣಯ್ಯ ನೋಡಿದ ಮಗನನ್ನು.

"ಅವನಿಗೆ ದೋಸೆ ಬಹಳ ಇಷ್ಟ. ಆದರೆ ದಿನವೆಲ್ಲ ಎತ್ತಿನ ಹಾಗೆ ಇಲ್ಲಿ ದುಡೀತಾನೆ ನೋಡಿ" ಸುಮಿತ್ರ ಮಾಮೂಲಿನಂತೆ ಹೇಳಿದಳು: "ಅನ್ನಮಜ್ಜಿಗೆ ಉಂಡರೆ ಶಕ್ತಿಗೆ ಒಳ್ಳೆಯದು ಎಂದು ಅದನ್ನೇ ದಿನಾ ಬಡಿಸ್ತೇನೆ. ದಾಕ್ಷಿಣ್ಯ ಮಾಡ್ಬೇಡ ಗಣೇಶ, ಅನ್ನ ಬೇಕಿದ್ದರೆ ಇನ್ನಷ್ಟು ಹಾಕ್ತೇನೆ."

ಹಸಿದ ಉದರ. ನಾಯಿಯಾದರೂ ಹಳಸಿದ ಅವನನ್ನು ತಿನ್ನುವದಿಲ್ಲವೆ? ಅವನು ಮೌನವಾಗಿ ತುತ್ತನ್ನೆತ್ತಿಕೊಂಡ. ದೋಸೆ ಬಹಳ ರುಚಿಯಾಗಿತ್ತು. ಇನ್ನೂ ನಾಲ್ಕು ಮುಕ್ಕಬಹುದಿತ್ತು. ಆದರೆ ಯಾರು ಕೇಳುವವರು? ಕೇಳಿದರೆ ಆವರನು ಚುಚ್ಚುವಂತಹ ನುಡಿ. ಸಮಾಧಾನದ ಗರಗಸದಲ್ಲಿ ಕುಯ್ಯುತ್ತಾಳೆ ಅವನನ್ನು.

ಅಷ್ಟು ಹೊತ್ತಿಗಾಗಲೇ ಸುಮನ, ಯಮುನ ಶಾಲೆಗೆ ಸಿದ್ಧವಾಗಿದ್ದರು. ಇಬ್ಬರೂ ಇನ್ನೂ ಚಿಕ್ಕವರು. ಒಬ್ಬಳಿಗೆ ಎಂಟು, ಇನ್ನೊಬ್ಬಳಿಗೆ ಆರು. ಸುಮಿತ್ರ ಕಿರಿಯವಳಾದ ಯಮುನಳ ತಲೆ ಬಾಚುತ್ತಿದ್ದಂತೆ ಗಣೇಶ ಮುಖ ಎತ್ತಿ ನೋಡಿದ ತಂದೆಯನ್ನು.

"ಅಪ್ಪ, ಸುನಂದೆ ಈಗ ಏನು ಮಾಡುತ್ತಾಳೋ, ಹೇಗಿದ್ದಾಳೋ? ಅವಳನ್ನು ನೋಡ್ದೆ ಬೇಜಾರು ಬಂತು....ನಾನು ಹೋಗಿ ನೋಡ್ಕೊಂಡು ಬರ್ಲಾ?"

"ಬೇಸಾಯದ ಕೆಲ್ಸ ಮುಗಿಸ್ದ್ಮೇಲೆ ಹೋಸ್ಪೆಗೆ ಹೋಗಿ ಬಾ. ಸಾಧ್ಯವಾದರೆ ಇಲ್ಲಿಗೇ,ಇಬ್ಬರೂ ಬನ್ನಿ ಅಂತ ನಾನೇ ಕಾಗ್ದ ಬರೀತೇನೆ."

"ಹೋ, ಅದಿನ್ನೂ ಮಜ! ಶಂಕರ, ಸುನಂದೆ ಇಲ್ಲಿ ನಮ್ಮ ಜೊತೆಯೇ ಉಳಿದುಕೊಂಡರೆ ನಂಗೆ ಶಾಲೆಗೆ ಹೋಗದೇ ಇದ್ದರೂ ಗಮ್ಮತ್ತಾಗಿ ಇರಬಹುದು." ಮಜ್ಜಿಗೆಯನ್ನು ಕುಡಿದು ಮುಗಿಸಿ ಹೇಳಿದ ಗಣೇಶ: "ಏಳನೆಯ ಕ್ಲಾಸಿನವರೆಗೆ ಬೆಳ್ಳಿಪಾಡಿಯಲ್ಲೇ ಶಾಲೆಯಿದೆ. ಆಮೇಲೆ ಶಂಕರನಿಗೆ ನಡ್ಕೊಂಡು ಉಪ್ಪಿನಂಗಡಿಗೆ ಹೋಗಬಹುದು. ನಡೆಯಲಾಗದೇ ಇದ್ರೆ ಬೇಕಾದಷ್ಟು ಬಸ್ಸುಗಳೂ ಸಿಗುತ್ತಲ್ಲ, ಅಪ್ಪ...."

"ಏಯ್ ಕತ್ತೆ!...." ಗದರಿಕೊಂಡ ಸುಮಿತ್ರ ಹಣಿಗೆಯನ್ನು ತನ್ನ ಕೂದಲಿಗೆ ಸಿಕ್ಕಿಸಿಕೊಂಡು ಹೊರಳಿದಳು, "ಊಟವಾಗಿದ್ದರೆ ಎದ್ದು ಗದ್ದೆ ಹತ್ರ ಹೋಗು!"

'ಇವಳೊಬ್ಬಳು ಮಧ್ಯೆ ಬಂದವಳು....' ತನ್ನಲ್ಲೇ ಅಂದುಕೊಳ್ಳುತ್ತ ಬಟ್ಟಲನ್ನು ಎತ್ತಿಕೊಂಡು ನಡೆದ ಹೊರಗೆ. ತನ್ನ ಹುಡುಗಿಯರನ್ನು ನೋಡಿಕೊಳ್ಳುವ ಇವಳಿಗೆ ನನ್ನ ತಮ್ಮ, ತಂಗಿ ಹೆಚ್ಚಾಗಿಹೋದರೆ? ಪಾಪ, ಇಬ್ಬರೂ ಅಜ್ಜನ ಮನೆಯಲ್ಲಿ ಹೇಗಿರುತ್ತಾರೋ. ನಾಗಪ್ಪಯ್ಯ ಮಾವ ಬಹಳ ಜೋರು. ಇಲ್ಲಿ ದೊಡ್ಡಮ್ಮ ಬಹಳ ಸ್ವಾರ್ಥಿ. ಅಪ್ಪ ಯಾಕೆ ಹೆದರುತ್ತಾನೆ ಇವಳಿಗೆ?

ಯೋಚಿಸುತ್ತ ಗಣೇಶ ಗದ್ದೆಯತ್ತ ನಡೆದಾಗ ಕೆಲಸದ ಹೆಂಗಸರು ಆಗಲೇ ನೇಜಿ ನೆಡುವ ತಯಾರಿ ನಡೆಸಿದ್ದರು. ಅವನು ಅವಸರದಲ್ಲಿ ಗದ್ದೆಗೆ ಇಳಿದು ಉಳಲಾರಂಭಿಸಿದ. ಒಂದು ಸಾಲು ಉತ್ತು ಮುಗಿಸುತ್ತಿದ್ದಂತೆ ಹೆಂಗಸರು ಗದ್ದೆಗೆ ಇಳಿದರು ನೇಜಿ ನೆಡಲು. ಅವನು ಕೋಣಗಳನ್ನು ಮೇಲೆ ತಂದು

ತೋಡಿಗೆ ಕರೆದೊಯ್ದು ಸ್ನಾನಮಾಡಿಸಿ ಮೇಯಲು ಬಿಟ್ಟ, ಬದಿಯ ಕಾಡಿಗೆ. ತನ್ನ ಕೆಸರುಬಟ್ಟೆಯನ್ನೆಲ್ಲ ತೋಡುನೀರಿನಲ್ಲಿಯೇ ತೊಳೆದು ಸ್ನಾನವನ್ನೂ ಮುಗಿಸಿ ತಲೆಗೆ ಕಟ್ಟಿಕೊಂಡ ಬಟ್ಟೆಯನ್ನೇ ಸೊಂಟಕ್ಕೆ ಸುತ್ತಿಕೊಂಡು ಹಿಂದಿರುಗಿ ಬಂದ ಮನೆಗೆ.

ಬಟ್ಟೆ ಬದಲಾಯಿಸಿ ಕೈಯಲ್ಲೊಂದು ಕತ್ತಿ ಹಿಡಿದುಕೊಂಡು ಅಂಗಳಕ್ಕಿಳಿದಾಗ ಚುರುಕಾದವು ಅವನ ಕಿವಿಗಳು. ದೂರದ ಶಾಲೆಯಲ್ಲಿ ಗಂಟೆ ಹೊಡೆದ ಸದ್ದು ಕೇಳಿಸಿದಂತಾಯಿತು. ಯಮುನ ಹೇಳಿದ್ದಳು: "ಇವತ್ತು ಶಾಲೆಗೆ ಇನ್‌ಸ್ಪೆಕ್ಟರ್ ಬರುತ್ತಾರೆ" ಎಂದು. ಕಾಡಿನ ಏರು ಹತ್ತಿ ಇಳಿದರೆ ಸಾಕು, ಅಲ್ಲಿದೆ ಶಾಲೆ. ಒಂದು ಬಾರಿ ತಾನೂ ಅಲ್ಲಿಗೆ ಹೋಗಿ ಬಂದರೇನು? ಇನ್‌ಸ್ಪೆಕ್ಟರ್ ಹೇಗಿದ್ದಾರೆ, ಶಾಲೆ ಹೇಗಿದೆ ಎಂದು ನೋಡೋಣ....ಅವನು ತಡಮಾಡದೆ ಕತ್ತಿಯನ್ನು ಒಂದು ಮರದ ಕಾಂಡಕ್ಕೆ ಚುಚ್ಚಿಟ್ಟು ಓಟಕಿತ್ತ ಅಲ್ಲಿಂದ.

## 3

ಶಾಲೆಯ ಧ್ವಜಸ್ತಂಭದ ಹತ್ತಿರ ಬಂದಾಗ ತಡೆದು ನಿಂತವು ಕಾಲುಗಳು. ಅಲ್ಲಿಗೆ ಹೋಗಿ ತಾನೇನು ಮಾಡಲಿ? ಅಪ್ಪ ಸೇರಿಸಿಲ್ಲ ಶಾಲೆಗೆ. ಹೀಗಾಗಿ ಒಳಗೆ ಅವನಿಗಿಲ್ಲ ಪ್ರವೇಶ. ಯಾಕೋ ಒಳಗೆ ಹೋಗಬೇಕು ಎಂದೆನಿಸಿದೆ.

ಅವನು ಎಲ್ಲ ತರಗತಿಯನ್ನು ನೋಡುತ್ತ ಏಳನೆಯ ತರಗತಿಯ ಮುಂದೆ ಬಂದು ನಿಂತ. ಇನ್‌ಸ್ಪೆಕ್ಟರ್ ಬಂದಿದ್ದರಿಂದ ಮಕ್ಕಳೆಲ್ಲ ತಮ್ಮಲ್ಲೇ ಆದಷ್ಟು ಸಣ್ಣ ಸ್ವರದಲ್ಲಿ ಮಾತನಾಡುತ್ತ, ಓದುವವರಂತೆ ನಟಿಸುತ್ತ ಕುಳಿತಿದ್ದರು. ಕ್ಲಾಸ್‌ನ ಹೊರಗೆ, ಶಾಲೆಯ ಆವರಣ ಎಂದಿಗಿಂತಲೂ ಸ್ವಚ್ಛವಾಗಿತ್ತು.

ಗಣೇಶ ಕ್ಲಾಸಿನ ಹಿಂಭಾಗದ ಬಾಗಿಲಿಗೆ ಬಂದು ಅರೆಗಳಿಗೆ ನಿಂತು ಸದ್ದಿಲ್ಲದೆ ಒಳಗೆ ಬಂದು ಕೊನೆಯ ಬೆಂಚಿನಲ್ಲಿ ಕುಳಿತ. ಆಗ ಆ ಬೆಂಚಿನಲ್ಲಿ ಕುಳಿತ ಇಬ್ಬರು ಹುಡುಗರು ವಿಸ್ಮಯದಿಂದ ನೋಡಿದರು ಅವನತ್ತ. ಇವನು ಯಾರು? ಎಂದುಕೊಂಡರು. ಗಣೇಶ ತೋರಬೆರಳನ್ನು ತನ್ನ ಬಾಯಿಯ ಮೇಲಿರಿಸಿ 'ಹುಶ್' ಎಂದ.

ಅಷ್ಟರಲ್ಲಿ ಹೆಡ್‌ಮಾಸ್ತರರೂ, ಇನ್‌ಸ್ಪೆಕ್ಟರ್ ಎನ್ನುವ ಉದ್ದನೆಯ ತೆಳ್ಳಗಿನ ವ್ಯಕ್ತಿಯೂ ಪ್ರವೇಶಿಸಿದರು ಕ್ಲಾಸಿನೊಳಗೆ. ಎಲ್ಲರೂ ಎದ್ದುನಿಂತು ವಂದಿಸಿದರು ಇಬ್ಬರಿಗೂ. ನಾಲ್ಕನೆಯ ಬೆಂಚಿನಲ್ಲಿ ಕುಳಿತವನೊಬ್ಬ ಹಿಂಬದಿಯ ಸಾಲಿನಲ್ಲಿ ಅಗಲಮುಖದ ಹೊಸ ಹುಡುಗನನ್ನು ಕಂಡು ಕಣ್ಣು ಅರಳಿಸಿದ. ಬದಿಯಲ್ಲಿ ಕುಳಿತವನ ಮುಂಗೈ ತಿವಿದು ಹೆಬ್ಬೆರಳೆತ್ತಿ ಸಂಜ್ಞೆ ಮಾಡಿದ ಹಿಂದೆ ನೋಡು ಎಂದು. ಬದಿಯ ಹುಡುಗನ ಚೂಪುಮೂಗು ಇನ್ನಷ್ಟು ಚೂಪಾಯಿತು. ಕಣ್ಣುಗಳು ಅನುಮಾನದಿಂದ ಹಿಂದೆ ನೋಡಿದವು. ಬಲಗೈಯಿಂದ ತನ್ನ ಬದಿಗೆ ಕುಳಿತವನ ತೊಡೆ ಚಿವುಟಿ ತೋರಿಸಿದ.

ಹೆಡ್‌ಮಾಸ್ತರರು ಇನ್‌ಸ್ಪೆಕ್ಟರರನ್ನು ಕುಳ್ಳಿರಿಸಿ ತರಗತಿಯನ್ನು ಉದ್ದೇಶಿಸಿ ಮಾತನಾಡುವ ಮೊದಲೇ ಗುಸುಗುಸು ಎದ್ದಿತು ಕ್ಲಾಸಿನಲ್ಲಿ. ಎಲ್ಲರ ದೃಷ್ಟಿ ಇನ್‌ಸ್ಪೆಕ್ಟರರ ಮೇಲಿರಲಿಲ್ಲ. ಹಿಂದೆ ಕುಳಿತವನ ಮೇಲೆ. ಕೆಲವು ಹುಡುಗಿಯರೂ ಅತ್ತಿತ್ತ ನೋಡಿದರು. ಬಾಯಿಗೆ ಕೈಯಿಟ್ಟು ನಕ್ಕರು ತಮ್ಮಲ್ಲೇ.

ಇನ್‌ಸ್ಪೆಕ್ಟರರು ಎದ್ದು ನಿಂತಾಗ ಅಡಗಿತು ಸದ್ದು. ತಮ್ಮ ಬುದ್ಧಿಯ ಅಳತೆಗೋಲಿನಲ್ಲಿ ಮಕ್ಕಳು ಎಷ್ಟು ಬುದ್ಧಿವಂತರಾಗಿದ್ದಾರೆಂದು ಅಳೆಯಲು ಇಚ್ಛಿಸಿ ಕೇಳತೊಡಗಿದರು ಪ್ರಶ್ನೆಗಳನ್ನು. ಯಾರೋ ಒಂದಿಬ್ಬರು ತಡವರಿಸಿ ಉತ್ತರಿಸಿದರು. ಒಬ್ಬ ಪದೇಪದೇ ಹಿಂದೆ ನೋಡಿದ, ಕೆಲವರು ಮುಖವನ್ನು ಹಿಂದೆ ಮಾಡಿಯೇ ಕುಳಿತರು.

"ಅಲ್ಲೇನು ಕೋತಿ ಕುಳಿತಿದೆಯೇನ್ರೋ....ಏನು ನೋಡ್ತಿದ್ದೀರಿ?" ಮೇಜು ಗುದ್ದಿದರು ಹೆಡ್‌ಮಾಸ್ತರರು.

ಕ್ಲಾಸ್‌ನಲ್ಲಿ ಇದ್ದಕ್ಕಿದ್ದಂತೆ ಹೆಚ್ಚಿತು ಗಲಾಟೆ. ಹಿಂದೆ ಹೊರಳಿ ನೋಡಿದರು ಹುಡುಗಹುಡುಗಿಯರು. ಇಂಗು ತಿಂದ ಮಂಗನಂತೆ ಪಿಳಿಪಿಳಿ ಕಣ್ಣುಬಿಟ್ಟ ಗಣೇಶ. ತಾನು ಹುಚ್ಚನಂತೆ ಇಲ್ಲಿಗೆ ಬಂದೆನಲ್ಲ ಎಂದು ಹಳಹಳಿಸುತ್ತಿರುವಾಗಲೇ ಹೆಡ್‌ಮಾಸ್ತರರ ದೃಷ್ಟಿ ಬಿತ್ತು ಅವನ ಮೇಲೆ. "ಬಾರೋ ಇಲ್ಲಿ" ಎಂದು ಕರೆದರು ಅವನನ್ನು.

"ಸಾರ್, ಇವನು ನಮ್ಮ ಶಾಲೆಯವನಲ್ಲ" ಹುಡುಗಿಯೊಬ್ಬಳ ಕೀರಲು ಸ್ವರ ಕೇಳಿಸಿತು ಮೂಲೆಯಿಂದ.

"ಮತ್ತೆ ಇಲ್ಲಿಗ್ಯಾಕೆ ಬಂದಿದ್ದಾನಂತೆ? ಏಯ್....ಬಾ ಇಲ್ಲಿ. ಎನ್ನು

ಬಾ....ಹೂಂ...."

ಗಣೇಶ ಕುಳಿತಲ್ಲಿಂದ ಎದ್ದು ಬಂದ ಮುಂದೆ. ಹೆಡ್‌ಮಾಸ್ತರರು ಮತ್ತು ಇನ್‌ಸ್ಪೆಕ್ಟರರು ಅವನನ್ನು ಅಡಿಯಿಂದ ಮುಡಿಯವರೆಗೂ ದಿಟ್ಟಿಸಿದರು. ಲಕ್ಷಣವಾದ ಈ ಹುಡುಗ ತಲೆಸರಿಯಿಲ್ಲದೆ ಇಲ್ಲಿಗೆ ಬಂದಿರಬೇಕು ಎಂದೆನಿಸಿತು. ಹೆಡ್‌ಮಾಸ್ತರರು ಕೈಯಲ್ಲಿರುವ ದೊಣ್ಣೆಯಿಂದ ಮೇಜನ್ನು ಕುಟ್ಟಿದರು ಬಲವಾಗಿ.

"ಯಾವ ಶಾಲೆಯಲ್ಲಿ ಓದ್ತ ಇದ್ದಿ?"

"ಶಾಲೆಗೆ ಹೋಗ್ತಾ ಇಲ್ಲ....ಕಲಿಯಬೇಕು ಅಂತ ಬಹಳ ಆಸೆ.... ಊಹೂಂ...."

"ಮತ್ಯಾಕೆ ಶಾಲೆಗೆ ಸೇರಿಕೊಳ್ಳಲಿಲ್ಲ? ಎಷ್ಟನೇ ಕ್ಲಾಸಿನವರೆಗೆ ಓದಿದ್ದಿ?"

"ಏಳನೇ ಕ್ಲಾಸಿನ ತನಕ. ಆಮೇಲೆ ಓದಲು ಆಗಲಿಲ್ಲ." ಗಣೇಶ ತಡವರಿಸುತ್ತ ತನಗೆ ಕಲಿಯುವ ಆಸೆಯಿದ್ದರೂ ಮನೆಯವರ ವಿಚಿತ್ರಬುದ್ಧಿಯನ್ನು ಹೇಳಿಕೊಳ್ಳುತ್ತಿದ್ದಂತೆ ಇಡೀ ಕ್ಲಾಸು ಗೊಳ್ಳನೆ ನಕ್ಕಿತು. ಇನ್‌ಸ್ಪೆಕ್ಟರರ ಹುಬ್ಬುಗಳು ಮೇಲೇರಿದವು, ಉಗ್ರವಾಯಿತು ಮುಖ.

ಅವರು ತಮ್ಮ ಕೈಗಡಿಯಾರದತ್ತ ದೃಷ್ಟಿಹಾಯಿಸಿದರು. ಗಣೇಶನಲ್ಲಿರುವ ವಿದ್ಯಾಸಕ್ತಿಯನ್ನು ಅಳೆದು ನೋಡುವ ತಾಳ್ಮೆಯಿಲ್ಲದೆ ತಮ್ಮ ಅಮೂಲ್ಯ ಸಮಯ ಹಾಳಾಯಿತು ಎನ್ನುವಂತೆ ಮೂಗನ್ನು ಅರಳಿಸುತ್ತ ನೋಡಿದರು ಹೆಡ್‌ಮಾಸ್ತರರನ್ನು.

"ಈ ಜೀವ್‌ಕೂಫನ ಹೆಸರು ಶಾಲೆಯ ಪಟ್ಟಿಯಲ್ಲಿಲ್ಲವೆ?"

"ಇಲ್ಲ—" ನಡುಗುತ್ತ ತಲೆಯಲ್ಲಾಡಿಸಿದರು ಹೆಡ್‌ಮಾಸ್ತರರು.

"ಮತ್ತೆ ಯಾತಕ್ಕೆ ಒಳಗೆ ಬಿಟ್ಟಿರಿ? ಇದೇನು ದನದ ದೊಡ್ಡಿ ಅಂತ ತಿಳಿದಿದ್ದೀರ? ಕಿಕ್ ಹಿಮ್ ಔಟ್‌ಸೈಡ್ ದ ಕ್ಲಾಸ್!" ಎಂದು ಅಬ್ಬರಿಸಿದರು ಜೋರಾಗಿ.

ಇನ್‌ಸ್ಪೆಕ್ಟರರ ಧ್ವನಿಗೆ ಬೆಚ್ಚಿದ ಹೆಡ್‌ಮಾಸ್ತರರ ಕೈಯಲ್ಲಿದ್ದ ದಪ್ಪದ ದೊಣ್ಣೆ ಜಾರಿಬೀಳುವುದರಲ್ಲಿತ್ತು. ಶಾಲೆಯ ಬಗ್ಗೆ ಅಲ್ಲಸಲ್ಲದ ರಿಪೋರ್ಟನ್ನು ಬರೆದರೆ ತಮ್ಮ ಮುಂಬರ್ತಿಗೆ ಕುಂದು. ಇವನ್ಯಾವನೋ ಅರೆಸಿರಿಕಿಯಿಂದ ತಮ್ಮ ಶಾಲೆಯ ಘನತೆ ಇಳಿಯಬಾರದು. ಅವರು ಕೈಯಲ್ಲಿದ್ದ ದೊಣ್ಣೆಯನ್ನು

ಸಂಪಾದಿಸಿಕೊಂಡು ಇನ್ನೇನು ಗಣೇಶನನ್ನು ಥಳಿಸಬೇಕು....ಆದರೆ ನೋಡು ತ್ತಾರೆ....ಯಾವಾಗಲೋ ಅವನು ಕ್ಲಾಸಿನಿಂದ ಮಾಯವಾಗಿದ್ದಾನೆ! ಅಂಬಿನಂತೆ ಚಿಮ್ಮಿ ಹೊರಟುಹೋಗಿದ್ದಾನೆ. ಬೆವರಿಳಿದಹಣೆ ನೆಲ ನೋಡಿತು.

ಶಾಲೆಯ ಆವರಣವನ್ನು ದಾಟಿ ಹೊರಗೆ ಬಂದ ಗಣೇಶನಿಗೆ ತಾನು ಹಾಗೆ ಓಡಿಬರಬಾರದಿತ್ತು, ಕ್ಲಾಸಿನಲ್ಲೇ ಇರಬೇಕಿತ್ತು ಎಂದೆನಿಸಿತು. ತನ್ನನ್ನು ಇರಗೊಡದೆ ಹೆಡ್‌ಮಾಸ್ತರರ ಬೆತ್ತದ ರುಚಿ ಸವಿಯುವುದು ಅವನಿಗೆ ಬೇಕಿರಲಿಲ್ಲ. ತುಫ್ ಎಂದು ನೆಲಕ್ಕೆ ಉಗುಳಿ ಕಾಲಪ್ಪಳಿಸುತ್ತ ಸನಿಹದಲ್ಲಿದ್ದ ಆಲದ ಮರದ ಕೆಳಗೆ ಬಂದಾಗ ಏನನ್ನಿಸಿತೋ, ನಾಲ್ಕಾರು ಕಲ್ಲುಗಳನ್ನು ಎತ್ತಿ ಕೊಂಡು ಬೀಸಿಬೀಸಿ ಒಗೆದ ಶಾಲೆಯ ಹಂಚಿನ ಮಾಡಿನ ಮೇಲೆ. ಹಂಚಿನ ಸದ್ದಿಗೆ ಎಚ್ಚತ್ತ ಶಾಲೆಯ ಜವಾನ, ಒಬ್ಬರು ಮಾಸ್ತರರ ತಲೆ ಕಾಣಿಸು ತ್ತಿದ್ದಂತೆ ಅವನು ಅಲ್ಲಿದ್ದ ನೀರಿನ ಸಣ್ಣ ಕುಣಿಗೆ ಹಾರಿ ಬಗ್ಗಿ, ತೆವಳಿಕೊಂಡು ಮುಂದೆ ಸರಿದು ಅನಂತರ ಓಡಿದ, ಇನ್ನು ಈ ಶಾಲೆಯ ಸುದ್ದಿಯೇ ಬೇಡ ಎಂದುಕೊಳ್ಳುತ್ತ!

## 4

ಶಾಲೆಯ ಧ್ವಜಕಂಬದಿಂದ ನೇರವಾಗಿ ನಡೆದು ಬಂದರೆ ಒಂದು ಗೋಳಿ ಮರದ ಕೆಳಗೆ ಕೆಂಪು ಅಂಚೆಡಬ್ಬಿ ಕಾಣಿಸುತ್ತದೆ. ಅದರ ಬದಿಯಲ್ಲಿ ಒಂದು ಸಣ್ಣದಾದ ಬಟ್ಟೆ ಅಂಗಡಿ, ಸೋಡ ಅಂಗಡಿ, ಶರಾಬು ಅಂಗಡಿಯೂ ಇದೆ. ಎದುರು ಕೆಂಪುಮೋರೆಯ ವಾಹನಗಳು, ಕಾರು, ಲಾರಿಗಳು ಓಡಾಡುವ ಡಾಂಬರು ರಸ್ತೆ. ಅದರಾಚೆ ಹತ್ತಾರು ಮರಗಳ ಅಂಚಿನಲ್ಲಿದೆ ಮೀಸೆ ಅಣ್ಣನ ಚಹದಂಗಡಿ. ಕೃಷ್ಣಯ್ಯ ಮೊದಲು ನಡೆಸಿಕೊಂಡಿದ್ದ ಅಂಗಡಿಯ ನೆನಪನ್ನು ತರುವ ಮಾದರಿಯಲ್ಲಿತ್ತು ಈ ಚಹದಂಗಡಿ. ಆ ಕಾರಣದಿಂದ ಸಹಜವಾಗಿ ಗಣೇಶ ಅಂಗಡಿಯಲ್ಲಿ ಕುಳಿತು ಸಮಯ ಕಳೆಯಲು ಇಷ್ಟಪಡುತ್ತಿದ್ದ.

ಮೀಸೆ ಅಣ್ಣನ ನಿಜವಾದ ನಾಮಧೇಯವೇನೆಂದು ತಿಳಿಯದು ಯಾರಿಗೂ. ಇನ್ನೂ ನಲ್ವತ್ತು ವರ್ಷ ಪ್ರಾಯದ ಅವನಿಗೆ ಮುಖದ ತುಂಬ ಎದ್ದು ಕಾಣುವ ದೊಡ್ಡದಾದ ಗಿರಿಜಾಮೀಸೆಯಿತ್ತು. ಆ ಮೀಸೆಯಿಂದಲೇ

ಉಪ್ಪವಿಸಿಸ್ತು ಹೊಸ ಹೆಸರು. ಗಣೇಶನಿಗೆ ಅವನ ಅಂಗಡಿಯಲ್ಲಿ ಕಾಲ ಮೇಲೆ ಕಾಲು ಹಾಕಿ ಕುಳಿತು ಸೊರೆಯಾದ ಬಿಸಿ ಚಹವನ್ನು ಹೀರುವವೆಂದರೆ ಎಲ್ಲಿಲ್ಲದ ಖುಷಿ.

ಇಂದು ಬೆಳಗ್ಗೆಯೇ ಮೂಗುಬಾಯಿಯಲ್ಲಿ ಎಂಜಿನ್‌ನಂತೆ ಉಸಿರು ಬಿಡುತ್ತ ಚಹದಂಗಡಿಗೆ ಬಂದ ಗಣೇಶನನ್ನು ಕಂಡು ಮೀಸೆ ಅಣ್ಣ ಚಹದ ಗ್ಲಾಸನ್ನು ಕಣಕಣಿಸಿದ. ಅವನು ಕೇಳುವ ಮೊದಲೇ ಒಂದು ಗ್ಲಾಸು ಚಹ, ಬಿಸಿಯಾದ ನೀರುಳ್ಳಿ ಭಜೆ ಎದುರಿನಲ್ಲಿ ಇಟ್ಟ.

"ಎತ್ಲಾಗಿಂದ ಬರ್ತ ಇದ್ದಿ? ಗದ್ದೆ ಹೂಟಿ ಮಾಡಿಯಾಯ್ತ?"

"ಹೂಂ...." ಚಹವನ್ನು ಹೀರಿ ಕುಡಿದು ತನ್ನಲ್ಲೇ ನಕ್ಕ ಗಣೇಶ. ಅಂದಿನ ಪೇಪರು ಅಲ್ಲಿತ್ತು. ಎತ್ತಿಕೊಂಡು ನೋಡಿದ, ಒಂದೆರಡು ಗೆರೆ ಓದಿದ. ಅವನ ಮನಸ್ಸೆಲ್ಲ ಇನ್ನೂ ಶಾಲೆಯಿಂದಲೇ ತುಂಬಿಹೋಗಿತ್ತು.

"ಪೇಪರನ್ನು ಯಾವ ಕರ್ಮಕ್ಕೆ ಓದ್ತಿಯೋ, ಮಗನೆ?" ಮೀಸೆ ಅಣ್ಣ ಬೆಂಚಿನ ಮೇಲೆ ತನ್ನ ಎರಡೂ ಕೈಗಳ ಭಾರ ಹಾಕಿ ನಿಂತು ಹೇಳಿದ. "ನಮ್ಮ ಬೆಳ್ಳಿಪಾಡಿ ಹೇಳಿಕೇಳಿ ಹಳ್ಳಿ. ಇಲ್ಲಿ ಸುದ್ದಿ ಯಾವ ರಾಜಕೀಯಕ್ಕೆ ಕಡ್ಮೆಯಿದೆ ಹೇಳು? ನೋಡ್ತ ಇದ್ದೇನೆ ನಮ್ಮೂರಿನವರ ಗುಣ. ಆಹಾಹಾ!....ಎಲ್ಲರೂ ದೊಡ್ಡ ತೋರಾಯರೇ!"

"ಏನಣ್ಣ, ನಿನ್ನ ಮಾತು ನಂಗೆ ಅರ್ಥವಾಗಿಲ್ಲ."

"ಶಾಲೆಗೆ ಅದ್ಯಾವನೋ ಪುಣ್ಯಾತ್ಮ ಬರ್ತಾನೆ ಅಂತ ಪಾಪದವರ ತಲೆ ಬೋಳು. ಅವರಿಗೆ ಸರಬರಾಜು ಮಾಡಿ ಮಾಡಿ ಉಳಿದವರ ಗೋಳು! ನನ್ನ ಕೊನೆ ಮಗ ಹೋಗ್ತಾನಲ್ಲ ಶಾಲೆಗೆ....ಏನವನ ಗಲಾಟೆ ಅಂತೀಯ."

ನೀರುಳ್ಳಿ ಭಜೆಯ ಖಾರದಿಂದ ಮೂಗಿನಲ್ಲಿ ನೀರಿಳಿಯುತ್ತಿದ್ದಂತೆ ಮೀಸೆ ಅಣ್ಣ ಹೊಸದಾಗಿ ಬಂದ ಗಿರಾಕಿಗೆ ಚಹವನ್ನು ಕೊಟ್ಟು ಗಣೇಶನತ್ತ ತಿರುಗಿದ,

"ಇವತ್ತು ಇನ್‌ಸ್ಪೆಕ್ಟರ್ ಬರ್ತಾರೆ ಅಂತ ನಾಲ್ಕು ದಿನಗಳ ಮೊದಲೇ ಅವನ ಗಲಾಟೆ. ಹೆಡ್‌ಮಾಸ್ಟರು ಒಂದೊಂದು ರೂಪಾಯಿ ತರ್ಬೇಕು ಅಂದಿದ್ದಾರೆ ಎಂದು ಜಗಳವಾಡಿ ದುಡ್ಡು ತಕ್ಕೊಂಡು ಹೋದ. ನರಪೇತಲ ಮಾಸ್ತರ ಸಣ್ಣಜ್ಜಿಲಿನ ಜೊಡ್ಡಣ್ಣನ ಹತ್ರ ನಾಲ್ಕು ಸೀಯಾಳ ತರಿಸಿದ್ನಂತೆ.

ಅಧಿಕಾರಿಗೆ ಊಟ ಹಾಕಿಸ್ಬೇಕೂ ಅಂತ ಮೇಲ್ಮನೆಯವರ ಹತ್ರ ಕಾಡಿಬೇಡಿ ನೀಯಾಳದ ಜೊತೆ ತೆಂಗಿನಕಾಯಿ, ಅಕ್ಕಿ....ಛೆ....ಛೆ!...."

"ಅಧಿಕಾರಿಯ ಹೆಸರಿನಲ್ಲಿ ಮಾಸ್ತರರ ಜೇಬಿಗಿಷ್ಟು ಕಾಸು."—ಗಣೇಶ ಜೋರಾಗಿ ನಗಲಾರಂಭಿಸಿದ.

ಅಷ್ಟರಲ್ಲಿ ಸಣ್ಣ ಹುಡುಗನೊಬ್ಬ ಅಲ್ಲಿಗೆ ಬಂದ, "ನಾಲ್ಕು ಗ್ಲಾಸು ತುಂಬ ಹಾಲು ಹಾಕಿದ ಚಹ ಮಾಡಿ ಈಗಲೇ ಕೊಡಬೇಕಂತೆ" ಎಂದ.

"ಕೊಡ್ತೀನಿ ಕೊಡ್ತೇನೆ. ನೋಡಿದೆಯ, ಗಣೇಶ" ಮೀಸೆ ಅಣ್ಣ ಮೀಸೆ ಕುಣಿಸುತ್ತ ಒಲೆಯತ್ತ ನಡೆದ, "ಹಾಲು, ಟೀಪೊಪ್ಪು, ಸಕ್ಕರೆ ಎಲ್ಲ ಹುಡುಗ ರಿಂದ ಕಾಡಿಬೇಡಿ ಎರಡು ಮಾಸ್ತರರು ಸಂಪಾದಿಸಿದ್ದಾರೆ. ಈಗ ನನ್ನ ಅಂಗಡಿ ಚಹ ಅವರಿಗೆ ಸರಬರಾಜು....! ಕಾಲ ಕೆಟ್ಟೋಯ್ತಪ್ಪೋ...."

ಗಣೇಶ ಜೇಬಿನಿಂದ ಚಿಲ್ಲರೆ ಎಣಿಸಿ ಅವನ ಕೈಗಿತ್ತ. ಆಗಲೇ ಸಾಕಷ್ಟು ಹೊತ್ತಾಗಿದ್ದರಿಂದ ಬೇಗನೆ ಮನೆ ಸೇರಬೇಕಿತ್ತು.

"ಒಂದು ತುಂಡು ಕಬ್ಬನ್ನು ನಿನಗಾಗಿಟ್ಟಿದ್ದೇನೆ. ತಗೊಂಡುಹೋಗು" —ಹಲಗೆಯ ಮೇಲಿಟ್ಟ ದಪ್ಪದ ಕಬ್ಬಿನ ತುಂಡನ್ನು ಗಣೇಶನ ಕೈಲಿರಿಸಿದ ಮೀಸೆ ಅಣ್ಣ. "ಎರಡು ಬಾಟ್ಲಿ ಜೇನು ಬೇಕು ಅಂದಿದ್ಲು ನಿನ್ನ ಚಿಕ್ಕಮ್ಮ. ಆದರೆ ಹದಿನೈದು ದಿನಗಳಿಂದಲೂ ಜೇನು ಮಾರುವವನು ಈ ಕಡೆ ಬಂದಿಲ್ಲ. ಬಂದಾಗ ತೆಗೆದಿಡ್ತೀನೆ ಅಂತ ಮನೇಲಿ ಚಿಕ್ಕಮ್ಮನ ಹತ್ರ ಹೇಳಿಬಿಡು."

"ಎಷ್ಟು ಕುಪ್ಪಿ ಜೇನು ತಗೊಂಡಿದ್ದಾಳೆ?"

"ಏನಿಲ್ಲವೆಂದರೂ ಈ ವರ್ಷ ಐದಾರು ಕುಪ್ಪಿ ಜೇನು ತಗೊಂಡಿರಬಹುದು. ಯಾಕೆ ನೀನು ಜೇನಿನ ರುಚಿ ಕಹಿಯೋ, ಸಿಹಿಯೋ ಎಂದು ನೋಡಲೇ ಇಲ್ಲವೇ? ಛಿ!"

ಗಣೇಶ ಸುಮ್ಮನೆ ತಲೆಯಲ್ಲಾಡಿಸಿ ಹೊರಟುಬಿಟ್ಟ ಅಲ್ಲಿಂದ. ಬಲಿತ ದಪ್ಪನಾದ ಕಬ್ಬು ಕೈಸೇರಿತ್ತು. ಅದನ್ನು ಜಗಿಯುತ್ತ, ಸಿಪ್ಪೆಯನ್ನು ಉಗು ಳುತ್ತ ಕಾಲುದಾರಿಯನ್ನು ಹಿಡಿದ. ಒತ್ತಾಗಿ ಬೆಳೆದ ಮರಗಳ ಗುಂಪಿನಲ್ಲಿ ನಡೆದು ಒಂದು ಸಣ್ಣ ಏರನ್ನು ಹತ್ತಿ ಇಳಿದು, ನಾಲ್ಕಾರು ಮನೆ ಗುಡಿಸಲು ಗಳನ್ನು ದಾಟಿದ. ಗದ್ದೆಹುಣಿಯುಂದಾಚೆ ಎರಡು ಜೋಲಿಗಳನ್ನು ನೂಕಿಕೊಂಡು ಕುರುಚಲು ಪೊದೆಗಳನ್ನು ಸವರುತ್ತ ಮುಂದುವರಿದು ನರಸಿಂಹಭಟ್ಟರ

ಅಡಿಕೆತೋಟದ ಮೇಲ್ಭಾಗದ ಕಾಡಿನ ಕಾಲುದಾರಿಯತ್ತ ಬಂದಾಗ ಅರೆ ಗಳಿಗೆ ಕುಳಿತುಕೊಳ್ಳೋಣ ಎನ್ನಿಸಿತು. ನರಸಿಂಹಭಟ್ಟರ ತೋಟವನ್ನು ದಾಟಿ ಕೆಳಗಿಳಿದರೆ ಸುಮಿತ್ರಳ ಮನೆ ಮತ್ತು ಗದ್ದೆಗಳು ಸಿಗುತ್ತವೆ. ಕಳೆದ ವರ್ಷ ಕೃಷ್ಣಯ್ಯ ಈ ದೊಡ್ಡ ತೋಟಕ್ಕೆ ಹೊಂದಿಕೊಂಡಿರುವ ಗದ್ದೆಯಲ್ಲಿ ಹೊಸ ಅಡಿಕೆ ಸಸಿಗಳನ್ನು ನೆಡಿಸಿದ್ದಾನೆ. ಕಬ್ಬನ್ನೂ ಬೆಳೆಸುತ್ತಿದ್ದಾನೆ. ನೀರಿಗಾಗಿ ಕೆರೆ ತೋಡಬೇಕು ಎಂದುಕೊಂಡಿದ್ದಾನೆ. ನರಸಿಂಹಭಟ್ಟರು ಅವನ ಸೂಕ್ಷ್ಮ ತನವನ್ನು ಅರಿತು ತಮ್ಮ ತೋಟದ ಬೇಲಿಯನ್ನು ಭದ್ರಪಡಿಸಿ ಹೊರಗೆ ಆಳೆತ್ತರದ ಅಗಲವಾದ ಅಗರನ್ನು ತೋಡಿಸಿ ತಮ್ಮ ಐವತ್ತು ಖಂಡಿ ಅಡಿಕೆ ತೋಟದ ಭದ್ರತೆಯನ್ನು ಮಾಡಿಕೊಂಡಿದ್ದಾರೆ.

ಅವರ ತೋಟದಲ್ಲಿ ಕಬ್ಬಿನ ಬೆಳೆಗೆ ಲೆಕ್ಕವೇ ಇಲ್ಲ. ಬಾಳೆ, ಅನಾನಸು, ಕೊಕ್ಕೋ ಮರಗಳ ಮಧ್ಯೆ ಸ್ಥಳವಿರುವ ಕಡೆಗಳಲ್ಲಿ ಹೇಗೆ ಬೇಕೋ ಹಾಗೆ ಬೆಳೆದುಕೊಂಡಿವೆ. ಕೆಲಸದವರೂ ಸುಮ್ಮನೆ ಅಷ್ಟಿಷ್ಟು ತೆಗೆದುಕೊಂಡು ಹೋಗುತ್ತಾರೆ. ಒಂದೆರಡು ಬಾರಿ ಗಣೇಶನಿಗೂ ತಿನ್ನಲು ದೊರೆತಿದೆ. ಆಗ ಅದರ ಸವಿ, ತಿನ್ನುವ ಗಮ್ಮತ್ತು ಅವನೊಬ್ಬನಿಗೇ ಗೊತ್ತು. ಕಬ್ಬನ್ನು ಎಷ್ಟು ತಿಂದರೂ ತೃಪ್ತಿಯಿಲ್ಲ ಅವನಿಗೆ. ಸುಮಿತ್ರಳಿಗೂ ಅದು ತಿಳಿಯದೇ ಇಲ್ಲ. ಆದರೆ ತಮ್ಮಲ್ಲಿ ಬೆಳೆದ ಕಬ್ಬನ್ನು ಅವನಿಗೆ ಕೊಡುವಾಗ ಯಾವಾಗಲೂ ಅವಳ ಕೈ ಹಿಂದೆ. 'ಹಲ್ಲಿಗೆ ಹಾಳು' ಎನ್ನುವ ಸುಳ್ಳುನೆವ ಹಾಕಿ ಅವನಿಂದ ದೂರವಿರಿಸಿ ರಾತ್ರಿ ತಾನೊಬ್ಬಳೇ ತಿನ್ನುತ್ತಾಳೆ ಗುಟ್ಟಾಗಿ. ಕಸವನ್ನು ಎಸೆಯುತ್ತಾಳೆ ದನಗಳಿಗೆ! ತಾನಿಲ್ಲದಾಗ ಹುಡುಗಿಯರಿಗೂ ಕೊಟ್ಟು ಮುಗಿಸಿಬಿಡುತ್ತಾಳೆ.

ತೋನ್ಸೆಗೆ ಅಜ್ಜನ ಮನೆಗೆ ಹೋದಾಗಲೆಲ್ಲ ಅಜ್ಜ ದೊಡ್ಡ ರಾಶಿ ಕಬ್ಬನ್ನು ಅವನ ಮುಂದೆ ಇಟ್ಟುಬಿಡುತ್ತಿದ್ದರು. ಅಮ್ಮ ಅವನಿಗೆ ಬೇಕಾದಷ್ಟು ಸ್ವಚ್ಛಮಾಡಿ ಸಿಪ್ಪೆ ತೆಗೆದುಕೊಡುತ್ತಿದ್ದಳು. ಕಾಡುಮರಗಳ ನೆರಳಿನಲ್ಲಿ ತಮ್ಮ ತಂಗಿಯೊಡನೆ ಜಗಳವಾಡುತ್ತ ಕಬ್ಬು ತಿನ್ನುವುದೆಂದರೆ....ಆಹಾಹಾ....!

ಅವನಿಗೆ ಅಮ್ಮನ ನೆನಪು ಬಂದು ಹನಿಗೂಡಿದವು ಕಣ್ಣುಗಳು. ಅಮ್ಮನ ಮೃದು ನುಡಿಗೆ, ಅಮ್ಮನಿಗಾಗಿ ಹಾತೈಸಿತು ಅವನ ಮನ. ಈಗಿಂದೀಗಲೇ ತೋನ್ಸೆಗೆ ಹೋಗಿ ಎಲ್ಲರೊಡನೆಯೂ ಜಗಳವಾಡಿ ಬರಬೇಕು. ಆದರೆ ಅವನಿನ್ನೂ ಚಿಕ್ಕವ. ಅವನ ಮಾತನ್ನು ಕೇಳುವವರಿಲ್ಲ ಯಾರೂ. ತಮ್ಮ,

ತಂಗಿಯಿಂದ ಅವನನ್ನು ಬೇರ್ಪಡಿಸಿ ಬಹಳ ದೊಡ್ಡ ಅನ್ಯಾಯವನ್ನು ಮಾಡಿಬಿಟ್ಟಿದ್ದಾರೆ ಅವನಿಗೆ. ಛೆ! ಅಂದು ಅತ್ತು ಅತ್ತು ಗಲಾಟೆಮಾಡಿದ್ದು ನಿಷ್ಪ್ರಯೋಜಕ. ಕೃಷ್ಣಯ್ಯ ಮುಷ್ಟಿಯಿಂದ ಗುದ್ದಿದ್ದ ನೆತ್ತಿಯ ಮೇಲೆ.

"ದೊಡ್ಡವರು ಹೇಳಿದ್ಹಾಗೆ ಕೇಳಿಕೊಂಡಿರು ಸಾಕು. ಮಾತಿಗೆ ಮುಂಚೆ ಅಳುಮೂತಿ ಮಾಡಿ ಪೆದಂಬು ಗಲಾಟೆ ಮಾಡಿದರೆ ಇನ್ನು ನಾಲ್ಕು ಬಾರಿಸ್ತೇನೆ ಬೆನ್ನಿಗೆ!"

ಅವನಿಗೇನೋ ಅಕ್ಕ ತೀರಿಹೋದ ದುಃಖ. ಹಾಗೆಂದು ಅಮ್ಮನಿಲ್ಲದೆ ಗಣೇಶನಿಗೆ ಎಷ್ಟು ದುಃಖವಾಗಿರಬೇಡ? ಕೃಷ್ಣಯ್ಯ ಹಾಗೆ ಗುದ್ದಿ ರೇಗುವ ಬದಲು "ನೀನು ಒಬ್ಬನಾದರೂ, ನನ್ನ ಜೊತೆಯಲ್ಲಿ ಉಳಿದುಕೊಂಡರೆ ನನ್ನ ಬೇಸರ ನೀಗುತ್ತೆ" ಎಂದು ಮೃದುವಾಗಿ ಹೇಳಿದ್ದರೆ....ಅಪ್ಪನ ಮೃದುಮಾತಿಗೇ ಕರಗಿಬಿಡುತ್ತಿದ್ದ ಗಣೇಶ. ಅಪ್ಪನ ಮೇಲಿನ ಕನಿಕರ, ವ್ಯಾಮೋಹದಿಂದ ಮರೆಯುತ್ತಿದ್ದ ತಮ್ಮ-ತಂಗಿಯ ಅಗಲಿಕೆಯ ಬೇಸರವನ್ನು.

ನಿಜ, ಅಕ್ಕ ಅಕಾಲಮರಣಕ್ಕೆ ತುತ್ತಾಗಿ ಅನಾಥರನ್ನಾಗಿ ಮಾಡಿ ಬಿಟ್ಟಿದಳು ಮಕ್ಕಳನ್ನು. ಕೃಷ್ಣಯ್ಯನಿಗೆ ಕಾಡಿನಲ್ಲಿ ಕಣ್ಣು ಮುಚ್ಚಿ ಬಿಟ್ಟಂತಾಗಿ ಮೂಕನಾಗಿಹೋಗಿದ್ದ ಅನೇಕ ಸಮಯಗಳವರೆಗೆ. ಅಕ್ಕನ ತಂದೆತಾಯಿ ಮಂಗಳೂರಿಗೆ ಬಂದು ಅಕ್ಕನ ಅಂತ್ಯಕ್ರಿಯೆಯನ್ನು ಮುಗಿಸಿ ಹೋಗುವಾಗ ಜೊತೆಯಲ್ಲಿ ಮೂರು ಮಕ್ಕಳನ್ನು ಕರೆದೊಯ್ದರು ತೋನ್ಸೆಗೆ. ಒಂದು ತಿಂಗಳ ನಂತರ ಅಜ್ಜ ಗಂಗಯ್ಯ ತನ್ನ ಜೊತೆಯಲ್ಲಿ ಗಣೇಶನೊಬ್ಬನನ್ನೇ ಕರೆದು ಕೊಂಡು ಬಂದ. ಅಳಿಯನೊಡನೆ ರಾತ್ರಿಯೆಲ್ಲ ಮಾತನಾಡಿ ಅವನನ್ನು ಅಲ್ಲಿಯೇ ಬಿಟ್ಟು ತಾನೊಬ್ಬನೇ ಹೊರಟುಹೋದ. ತಾನೊಬ್ಬನೇ ತಂದೆ ಯೊಡನೆ ಉಳಿಯಬೇಕಾಯಿತಲ್ಲ ಎಂದು ವ್ಯಥಿತನಾದ. ತಾಯಿಯ ಸಾವು, ತಂಗಿ ತಮ್ಮನ ಅಗಲಿಕೆಯಿಂದ ಸಂಕಟಪಟ್ಟ. ಕೃಷ್ಣಯ್ಯ ಮೊದಲಿಗಿಂತಲೂ ಅಧಿಕವಾಗಿ ಕುಡಿಯುತ್ತಿದ್ದ ಈಗ. ಅದನ್ನು ನೋಡಿ ಮನದಲ್ಲೇ ಹೆದರಿಕೆ. ಎಷ್ಟು ಬಾರಿ 'ಅಮ್ಮಾ....ಅಮ್ಮಾ....' ಎಂದು ಅತ್ತು ಕರೆದನೊ. ನೆರೆಯವರು ಕೆಲವರು ಅವನನ್ನು ಕರೆದು ಊಟತಿಂಡಿಗಳನ್ನು ಕೊಟ್ಟು ಸಮಾಧಾನದ ಉಪಚಾರ ನೀಡಿದರೂ ತಾಯಿಯ ಕೊರತೆಯನ್ನು ನಿವಾರಿಸಲಿಲ್ಲ.

ತಾಯಿ ತೀರಿ ಹೋಗಿ ವರ್ಷ ಕಳೆಯುತ್ತಿದ್ದಂತೆ ಇನ್ನೂ ಒಂದು

ಅನಿರೀಕ್ಷಿತ ಬದಲಾವಣೆಯಾಯಿತು ಕೃಷ್ಣಯ್ಯನಲ್ಲಿ. ಗಣೇಶನಿಗೆ ಅವರ ಬಗ್ಗೆ ಯೋಚಿಸುವದೂ ಆಗಲಿಲ್ಲ. ಅಳಿಯನ ವಿಷಯ ಕೇಳಿ ಅಚ್ಚರಿಗೊಂಡ ಗಂಗಮ್ಮ, ಸಣ್ಣಮ್ಮ ಬಹಳವಾಗಿ ತಿಳಿಹೇಳಿದರು. ಶಂಕರ, ಸುನಂದೆಯರ ಭವಿಷ್ಯದ ದೃಷ್ಟಿಯಿಂದಲಾದರೂ ಅವನನ್ನು ತಿದ್ದಲು ಇಚ್ಛಿಸಿದರು. ಅವನು ಯಾರ ಬುದ್ಧಿವಾದವನ್ನೂ ಕೇಳಲಿಲ್ಲ. ಹುಟ್ಟಿಬೆಳೆದದ್ದು ಬಡತನದಲ್ಲಿ. ಹೆಚ್ಚಿನ ಸ್ಥಿತಿಗತಿಗಳನ್ನು ಚಿಂತಿಸುವದೂ ಅನಗತ್ಯವಾಗಿತ್ತು ಅವನಿಗೆ. ರಾತ್ರಿ ಹೊತ್ತು ಕಂಠಪೂರ್ತಿ ಕುಡಿದು ಮಲಗಿದಾಗ ತಾನು ಬಹಳ ಸುಖಿ ಎಂದು ಕೊಳ್ಳುತ್ತಿದ್ದ. ಆದರೆ ಅಕಸ್ಮಾತ್ ಅವನ ಜೀವನ ಹೊಸ ತಿರುವು ಪಡೆದು ಹೆಜ್ಜೆಯಿರಿಸಲು ಸಿದ್ಧವಾದಾಗ ಅದು ಬೇಡ ಎಂದು ತಳ್ಳಿಹಾಕುವದು ಆಗಲಿಲ್ಲ ಅವನಿಂದ. ಆಗ ಅವನು ತನ್ನ ವ್ಯಕ್ತಿತ್ವಕ್ಕೆ ಬೆಲೆ ಕಟ್ಟಲಿಲ್ಲ. ಮಕ್ಕಳ ಭವಿಷ್ಯವನ್ನು ಚಿಂತಿಸಲಿಲ್ಲ. ತನ್ನ ಚಹದಂಗಡಿಯನ್ನು ಕಿತ್ತು ತೆಗೆದು ಉಪ್ಪಿನಂಗಡಿ ಹತ್ತಿರವಿರುವ ಬೆಳ್ಳಿಪಾಡಿಗೆ ಸಂಸಾರ ಬೆಳೆಸಿದ. ಜೊತೆಯಲ್ಲಿ ಗಣೇಶನೂ!

ಬೆಳ್ಳಿಪಾಡಿಗೆ ಸೇರಿದಂದಿನಿಂದ ಗಣೇಶನ ಎಳೆಯ ದಿನಗಳೆಲ್ಲ ಕನಸಿನ ಗರ್ಭದಲ್ಲಿ ಹೂತುಹೋಗಲಾರಂಭಿಸಿದವು. ಆತ ನೀರಿನಿಂದ ಹೊರತೆಗೆದ ಮೀನಿನಂತಾದ. ತಂದೆಯಲ್ಲಿರುವ ಪ್ರೀತಿ, ಸಲಿಗೆ ಹೆದರಿಕೆಯ ರೂಪವನ್ನು ತಳೆದವು. ತಂದೆಯೊಡನೆ ಏನನ್ನೂ ಹೇಳಲಾರದೆ, ತನಗೆ ಆಗದೇ ಇದ್ದುದನ್ನು ಪ್ರತಿಭಟಿಸುವ ಧೈರ್ಯವಿಲ್ಲದೆ, ಪ್ರತಿಭಟನೆ ತೋರಿದರೂ ಕೇಳುವವರಿಲ್ಲದೆ ಹೊಸ ಜೀವನಕ್ಕೆ ಅನಿವಾರ್ಯವಾಗಿ ಧುಮುಕಬೇಕಾಯಿತು! ಬಿರುಗಾಳಿಯೇ ಬೀಸಲಿ, ಪ್ರವಾಹವೇ ಬಂದಿರಲಿ, ಸಿಡಿಲಿನ ತೆರೆಯೇ ಅಪ್ಪಳಿಸಲಿ....ಎದುರಿಸಬೇಕು ಅವನ್ನೆಲ್ಲ. ಅವನ ಪುಟ್ಟ ಹೃದಯ ಈ ತೆರೆಯನ್ನು ತಡೆದುಕೊಳ್ಳುವಷ್ಟು ಶಕ್ತವಾಗಿರದಿದ್ದರೂ ಹೊಸ ಪರಿಸ್ಥಿತಿಯ ಗಾಣದಲ್ಲಿ ಸಿಲುಕಿ ತಿರುಗಬೇಕಿತ್ತು ಅವನಿಗೆ.

ಕಬ್ಬಿನ ಕೊನೆಯ ತುಂಡು ಜಗಿದು ಮುಗಿಸಿ ಡರ್ ಎಂದು ತೇಗಿದಾಗ ಮನೆಯ ನೆನಪಾಗಿ ಸಣ್ಣಗೆ ನಡುಗಿತು ಗಣೇಶನ ಮೈ. ಕಾಡಿನ ಮೇಲೇರಿ ಬಂದ ಬಿಸಿಲನ್ನು ನೋಡಿದರೆ ಮಧ್ಯಾಹ್ನ ಹನ್ನೆರಡು ಕಳೆದಿರಬಹುದು. ದೊಡ್ಡಮ್ಮ ಈಗಾಗಲೇ ಮುನಿಸುಗೊಂಡಿರಬಹುದು. ಅವಳಿಗೆ ಮೂಗಿನ

ನೇರಕ್ಕೇ ಕೋಪ. ತನ್ನ ಮುಖವನ್ನು ನೋಡಿದಾಕ್ಷಣ ಪ್ರಾರಂಭಿಸುತ್ತಾಳೆ ಸಹಸ್ರನಾಮಗಳ ಪಟ್ಟಿಗಳನ್ನು. ಅವಳನ್ನು ಏನೆಂದು ಸಮಾಧಾನಪಡಿಸಲಿ? ಹೋ!....ದೊಡ್ಡಮ್ಮನಿಗೆ ಕೆಂಡಸಂಪಿಗೆ ಬಹಳ ಪ್ರೀತಿ. ಆ ಹೂವುಗಳನ್ನು ನೋಡಿದಾಕ್ಷಣ ಅವಳಿಗೆ ತನ್ನ ಮೇಲೆ ಎಷ್ಟೇ ಕೋಪ ಬಂದಿರಲಿ, ಝುಗ್ರನ್ನೆ ಇಳಿದುಹೋಗುತ್ತದೆ. ಹೇಗಾದರೂ ಕಷ್ಟಪಟ್ಟು ತಾನು ತೆಗೆದುಕೊಂಡು ಹೋಗಿ ಮೆಚ್ಚಿಸಬೇಕು ಅವಳನ್ನು.

ಮುಖವನ್ನು ಓರೆಮಾಡಿ ಕಬ್ಬು ತಿಂದ ಬಾಯಿಯನ್ನು ತೋಳುಗಳಿಗೇ ಒರೆಸಿಕೊಂಡ. ಕೆಂಡಸಂಪಿಗೆಯ ಮರ ಎಲ್ಲಿರುವುದೆಂದು ಚೆನ್ನಾಗಿ ಗೊತ್ತು ಅವನಿಗೆ. ನಾಗಸಂಪಿಗೆ, ಗೋಳಿ, ಮುತ್ತುಗದ ಮರಗಳಿರುವ ಆ ಕಾಡಿನ ಮಧ್ಯೆ ಆ ಮರವೂ ಇತ್ತು. ಎಲೆ ಕಾಣದಷ್ಟು ಹೂವು ತುಂಬಿದಾಗ ಇಡೀ ಕಾಡಿನಲ್ಲಿ ಅದರದೇ ಪರಿಮಳ. ಎಂಥವರ ತಲೆಯೂ ತಿರುಗೀತು. ಅವನು ತಡ ಮಾಡದೆ ಹೂವನ್ನು ಕುಯ್ದು ತರಲು ಹೊರಟುಬಿಟ್ಟ ಉತ್ಸಾಹದಲ್ಲಿ.

## 5

"ಕೆಲಸ ಮಾಡುವ ಮನಸ್ಸಿಲ್ಲದೇಯಿದ್ದರೆ ತನ್ನಿಂದ ಸಾಧ್ಯವಿಲ್ಲವೆಂದು ಬಾಯಿ ಬಿಟ್ಟು ಹೇಳಲಿ. ನೇಗಿಲನ್ನು ತೊಳೆಯುವ ಗದ್ದೆ ಹತ್ರ ಬಿಸಿಲಿನಲ್ಲಿ ಬಿಸಾಕಿ ಬಂದಿದ್ದಾನೆ. ಗದ್ದೆ ಎರಡು ಬಾರಿ ಉತ್ತಾಯ್ತು ಅಂತ ಸುಳ್ಳು ಬೇರೆ ಹೇಳಿದ!"

"ಇನ್ನೂ ಸಣ್ಣವನು. ತಿಳಿಯುವ ತಪ್ಪಿರಬಹುದು. ದೊಡ್ಡವನಾದ್ಮೇಲೆ ಖಂಡಿತ ಸರಿಯಾಗಿ ಕೆಲಸ ಮಾಡ್ತಾನೆ."

"ಮೀಸೆ ಬರೋದಕ್ಕಾಗಿದೆ....ಇನ್ನೂ ಸಣ್ಣವನಂತೆ. ಇವನ ಪ್ರಾಯದ ತ್ಯಾಂಪಣ್ಣನ ಮಗ ಬೆಳಗ್ಗೆಯಿಂದ ರಾತ್ರಿಯವರೆಗೆ ದುಡಿಯುವುದಿಲ್ಲವೇ? ಏನಿಲ್ಲ, ಅಕ್ಕ ಮತ್ತು ನೀವು ಮುದ್ದು ಮಾಡಿದ್ದು ಜಾಸ್ತಿಯಾಗಿದೆ. ಶುದ್ಧ ಸೋಮಾರಿಯಾಗಿದ್ದಾನೆ."

"ಅವನ ಬದಲಿಗೆ ಇನ್ನೊಬ್ಬ ಆಳನ್ನು ಕೆಲಸಕ್ಕೆ ಮಾಡ್ತೀನೆ ಅಂದರೆ ನೀನೇ ಬೇಡ ಅಂದೆ."

"ಇವನನ್ನು ಧರ್ಮಕ್ಕೆ ಸಾಕು ಅನ್ನೀರ? ಚೆನ್ನಾಯ್ತು ಬಿಡಿ. ಇವನ

ಬದಲಿಗೆ ಕಾಸು ಕೊಟ್ಟು ಕೆಲಸದವನನ್ನು ಇಟ್ಟುಕೊಳ್ಳುವದೆ? ಮತ್ತೆ ಇವನು ಆರಾಮವಾಗಿ ಕೋಳು ದಂಡ ಮಾಡ್ತ ಇರಲಿ....ಈವತ್ತು ಮನೆಗೆ ಬರಲಿ ಚೆನ್ನಾಗಿ ದಬಾಯಿಸಿಬಿಡ್ತೇನೆ. ಅರೆ, ಕೆಂಡಸಂಪಿಗೆಯ ಪರಿಮಳ ಬರ್ತಾ ಇದೆಯಲ್ಲ....ಯಾರು ತಂದರು?" ಕಿರಿದಾದ ಬಾಗಿಲಿರುವ ಕತ್ತಲೆಯ ಅಡಿಗೆ ಕೋಣೆಯಿಂದ ಇಣುಕಿ ನೋಡಿದಳು ಸುಮಿತ್ರ.

ಹೊರಜಗಲಿಯಲ್ಲಿ ನಿಂತಿದ್ದಾನೆ ಗಣೇಶ ತಪ್ಪಿತಸ್ಥನಂತೆ. ಸುಮಿತ್ರ ಮತ್ತು ಕೃಷ್ಣಯ್ಯ ಮಾತನಾಡುವದನ್ನು ಕೇಳಿಸಿಕೊಂಡಿರಬೇಕು, ಮುಖ ಹಿಡಿಯಷ್ಟು ಸಣ್ಣದಾಗಿದೆ. ಬೆಳಗ್ಗೆ ಮನೆ ಬಿಟ್ಟ ಪೋಪನು ಬಂದದ್ದು ಈಗ! ಅಡಿಗೆಮನೆಯ ಹೊಸ್ತಿಲಿನ ಮೇಲೆ ಬಾಗಿಲಿಗೆ ಬೆನ್ನುಹಾಕಿ ಕುಳಿತ ಕೃಷ್ಣಯ್ಯ ಅಲ್ಲಿಂದೆದ್ದು ಬಾಯಿಯಲ್ಲಿದ್ದ ಬೀಡಿಯನ್ನು ನೆಲಕ್ಕೆ ಬಿಸಾಕಿ ಗಣೇಶನನ್ನು ದಿಟ್ಟಿಸಿದ ಒಂದು ಬಾರಿ. ಬಿಸಿಲಿಗೆ ಕೆಂಪು ಹಣ್ಣಿನಂತೆ ಆಗಿತ್ತು ಅವನ ಮುಖ.

"ಬಂದ ಊಟದ ಹೊತ್ತಿಗೆ. ಏನೋ ಸಣ್ಣವನು, ಎರಡು ತುತ್ತು ಬಡಿಸು" ಎಂದು ಸುಮಿತ್ರಳಿಗೆ ಹೇಳಿ ಬದಿಯ ಕೋಣೆಗೆ ನಡೆದ ಒಂದು ಗಳಿಗೆಯ ವಿಶ್ರಾಂತಿಗಾಗಿ.

ಗಣೇಶನಿಗೆ ನೇರವಾಗಿ ಸುಮಿತ್ರಳನ್ನು ನೋಡುವ ಧೈರ್ಯ ಬರಲಿಲ್ಲ. ಆತ ಮುತ್ತುಗದ ಎಲೆಯಲ್ಲಿ ಕಟ್ಟಿ ತಂದ ಕೆಂಡಸಂಪಿಗೆಯ ಹೂವುಗಳನ್ನು, ಕಿಸೆಯಲ್ಲಿ ತುಂಬಿ ತಂದ ಸುರಗೀ ಹೂವುಗಳನ್ನು ತೋರಿಸುತ್ತ, "ಇಕೋ ದೊಡ್ಡಮ್ಮಾ, ಇಲ್ಲಿ ನೋಡು. ನಿನಗಾಗಿ ಎಷ್ಟೊಂದು ಹೂವುಗಳನ್ನು ತಂದಿದ್ದೇನೆ" ಎಂದ ಮುಗ್ಧವಾಗಿ ಕಣ್ಣುಗಳನ್ನು ಅರಳಿಸಿ.

"ಓ!....ಎಲ್ಲಿಂದ ತಂದೆ ಇವನ್ನು? ದೇವರು ನಿನಗೆ ನೂರು ವರ್ಷ ಆಯುಷ್ಯ ಕೊಡಲಿ! ಇಕೋ, ಈ ತಟ್ಟೆಗೆ ಹಾಕಿಡು. ತುಂಬ ದಿನಗಳಾದವು ಕೆಂಡಸಂಪಿಗೆಯನ್ನು ಮುಡಿದುಕೊಳ್ಳದೆ."

ಹುಡುಗನ ಮೈಯೆಲ್ಲ ಪುಳಕಿತಗೊಂಡು ಕೆಂಡಸಂಪಿಗೆಯ ಮರವನ್ನು ಏರುವಾಗ ಹೊಟ್ಟೆ, ಕೈಕಾಲುಗಳಿಗೆಲ್ಲ ಗಾಯವಾಗಿ ತರಚಿಹೋಗಿ ಉರಿಯುತ್ತಿರುವದೂ ಪಕ್ಕನೆ ವಾಸಿಯಾದಂತೆ ಅನಿಸಿತು. ಅದೇ ಗಳಿಗೆಯಲ್ಲಿ ಮೂಗನ್ನು ಅರಳಿಸಿದ ಸಾಂಬಾರಿನ ಪರಿಮಳದಿಂದ ಹೊಟ್ಟೆಯ ಒಳಗಿನ ಉರಿ ಜಾಗ್ರತವಾಯಿತು.

“ನಂಗೆ ಗೊತ್ತು ದೊಡ್ಡಮ್ಮಾ, ಕೆಂಡಸಂಪಿಗೆ ನಿನಗೆ ಬಹಳ ಇಷ್ಟವೆಂದು. ಕಷ್ಟಪಟ್ಟು ಮರಹತ್ತಿ ತಂದಿದ್ದೇನೆ. ಬೇಕಿದ್ದರೆ ಇನ್ನೂ ತರ್ತೇನೆ.”

“ಇವತ್ತಿಗೆ ಇಷ್ಟು ಸಾಕು—” ಸುಮಿತ್ರ ಮೆಲ್ಲನೆ ಅಡಿಗೆಕೋಣೆಯ ಬಾಗಿಲನ್ನು ಮುಚ್ಚಿ ಅಲ್ಲೇ ಇದ್ದ ಬಿದಿರುಮಾಡಿಗೆ ಸಿಕ್ಕಿಸಿದ್ದ ಬಾಳೆಯ ನಾರಿನ ಒಂದು ತುಂಡನ್ನು ತೆಗೆದುಕೊಂಡು ನೆಲದ ಮೇಲೆ ಕುಳಿತುಬಿಟ್ಟಳು ಮಾಲೆ ಮಾಡಲೆಂದು. ಗಣೇಶ ಕಾಲು ತೊಳೆದುಕೊಂಡು ಊಟಕ್ಕೆ ಅಣಿಯಾಗಿ ಬಂದಾಗ ಎಡಗೈ ತಿರುಗಿಸಿ ನಕ್ಕಳು.

“ಒಂದು ದಿನ ಉಪವಾಸವಿದ್ದರೆ ನಿನಗೂ ಬುದ್ಧಿ ಬಂದೀತೆಂದು ಅಂದುಕೊಂಡಿದ್ದೇನೆ.”

“ಯಾಕೆ ಹೂವು ಸಾಕಾಗಲಿಲ್ಲವೆ, ದೊಡ್ಡಮ್ಮ?”

“ನೀನಿನ್ನೂ ಸಣ್ಣ ಕೂಸು ಅಂದುಕೊಂಡಿದ್ದೀಯ? ಬೆಳಗಿನಿಂದಲೂ ಎಲ್ಲಿಗೆ ಪೋಲಿ ಅಲೆಯಲು ಹೋಗಿದ್ದೆ? ಕೋಣಗಳನ್ನು ಎಲ್ಲಿ ಕಟ್ಟಿಹಾಕಿದ್ದೀ ಕೋಣ?”

“ಅವುಗಳನ್ನು ಮೇಯಲು ಬಿಟ್ಟಿದ್ದೆನಲ್ಲ!”

“ರಂಗಪ್ಪಯ್ಯ ಮಾಸ್ತರರ ಮನೆಯ ಬೇಲಿ ಮುರಿದು ಮಾಡಿದ ತರಕಾರಿಗಳನ್ನೆಲ್ಲ ಅವರೆಡು ತಿಂದು ಹಾಳುಮಾಡಿದವು ಅಂತ ಈಗಷ್ಟೇ ಅವರ ಹೆಂಡತಿ ದೂರು ಕೊಟ್ಟು ಹೋದರು. ಇಷ್ಟು ಬೇಜವಾಬ್ದಾರಿ ಎಲ್ಲಿಂದ ಬಂತು ನಿನಗೆ? ಗದ್ದೆ ಉತ್ತು ಬೆಳಗ್ಗೆಯೇ ಆಗಿತ್ತು. ಆಮೇಲೆ ಎಲ್ಲಿಗೆ ಹೋಗಿತ್ತು ಸವಾರಿ?”

ಗಣೇಶ ಮುಚ್ಚಿದ ಅಡಿಗೆಕೋಣೆಯನ್ನು ನೋಡಿದ. ಕೆರಳಿತು ಅವನ ಹಸಿದ ಜಠರ. ಸುಮಿತ್ರಳ ಅಪ್ಪಣೆಯಿಲ್ಲದೆ ಹೊಸ್ತಿಲು ದಾಟುವಂತಿಲ್ಲ. ಅವನ ಮೂಗಿನ ಹೊರಳೆಗಳಿಂದ ಬುಸ್‌ಬುಸ್ ಎಂದು ಹೊರಟಿತು ಕೋಪದ ಶ್ವಾಸ.

“ಇನ್ನೂ ನಿಂತುಕೊಂಡೇ ಇದ್ದೀಯಲ್ಲ. ನಿನ್ನ ಕೆಲಸಗಳನ್ನೆಲ್ಲ ಹಾಗೇ ಒತ್ತಿಟ್ಟು ಎಲ್ಲೋ ಅಂಡಲೆದು ಬಂದಿಯೆಂದು ನಾನೇನೂ ನಿನ್ನ ಕೆಲಸವನ್ನು ಮಾಡಲಾರೆ....”

“ಗಂಟೆ ಒಂದಾಯ್ತು ದೊಡ್ಡಮ್ಮ.”

“ಆಗಲಿ ಸಾಲ್ದು! ನಿನ್ನೆಯೇ ಹೇಳಿದ್ದೆ, ನರಸಿಂಹಭಟ್ಟರ ಮನೆಯಿಂದ ಎರಡು ಕಟ್ಟು ಸೋಗೆ ತಗೊಂಡು ಬಾ ಎಂದು. ತಂದಿದ್ದೀಯ ನೀನು?

ಈಗಲೇ ತಗೊಂಡು ಬಾ."

ಗಣೇಶ ಹೊಟ್ಟೆಯನ್ನು ತೋರಿಸಿ ಕೈತಟ್ಟಿದ ಅವರ ಮೇಲೆ. ಸುಮಿತ್ರ ಹೂವುಗಳನ್ನು ಕಟ್ಟುತ್ತ ಏರಿಸಿದಳು ಸ್ವರವನ್ನು: "ನಿಂಗೆ ಮೂರು ಹೊತ್ತೂ ಹಾಕ್ತಾ ಇರುವ ಕೂಳು ಜಾಸ್ತಿಯಾಗಿ ಈಗೀಗ ಅಹಂಕಾರ ಬಂದುಬಿಟ್ಟಿದೆ. ಎರಡು ದಿನ ಉಪವಾಸ ಇರು. ಆಗ ಬರುತ್ತದೆ ಬುದ್ಧಿ. ಭಟ್ಟರ ಮನೆಗ್ಹೋಗಿ ಸೋಗೆಯನ್ನು ಕೇಳಿ ತಗೊಂಡು ಬಾ. ಹಾಗೇ ಎರಡು ದೊಡ್ಡ ಅಡಿಕೆಹಾಳೆಗಳನ್ನೂ ತಾ."

ಗಣೇಶನಿಗೆ ಕಣ್ಣೀರು ಉಕ್ಕಿಬಂದಿತು. ಸುಡುವ ಬಿಸಿಲಿನಲ್ಲಿ ಇನ್ನು ಅರ್ಧಮೈಲಿ ನಡೆದು ನರಸಿಂಹಭಟ್ಟರ ಮನೆಯಲ್ಲಿ ಅರ್ಧಗಂಟೆ ಕಾದು ಅವರ ಅಪ್ಪಣೆಯನ್ನು ಪಡೆದು ತೋಟದಿಂದ ಸೋಗೆ ಕಡಿಯಬೇಕು. ಬಿಸಿಲಿನಲ್ಲಿ ಎರಡು ಕಟ್ಟುಗಳನ್ನು ಎರಡು ಬಾರಿ ಹೊತ್ತು ತರುವುದೆಂದರೆ ಅದೇನು ಸಾಮಾನ್ಯದ ಕೆಲಸವಲ್ಲ.

"ಹೇಳಿದ್ದು ಕೇಳಿಸಲಿಲ್ಲವೆ ?" ಸುಮಿತ್ರ ಅರೆಯುವ ಕಲ್ಲಿನ ಬದಿಯಲ್ಲಿದ್ದ ಸಣ್ಣ ಕತ್ತಿಯನ್ನು ನೂಕಿದಳು ಅವನತ್ತ, "ತಗೋ. ಚೆನ್ನಾಗಿ ಕಲ್ಲಿನಲ್ಲಿ ತಿಕ್ಕಿ ಹರಿತಮಾಡಿಕೊಂಡು ಹೋಗು. ಮೊದಲು ಸೋಗೆ ಬರಲಿ, ಆಮೇಲೆ ನಿನಗೆ ಅನ್ನ ಬಡಿಸ್ತೇನೆ."

ಅವಳು ಕೆಂಡಸಂಪಿಗೆಯ ಮಾಲೆಯನ್ನು ಕಟ್ಟಿ ತಲೆಗೆ ಮುಡಿದುಕೊಳ್ಳುತ್ತಿದ್ದಂತೆ ಗಣೇಶ ಕತ್ತಿಯನ್ನು ಎತ್ತಿಕೊಂಡು ಕಾಲನ್ನು ಅಪ್ಪಳಿಸುತ್ತ ಹೊರಗೆ ನಡೆದ. ಕೋಣೆಯಲ್ಲಿ ಕುಳಿತ ಅಪ್ಪ ಯಾಕೆ ಒಂದು ಮಾತನ್ನೂ ಹೇಳಲಿಲ್ಲ? ಅವನಿಗೆ ದೊಡ್ಡಮ್ಮನ ಮೇಲೆ ಎಲ್ಲಿಲ್ಲದ ಸಿಟ್ಟು ಬಂದಿತು. ಅವಳೇನೂ ಸಾಧಾರಣದ ಹೆಂಗಸಲ್ಲ. ನಿಜವಾಗಿಯೂ ತನಗೆ ಚಿಕ್ಕಮ್ಮನಾಗಬೇಕು. ಹಾಗೆ ತಾನು ಮೊದಲು "ಚಿಕ್ಕಮ್ಮಾ" ಎಂದು ಕರೆಯುತ್ತಿದ್ದಾಗ ಓಗೊಡುತ್ತಿದ್ದಳು. ಒಂದು ದಿನ ದರ್ಪದ ಸ್ವರದಲ್ಲಿ, "ಹುಡುಗ, ಇನ್ಮೇಲೆ ನನ್ನನ್ನು ಚಿಕ್ಕಮ್ಮ ಅಂತ ಕರೀಬಾರದು. ದೊಡ್ಡಮ್ಮ ಅನ್ನಬೇಕು" ಎಂದು ಆಜ್ಞೆಮಾಡಿಬಿಟ್ಟಳು. ಈ ಚಿಕ್ಕಮ್ಮ ದೊಡ್ಡಮ್ಮನಾಗಲಿ, ಸಣ್ಣಮ್ಮನಾಗಲಿ ತನ್ನ ತಾಯಿಯ ಸಾವಿರದ ಒಂದು ಗುಣಗಳಲ್ಲಿ ಒಂದಾದರೂ ಇವಳಲ್ಲಿಲ್ಲ. ನೆರೆಯವರು ಅನೇಕರು ಹೇಳುವದುಂಟು, "ನಿನ್ನ ಚಿಕ್ಕಮ್ಮ ದೇವತೆಯಂಥವಳು" ಎಂದು! ಆದರೆ

ಅವನಿಗೆ ಒಬ್ಬನಿಗೇ ತಿಳಿದಿದೆ—‘ದೇವತೆಗಳಲ್ಲಿಯೂ ಅಸುರರ ಗುಣವಿದೆ!’

ಕೆಂಡಸಂಪಿಗೆಯ ಮರಗಳ ಹತ್ತಿರ ಹಾವುಗಳು ಇರುತ್ತವೆಯಂತೆ. ತಾನು ಇಷ್ಟು ಹೂವುಗಳನ್ನು ಕುಯ್ದು ತೆಗೆದುಕೊಂಡು ಬರುವ ಬದಲು ಅಲ್ಲೇ ವಾಸಿಸುತ್ತಿದ್ದ ಹಗ್ಗದಂತೆ ಇರುವ ಒಂದೆರಡನ್ನು ತಂದು ದೊಡ್ಡಮ್ಮನ ಮೈ ಮೇಲೆ ಬಿಸಾಡಿದ್ದರೆ ಆಗ ನೋಡುತ್ತಾ ಇದ್ದೆ ಅವಳ ಪಾಡನ್ನು. ತನ್ನ ಕೈಯಲ್ಲಿ ಗರುಡರೇಖೆಯಿದ್ದಿದ್ದರೆ....ಸರ್ಪಗಳನ್ನು ಪಳಗಿಸುವ ಶಕ್ತಿ ಇದ್ದಿದ್ದರೆ....ಆಗ ಅವಳು ತನ್ನ ಅಂಗೈ ನೋಡಿಯೇ ಹೆದರಿಬಿಡುತ್ತಿದ್ದಳೋ ಏನೋ. ಆದರೆ ತನ್ನ ಅಂಗೈ ಮೇಲೆ ಯಾವ ಅದೃಷ್ಟದ ಲಕ್ಷಣಗಳೂ ಇಲ್ಲ.

## 6

ಹಸಿದ ಹೊಟ್ಟೆಯಲ್ಲಿ ಬಿಸಿಲಿಗೆ ನಡೆದುಕೊಂಡು ಹೋದ ಗಣೇಶನನ್ನು ಕಂಡು ಹುಬ್ಬುಗಂಟಿಕ್ಕಿದ ಕೃಷ್ಣಯ್ಯ ಕೋಣೆಯಿಂದಲೇ ಕೇಳಿದ: “ಅವನಿಗೆ ಒಂದು ತುತ್ತು ಅನ್ನವನ್ನು ಬಡಿಸಿ ಕಳುಹಿಸಬಾರದಿತ್ತೆ?”

ಸುಮಿತ್ರ ಉತ್ತರಿಸದೆ ಉಳಿದ ಬಾಳೆಯ ನಾರನ್ನು ಗಂಟುಕಟ್ಟಿ ಮಾಡಿಗೆ ಸಿಕ್ಕಿಸಿ ಅಲ್ಲಿದ್ದ ಕಸವನ್ನೆಲ್ಲ ತೆಗೆದು ಒಂದು ತಲೆದಿಂಬು ತಂದುಕೊಂಡು ಜಗಲಿಯ ತುದಿಯಲ್ಲಿ ಮಲಗಿದಳು. ಕೋಣೆಯಿಂದ ಹೊರಗೆ ಬಂದ ಕೃಷ್ಣಯ್ಯ,

“ಸುಮನ, ಯಮುನ ಹೀಗೆ ಹಸಿದು ಶಾಲೆಗೆ ಹೋದ್ರೆ ನೀನು ಸುಮ್ಮನಿರುತ್ತಿದ್ದಿಯ?” ಎಂದು ಕೇಳಿದ.

“ನನ್ನ ಮಕ್ಕಳ ವಿಷಯವೇ ಬೇರೆ. ಅವರೇನೂ ಪರದೇಸಿಗಳಲ್ಲ!”

“ನಿನಗ್ಯಾಕೆ ದೇವರು ಈ ಬುದ್ಧಿ ಕೊಟ್ಟಿದ್ದಾನೆ? ಪಾಪ, ನಿನ್ನ ರಕ್ಷಣೆಯಲ್ಲಿರುವ ಅವನನ್ನು ನೀನೇ ಸರಿಯಾಗಿ ನೋಡಿಕೊಳ್ಳದೇಹೋದರೆ ಇನ್ಯಾರು ಅವನನ್ನು ನೋಡ್ತಾರೆ?”

“ಪರದೇಸಿ ಮಕ್ಕಳಿಗೆ ದೇವರೇ ಗತಿ! ಅವನ ಪಕ್ಷ ಹಿಡಿದು ಬಹಳ ವಕಾಲತ್ತು ನಡೆಸ್ತಾ ಇದ್ದೀರಿ. ಅವನನ್ನು ಅನಾಥಾಶ್ರಮಕ್ಕೆ ಸೇರಿಸಿದ್ದರೆ

....ಇಷ್ಟು ಗಂಜಿ ತಿನ್ನುವದೂ ಅವನ ಹಣೇಲಿ ಬರೆದಿರಲಿಲ್ಲ. ನಿನ್ನ ಪಾಡಿಗೆ ನೀವು ಸುಮ್ಮನೆ ಕಣ್ಣುಮುಚ್ಚಿ ಮಲಗಿ."—ಮುಖದ ಮೇಲೆ ಸೆರಗೆಳೆದು ಕೊಳ್ಳುತ್ತ ಅಂದಳು ಸುಮಿತ್ರ, "ಇಂತಹ ಸೋಮಾರಿ ಹುಡುಗರನ್ನು ಆಗಾಗ ಉಪವಾಸವಿಡಬೇಕು ಅಥವಾ ಮಿತವಾಗಿ ಆದಷ್ಟು ಕಡಿಮೆ ಆಹಾರವನ್ನು ಅವರಿಗೆ ಕೊಡಬೇಕು. ಆಗ ಬರ್ತಾರೆ ದಾರಿಗೆ."

ಕೃಷ್ಣಯ್ಯ ನಿಟ್ಟುಸಿರುತೆಗೆದು ನೋಡಿದ ಅಂಗಳದಾಚೆ. ಗಣೇಶ ಆಗಲೇ ಅಂಗಳದ ತುದಿ ದಾಟಿ ಕಣ್ಮರೆಯಾಗಿ ಹೋಗಿದ್ದಾನೆ. ತಾನು ಅವನನ್ನೇ ಹಿಂಬಾಲಿಸಿ ಹೋಗಿ ಕರೆದು ತಂದು ಊಟ ಬಡಿಸಬೇಕು ಎಂದೆನಿಸಿತು. ಗಣೇಶ ಸೋಮಾರಿ, ಕೆಲಸಗಳ್ಳನಾಗಿರಲೇ ಇಲ್ಲ. ತನ್ನ ಪ್ರಾಯಕ್ಕಿಂತಲೂ ಹೆಚ್ಚಿಗೆ ಕೆಲಸ ಮಾಡುತ್ತಿದ್ದಾನೆ ಇಲ್ಲಿ. ಅಷ್ಟು ದೊಡ್ಡ ಕೋಣಗಳು ಸಾಧು ಸ್ವಭಾವದವಾದರೇನಂತೆ, ಅವನ್ನು ಹಿಡಿದುಕೊಂಡು ಗದ್ದೆ ಉಳುವಾಗ ತನಗೇ ಹೆದರಿಕೆಯಾಗುವದುಂಟು. ಕತ್ತಿ ಹಿಡಿದು ಅಭ್ಯಾಸವಿಲ್ಲದ ಪುಟ್ಟ ಕೈಗಳಿಗೆ ಈಗ ಕತ್ತಿ ತಪ್ಪಿದ್ದಲ್ಲ. ಒಂದು ಪುಸ್ತಕವನ್ನೂ ತಲೆಯ ಮೇಲಿಟ್ಟು ನಡೆಯಲು ತಿಳಿಯದವನಿಗೆ ಹೊರಲಾರದ ದೊಡ್ಡದೊಡ್ಡ ಹೊರೆಗಳನ್ನು ಹೊರ ಬೇಕು ಗೋಣಗಿಡದೆ. ಅವನ ಮೈಬಣ್ಣ ಹೇಗೆ ಕಪ್ಪಾಗಿಹೋಗಿದೆ ಈ ದಿನ ಗಳಲ್ಲಿ....? ಸುಮಿತ್ರ ಹೇಳುವದನ್ನೆಲ್ಲ ಮರುಮಾತಿಲ್ಲದೆ ಮಾಡಲು ಅವನು ಸಿದ್ಧ. ಆದರೆ ಸದಾಕಾಲ ಅವಳಿಗೆ ಅವನಮೇಲೆ ಮುನಿಸು. ನಿಜ, ತನ್ನ ಮಗುವಲ್ಲ....ಯಾರದೋ ಮಗು!

ಆದರೆ ತಾನೇಕೆ ಹೀಗಾಗಿದ್ದೇನೆ? ಅಕ್ಕ ಬದುಕಿದ್ದರೆ ಗಣೇಶನನ್ನು ಹೇಗೆ ನೋಡಿಕೊಳ್ಳುತ್ತ ಇದ್ದಳೋ? ತನ್ನ ಮತ್ತಿಬ್ಬರು ಮಕ್ಕಳಂತೆ ಇವನ ಮೇಲೆಯೂ ಇದ್ದ ಭಾವನೆಗಳು ಬುಡಮೇಲಾಯಿತೆ?

ಎಲೆಅಡಿಕೆಯ ತಟ್ಟೆಯನ್ನು ಎತ್ತಿಕೊಂಡು ಕೆಳಗೆ ಕುಳಿತು ಮಲಗಿದ್ದ ಸುಮಿತ್ರಳತ್ತ ನೋಡಿದ. ಸಂಬಂಧಗಳು ನಮಗರಿವಿಲ್ಲದಂತೆ ಆಗಿಹೋಗುತ್ತವೆ. ಕಾರಣರು ಯಾರೋ ಏನೊ. ಋಣವಿದ್ದೆಡೆ ಇರುವಷ್ಟು ದಿನಗಳು ಈ ಸಂಬಂಧ ಗಳು ಉಳಿದುಕೊಂಡು ಬೆಳೆಯುತ್ತವೆ. ಒಂದಕ್ಕೊಂದು ಪೂರಕವಾಗುತ್ತವೆ. ಋಣ ಮುಗಿದಾಗ ಕಳಚಿಕೊಳ್ಳುತ್ತವೆ ಒಂದೊಂದೇ ಸಂಬಂಧಗಳು.

ಅಕ್ಕ ತೀರಿಹೋದ ವರ್ಷದೊಳಗೆ ಎರಡು ಮಕ್ಕಳ ತಾಯಿಯಾದ

ಆರು ಎಕರೆ ಭೂಮಿಯ ಒಡತಿಯಾದ ವಿಧವೆ ಸುಮಿತ್ರಳನ್ನು ಮದುವೆಯಾಗಿ ಜೆಳ್ಳಿಪಾಡಿಗೆ ಬಂದು ನೆಲೆಸಿದ್ದು ಒಂದು ಯೋಗಾಯೋಗವೇ ಸರಿ. ಇನ್ನೂ ತಾರುಣ್ಯದಲ್ಲಿರುವ ಕೃಷ್ಣಯ್ಯನಿಗೆ ಹುಡುಗಿಯರು ಬೇಕಾದಷ್ಟು ಸಿಗುತ್ತಿರ ಲಿಲ್ಲವೆ? ಅವನ ಮೂರು ಮಕ್ಕಳನ್ನು ನೋಡಿಕೊಳ್ಳುವಂತಹ ಹುಡುಗಿಯರಿಗೆ ಬರಗಾಲವಿತ್ತೆ? ಅಥವಾ ಇವನಿಗಾಗಿ ಯಾವ ತಂದೆಯೂ ಹೆಣ್ಣನ್ನು ಕೊಡಲು ಮುಂದಾಗಲಿಲ್ಲವೇ? ತಿಳಿದು ತಿಳಿದು ತನ್ನ ಸಮವಯಸ್ಕಳಂತೆ ಅನ್ನಿಸುವ ವಿಧವೆಯನ್ನು ಮದುವೆಯಾಗುವದೆಂದರೆ ಇಂದಿನ ದಿನಗಳಲ್ಲಿ ಬಹು ದೊಡ್ಡ ಕ್ರಾಂತಿಯೇ ಸರಿ. ಆದರೆ ಅವನಿಗೇನು ಹುಚ್ಚು ಭ್ರಾಂತಿ ಹಿಡಿದಿರಲಿಲ್ಲ. ಪೂರ್ವಜನ್ಮದ ಋಣಾನುಬಂಧವೆನ್ನುವಂತೆ ಅಕ್ಕನ ಸ್ಥಾನದಲ್ಲಿ ಅವಳನ್ನು ತಂದುಕೊಂಡಿದ್ದಾನೆ. ಅಕ್ಕನಂತೆ ಅವಳನ್ನು ಪ್ರೀತಿಸುವುದು ಸಾಧ್ಯ ವಾಗದೇಹೋದರೂ, ತನ್ನ ಮಕ್ಕಳಂತೆ ಅವಳ ಮಕ್ಕಳನ್ನು ನೋಡಿಕೊಳ್ಳಲು ಅಳುಕು ಉಂಟಾದರೂ ಅವನಿಗೆ ಜೆಳ್ಳಿಪಾಡಿ ಮನೆ ಏನೋ ಒಂದು ವಿಧದ ನೆಮ್ಮದಿ ತಂದಿದೆ. ಇದು ನನ್ನ ಮನೆ, ಸುಮಿತ್ರ ತನ್ನವಳು, ಅವಳ ಭೂಮಿ ತನ್ನದು, ಮಕ್ಕಳೂ ತನ್ನವರು ಎಂದುಕೊಂಡು ತನ್ನನ್ನು ಕೃಷಿಗಾಗಿ ತ್ಯಾಗ ಮಾಡಿಕೊಂಡಿದ್ದಾನೆ!

ಶಂಕರ, ಸುನಂದೆಯನ್ನು ತೋನ್ಸೆಯಿಂದ ಕರೆದುಕೊಂಡು ಬಂದು ತನ್ನ ಜೊತೆಯಲ್ಲಿಯೇ ಉಳಿಸಿಕೊಂಡಿದ್ದರೆ ಸುಮಿತ್ರಳನ್ನು ಅಪಾರವಾಗಿ ಗೌರವಿ ಸುತ್ತಿದ್ದ. ಸುಮಿತ್ರ ಈ ಒಂದು ವಿಷಯದಲ್ಲಿ ವಿರೋಧಿ. ಮದುವೆಗೆ ಮೊದಲು ಅವಳು ಏನನ್ನೂ ಹೇಳಿರಲಿಲ್ಲ. ಅವಳ ಮಕ್ಕಳೂ ಬಂದಿರಲಿಲ್ಲ ಮದುವೆಗೆ. ಅನಂತರ ಅವರನ್ನು ಕರೆಯಿಸಿಕೊಳ್ಳುತ್ತೇನೆ ಎಂದು ಕೃಷ್ಣಯ್ಯ ಹೇಳಿದಾಗ ಮಲತಾಯಿ ಧೋರಣೆಯಿಂದ, 'ನಾನು ಎಳೆಯರನ್ನು ಗೋಳು ಹುಯ್ದು ಕೊಳ್ಳುವ ಪಾಪವನ್ನು ಹೊತ್ತುಕೊಳ್ಳಲಾರೆ. ಅವರು ಅಜ್ಜನ ಮನೆಯಲ್ಲೇ ಇರಲಿ' ಎಂದುಬಿಟ್ಟಳು. ಗಣೇಶನ ಭಾರವೂ ಹೊರೆ ಆವಳಿಗೆ. ಕೃಷ್ಣಯ್ಯ ಅವನನ್ನು ಬಿಟ್ಟಿರಲಾರದೆ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಉಳಿಸಿಕೊಂಡಿ ದ್ದಾನೆ ತನ್ನ ಜೊತೆಯಲ್ಲಿ.

ನಿಜವಾಗಿಯೂ ಅವಳೂ ಅನೇಕ ರೀತಿಯಲ್ಲಿ ಎದುರುಹಾಕಿಕೊಂಡಿ ದ್ದಾಳೆ ತನ್ನ ಬಂಧುಗಳನ್ನು. ಸಮಾಜದ ತುಚ್ಛದೃಷ್ಟಿ. ಮೆಚ್ಚುವ ಸಹೃದಯತೆ

ಇಲ್ಲ. ಬೆಳ್ಳಿಪಾಡಿಯಲ್ಲಿ ಅವಳ ಹೆಸರಿನಲ್ಲಾದ ಭೂಮಿ ಪಿತ್ರಾರ್ಜಿತವಾಗಿ ಅವಳ ಮೊದಲ ಪತಿಗೆ ದೊರೆತಿರಲಿಲ್ಲ. ಅವಳ ತಂದೆ ನರಸಿಂಹ ಭಟ್ಟರ ಒಕ್ಕಲು. ಆರೆಂಟು ಎಕರೆ ಗದ್ದೆಯನ್ನು ಗೇಣಿಗೆ ಮಾಡಿಕೊಂಡು ಎಷ್ಟೋ ವರ್ಷಗಳಿಂದ ಬೇಸಾಯ ಮಾಡುತ್ತ ಭಟ್ಟರು ನಿಗದಿಪಡಿಸಿದ ಗೇಣಿಯನ್ನು ಕೊಡುತ್ತ ಬಂದಿದ್ದಾರೆ. ಕಾನೂನು ರೀತ್ಯಾ ಈಗ ಮೂರು ವರ್ಷಗಳಿಂದ ಗೇಣಿ ಕೊಡುವದು ನಿಂತಿದೆ.

ಅವಳ ತಂದೆಗೆ ಇಬ್ಬರೇ ಹುಡುಗಿಯರು. ಇಬ್ಬರಿಗೂ ಮದುವೆ ಮಾಡಿಸಿ ಅಳಿಯಂದಿರನ್ನೂ ಇರಿಸಿಕೊಂಡಿದ್ದಾನೆ ತನ್ನ ಮನೆಯಲ್ಲಿ. ಅಳಿಯಂದಿರು ಹೊಂದಿಕೊಂಡಿದ್ದರು ಹಿರಿಯರಿಗೆ. ಅಕ್ಕತಂಗಿಯರಲ್ಲಿತ್ತು ಅನ್ಯೋನ್ಯತೆ. ಹಿರಿಯವಳಿಗೆ ನಾಲ್ಕು ಮಕ್ಕಳು. ಕಿರಿಯವಳಾದ ಸುಮಿತ್ರಳಿಗೆ ಇಬ್ಬರೂ ಹುಡುಗಿಯರು. ಎಲ್ಲವೂ ಒಪ್ಪವಾಗಿತ್ತು. ಆದರೆ ಸುಮಿತ್ರಳ ಪತಿ ಹಾವು ಕಚ್ಚಿಸಿಕೊಂಡು ಅಪಮೃತ್ಯುವಿಗೆ ತುತ್ತಾದಾಗ, ಎಂದೆಂದಿಗೂ ಅವನಿಲ್ಲದಾಗ ಬದಲಾಯಿತು ಸುಮಿತ್ರಳ ಚಹರೆ. ಮುಂದೆ ತಂದೆತಾಯಿಗೆ ತಿಳಿಯದಂತೆ ಪರಿಚಿತರ ಮುಖಾಂತರ ಕೃಷ್ಣಯ್ಯನೊಡನೆ ಮರುಮದುವೆಯ ಏರ್ಪಾಟು! ಮನೆಯಲ್ಲಿ ಬಾಂಬು ಸ್ಫೋಟನ. ಜಗಳ, ಗಲಾಟೆ. ಸುಮಿತ್ರ ಬೆದರಲಿಲ್ಲ, ಜಗ್ಗಲಿಲ್ಲ. ಕೃಷ್ಣಯ್ಯನನ್ನು ಮದುವೆಯಾಗಿ ಇದೇ ಮನೆಯಲ್ಲಿ ಉಳಿಯುತ್ತೇನೆ ಎಂದಾಗ ಕೂಗಾಡಿದ ತಂದೆ ಮನೆ ಮುಳಿಹುಲ್ಲು ಹಾರಿಹೋಗುವಂತೆ, ಗೇಣಿ ಆಸ್ತಿಯಲ್ಲಿ ಚಿಕ್ಕಾಸೂ ಕೊಡಲಾರೆ ಎಂದ. ಆದರೂ ಮಗಳ ಮೇಲಿನ ವ್ಯಾಮೋಹ. ಮನೆ ಒಡೆಯಿತು ಎರಡಾಗಿ. ಪಾಲಾಯಿತು ಗೇಣಿಭೂಮಿ. ಈಶಾನ್ಯ ದಿಕ್ಕಿನಲ್ಲಿ ಎದ್ದಿತು ಅವಳ ಅಕ್ಕ ಯಶೋದೆಯ ಹೊಸ ಮನೆ. ತಂದೆತಾಯಿ ಅಲ್ಲಿಗೆ ಹೋದರು! ಕೃಷ್ಣಯ್ಯ ಬಂದು ನೆಲೆಸಿದಮೇಲೆ ಸುಮಿತ್ರಳೊಂದಿಗೆ ಮನೆಯವರ ಮಾತುಕತೆಗಳು, ಹೋಗಿಬರುವ ವ್ಯವಹಾರಗಳು ಸ್ಥಗಿತಗೊಂಡು ನಗಲಾರಂಭಿಸಿದರು ತಮ್ಮೊಳಗೆ. ಊರಲ್ಲೆಲ್ಲ ಹ್ಪೆಯುತ್ತ ತಿರುಗಿದಳು ತಾಯಿ. ಆದರೆ ಮೊಮ್ಮಕ್ಕಳ ಪ್ರೇಮಪಾಶ ಅಷ್ಟು ಸುಲಭದಲ್ಲಿ ಕಳಚಿಕೊಳ್ಳುವ ಕೊಂಡಿಯಲ್ಲ. ಮಗಳನ್ನು ದೂರವಿರಿಸಿದರೂ ಮೊಮ್ಮಕ್ಕಳನ್ನು ದೂರ ಮಾಡದಾದರು. ತಮ್ಮ ಬೇಲಿಯಿಂದಾಚೆ ಹುಡುಗಿಯರನ್ನು ನೋಡಿ ಮಾತನಾಡಿಸುತ್ತಾರೆ, ಹಬ್ಬದ ದಿನಗಳಲ್ಲಿ ಊಟಕ್ಕೆ ಆಹ್ವಾನಿಸುತ್ತಾರೆ. ಅಜ್ಜ

ಅಜ್ಜ-ಅಜ್ಜಿಯಲ್ಲಿಗೆ ಮಕ್ಕಳು ಹೋದರೂ ಸುಮಿತ್ರ ಹೋಗಿಬರುವುದನ್ನು ನಿಲ್ಲಿಸಿದ್ದಾಳೆ. ಗಣೇಶನೂ ಅಲ್ಲಿಗೆ ಹೋಗಬಾರದೆಂದು ಕಟ್ಟಪ್ಪಣೆ.

ಮೊದಮೊದಲು ಈ ವಿಚಿತ್ರ ಜೋಡಿಯನ್ನು ಕಂಡು ಎಲ್ಲರಿಗೂ ತಮಾಷೆ. ಇಲ್ಲದ ಕೆಟ್ಟ ಕುತೂಹಲ. ಚೇಡದ ಮಾತುಗಳು. ಇಬ್ಬರೂ ಸೊಪ್ಪು ಹಾಕಲಿಲ್ಲ ಯಾರ ಮಾತಿಗೂ. ಒಂದು ದಿನ ಕೃಷ್ಣಯ್ಯನಿಗೆ ಕೇಳಿಸು ವಂತೆ ಯಾರೋ ಸುಮಿತ್ರಳನ್ನು ಅಶ್ಲೀಲವಾಗಿ ಆಡಿಕೊಂಡಾಗ ಅವನ ಪಿತ್ತ ನೆತ್ತಿಗೇರಿ ಕತ್ತಿ ಎತ್ತಿಕೊಂಡು ಹೊಡೆಯಲು ಹೋಗಿದ್ದ. "ಯಾರಾದರೂ ನಮ್ಮ ಬಗ್ಗೆ ಹೇಳಿದಿರೋ ನಾಲಿಗೆ ಸೀಳಿಬಿಡ್ತೇನೆ, ಜೋಕೆ!" ಎಂದು ಹೆದರಿಸಿದ.

"ಜನ ನೂರು ಅನ್ನಲಿ, ನೀನೇನೂ ಚಿಂತಿಸಬೇಡ. ನನ್ನ ಕೂದಲು ಮುಟ್ಟುವ ಧೈರ್ಯ ಯಾವ ಗಂಡುಮಗನಿಗಿದೆ ನೋಡೋಣ!" ಸುಮಿತ್ರಳಿಗೆ ಅವನಿಂದಲೇ ಸಮಾಧಾನದ ನುಡಿಗಳು.

ಮೀಸೆ ತೀಡಿಕೊಳ್ಳುತ್ತ ತನ್ನಲ್ಲೇ ಜೋರಾಗಿ ನಕ್ಕ ಕೃಷ್ಣಯ್ಯ. ಇನ್ನೂ ಏನೇನೋ ನೆನಪಿನಾಳವನ್ನು ಕೆದಕುತ್ತಿದ್ದಂತೆ ಸುಮನ, ಯಮುನ ಮಧ್ಯಾಹ್ನದ ಊಟಕ್ಕೆಂದು ಹಿಂದಿರುಗಿದ್ದರು ಶಾಲೆಯಿಂದ. ಅವನು ಗೊರಕೆ ಹೊಡೆಯುತ್ತ ಮಲಗಿದ್ದ ಹೆಂಡತಿಯನ್ನು ಎಬ್ಬಿಸದೆ ತಾನೇ ಅವರಿಬ್ಬರಿಗೂ ಬಡಿಸಿ ಎಂಜಲನ್ನು ತೆಗೆದು ತಿನ್ನಲು ಬಾಳೇಹಣ್ಣನ್ನೂ ಕೊಟ್ಟ.

"ಚಿಕ್ಕಪ್ಪಾ....ಗಣೇಶ ಎಲ್ಲಿ?" ಎಂದು ಕೇಳಿದಳು ಸುಮನ ಅತ್ತಿತ್ತ ನೋಡುತ್ತ.

"ಭಟ್ಟರ ತೋಟದಿಂದ ಸೋಗೆ ತರಲು ಹೋಗಿದ್ದಾನೆ. ಬಂದಾನು ಈಗ."

"ಏನಿಲ್ಲ ಮತ್ತೆ ಅವನು...." ಏನೋ ಹೇಳಲು ಬಾಯ್ತೆರೆದ ಸುಮನ ಮಾತನ್ನು ಅಷ್ಟಕ್ಕೆ ನಿಲ್ಲಿಸಿ ತಂಗಿಯನ್ನು ಕರೆದುಕೊಂಡು ಹೊರಟುಹೋದಳು ಶಾಲೆಗೆ. ಅವರ ಇನ್‌ಸ್ಪೆಕ್ಷನ್ ಮುಗಿದಿರಲಿಲ್ಲ.

ಸ್ವಲ್ಪ ಹೊತ್ತಿಗೆಲ್ಲ ಗಣೇಶ ದೊಡ್ಡದಾದ ಸೋಗೆ ಕಟ್ಟನ್ನು ಹೊತ್ತುಕೊಂಡು ಬಂದು ಅಂಗಳದ ಬದಿಯಲ್ಲಿ ದೊಪ್ಪನೆ ಕೆಳಗೆ ಹಾಕಿದ. ಮೈ ಬೆವರಿನಿಂದ ತೊಯ್ದುಹೋಗಿತ್ತು. ಅವನನ್ನು ಕಾಯುತ್ತಿದ್ದ ಕೃಷ್ಣಯ್ಯ

ಹೊರಗೆ ಬಂದ, "ಬಾ, ಊಟ ಬಡಿಸ್ತೇನೆ" ಎಂದ.

"ಉಫ್...." ಮೈಮೇಲಿನ ಕಸವನ್ನು ಕೊಡವಿಕೊಂಡ. "ದೊಡ್ಡಮ್ಮ, ಊಟ ಬಡಿಸದೇ ಇದ್ದರೆ ಅಷ್ಟೇ ಹೋಯ್ತು. ಭಟ್ಟರ ಮನೇಲಿ ನನ್ನ ತಲೆ ಕಂಡಾಕ್ಷಣ ಹಾಳೆ ತುಂಬ ಅನ್ನ ಬಡಿಸಿದರು. ನೋಡು, ನನ್ನ ಹೊಟ್ಟೆ ಹೇಗಾಗಿದೆ...." ಅವನು ಎತ್ತಿ ತೋರಿಸಿದ ಅಂಗಿಯನ್ನು. ಚಡ್ಡಿ ಗುಂಡಿಗಳು ಬಿರಿದುಹೋಗುವಂತಿತ್ತು.

"ಇನ್ನೊಂದು ಕಟ್ಟು ಸೋಗೆಯನ್ನು ಅರ್ಧದವರೆಗೂ ಹೊತ್ತು ತಂದು ಹೊಂಗಾರೆ ಮರದ ಕೆಳಗೆ ಹಾಕಿದ್ದೇನೆ. ಅಪ್ಪಾ....ನನ್ನ ಜೊತೆ ಈಗ ಯಾರಿದ್ದಾರೆ ಗೊತ್ತ?"

ಕೃಷ್ಣಯ್ಯ ಸುತ್ತಲೂ ನೋಡುತ್ತಿದ್ದಂತೆ ಕಪ್ಪುವರ್ಣದ ಒಂದು ನಾಯಿಮರಿ ಕುಣಾಗುಡುತ್ತ ಓಡುತ್ತಬಂದಿತು ಅಂಗಳಕ್ಕೆ. ಗಣೇಶ ಅದನು ಬಾಚಿ ತಬ್ಬಿಕೊಂಡು ಮೈಸವರಿದ. "ನೋಡಪ್ಪ ಎಷ್ಟು ಚೆಂದದ ಮರಿಯಿದು! ಭಟ್ಟರ ಮನೆ ಹತ್ರವೇ ಸಿಕ್ತು. ಅವರು ಕೊಟ್ಟ ಅನ್ನ ಹೆಚ್ಚಾಯ್ತು ಅಂತ ಇದಕ್ಕೆ ಹಾಕಿದ್ದೆ. ಸೈ, ನನ್ನ ಹಿಂದೆಯೇ ಬಂದುಬಿಡ್ತು.

"ಯಾವ ಕೊಳಕು ನಾಯಿಯೋ. ಹೊಡೆದು ಓಡಿಸು ಅದನ್ನು."

"ಇರಲಿ ಅಪ್ಪಾ." ಅದನ್ನು ಎತ್ತಿಕೊಂಡೇ ಒಳಗೆ ಬಂದ ಗಣೇಶ, "ಹೇಗೂ ನೀನು ಹೊಸ ಅಡಿಕೆ ತೋಟವನ್ನು ಇಟ್ಟಿದ್ದಿ. ಅದನ್ನು ಕಾಯೋದಕ್ಕೆ ನಾಯಿ ಬೇಡವೇ?" ಎಂದು ಕೇಳಿದ.

"ಏನಂತೆ ಇವನ ರಗಳೆ?"—ಆಕಳಿಸುತ್ತ ಎದ್ದು ಕುಳಿತ ಸುಮಿತ್ರಳ ದೃಷ್ಟಿಗೆ ಮೊದಲು ಕಂಡದ್ದು ನಾಯಿಮರಿ.

"ಅದೇನು ನಿನ್ನ ಕೈಯಲ್ಲಿ? ಎಲ್ಲಿಂದ ತಂದೆ?" ಎಂದ ಕೇಳಿದಳು ಅನುಮಾನದಲ್ಲಿ.

"ಮನೆ ಕಾಯಲು ತಂದಿದ್ದೇನೆ ನಾಯಿಮರಿಯನ್ನು. ತುಂಬ ಚೆಂದ ವಾಗಿದೆ, ದೊಡ್ಡಮ್ಮ. ನಿಂಗೆ ಇಷ್ಟವಾಗಬಹುದು. ಮನೆ ಕಾಯೊದಕ್ಕೆ ನಾಯಿ ಇದ್ದರೆ ಒಳ್ಳೆಯದಲ್ಲವೇ?"

"ಇಲ್ಲೇನು ಹೆಡಿಗೆ ಸಂಪತ್ತು ಇದೆ ಅಂದುಕೊಂಡಿದ್ದಿಯಾ? ಎಲ್ಲಿಂದ ಕದ್ಕೊಂಡು ಬಂದಿದ್ದಿಯೋ ಅಲ್ಲಿಗೇ ಬಿಟ್ಟು ಬಾ."

"ಊಹೂಂ, ನಾನು ಸಾಕಿಕೊಳ್ತೀನಿ."

"ಏನು?"—ವಿಕಟವಾಗಿ ನಕ್ಕು ಸುಮಿತ್ರ ಅವನ ಹತ್ತಿರ ಬಂದಳು. "ನೀನು ನೋಡಿಕೊಳ್ತಿಯೇನೊ? ನಿನ್ನ ಕೂಳಿಗೇ ಅಧ್ವಾನವಾಗಿರುವಾಗ ಇವನು ಬೇರೆ ಇಲ್ಲಿ ನಾಯಿ ಸಾಕ್ತಾನಂತೆ! ಹೊರಗೆ ಓಡಿಸು...."

ಇಲ್ಲ ಎಂಬಂತೆ ತಲೆಯಲ್ಲಾಡಿಸಿದ ಗಣೇಶ. ಅವನ ಕಣ್ಣುಗಳು ಗಲಗಲನೆ ತಿರುಗಿದವು. ತನ್ನ ಎಡಗೈಯಿಂದ ಅವನ ಅಗಲವಾದ ಕಿವಿಯನ್ನು ಹಿಡಿದು ದರದರನೆ ಎಳೆದು ತಂದಳು ಹೊರಗೆ. "ಗರಸೆ ಕಿವಿಗಳ ಬಡ್ಡ! ನಿನ್ನ ಪೊಂಡಾಟ ಜಾಸ್ತಿಯಾಗ್ತಾ ಇದೆ. ಇನ್ನೊ ಒಂದ್ನಾಕು ದಿನ ಉಪವಾಸ ಇರಿಸ್ತೀನಿ ನೋಡು."

ಕಿವಿ ನೋವಾದುದರಿಂದ ಕೈಗಳು ಕೆಳಗಿಳಿಸಿದವು ನಾಯಿಮರಿಯನ್ನು. ಅವಳು ಅದನ್ನು ಕಾಲಿನಿಂದ ಒದ್ದು ನೂಕಿದಳು. "ಬೀದಿಲಿರೋ ಕಂತ್ರಿ ನಾಯಿಗಳಿಗೆಲ್ಲ ನಿನ್ನಂತೆ ಇಲ್ಲಿ ಪ್ರವೇಶವಿಲ್ಲ! ತಿಳಿತೇನೋ ಹುಡುಗಾ.... ನಾನು ಹೇಳಿದ ಕೆಲ್ಸ ಮಾಡಿದಿಯಾ?"

ಅವನು ತಲೆಯಲ್ಲಾಡಿಸುತ್ತಿದ್ದಂತೆ ನಾಯಿಮರಿ ಕುಂಯಿಗುಡುತ್ತ ಮತ್ತೆ ಬಂದಿತು ಕಾಲಿನ ಹತ್ತಿರ. ಸುಮಿತ್ರ ಅಲ್ಲೇ ನಿಂತ ಕೃಷ್ಣಯ್ಯನತ್ತ ತಿರುಗಿದಳು. "ಹಾಳಾದ ಪೀಡೆಯನ್ನು ಎಲ್ಲಿಯಾದರೂ ದೂರ ಬಿಟ್ಟು ಬನ್ನಿ.... ತಥ್ ಇವರ....ಇವನ ರಗಳೆ ಸಾಲದೂ ಎಂದು ಇವನಂತೆ ಇರುವ ನಾಯಿ ಬೇರೆ ಬಂದಿದೆ....ಕಳಿಸಿಬಿಡಿ ದೂರ...."

ರಾತ್ರಿ ತಾನು ಉಣ್ಣುವ ಅನ್ನದಲ್ಲಿ ಎರಡು ತುತ್ತು ಉಳಿಸಿ ಸುಮಿತ್ರಳಿಗೆ ಕಾಣಿಸದಂತೆ ಹೊರಗೆ ಬೇವಿನ ಮರದ ಕೆಳಗಿಟ್ಟ. ನಾಯಿಮರಿ ಬಾಲ ಅಲ್ಲಾಡಿಸುತ್ತ ನೆಕ್ಕಿನೆಕ್ಕಿ ಮಣ್ಣುಸಮೇತ ತಿಂದು ಮುಗಿಸಿ ಅವನ ಕಾಲುಗಳಿಗೆ ಸುತ್ತಿಕೊಂಡಿತು. ಗಣೇಶ ದನದ ಕೊಟ್ಟಿಗೆಯ ಮೂಲೆಯಲ್ಲಿ ಒಂದು ಗೋಣಿಯನ್ನು ಹಾಸಿ ಮಲಗಿಸಿದ ಅದನ್ನು. "ನಿನ್ನನ್ನು ಯಾರು ಹೊರಗೆ ಹಾಕ್ತಾರೋ ನಾನೂ ನೋಡ್ತೀನಿ, ಪುಟ್ಟಾ."

ದನಗಳ ಕೊರಳಹಗ್ಗವನ್ನು ಸರಿಪಡಿಸಿ ಹುಲ್ಲುಹಾಕಲು ಬಂದ ಕೃಷ್ಣಯ್ಯ ಲಾಟೀನ್‌ನ ಬೆಳಕಿನಲ್ಲಿ ಗಣೇಶನನ್ನು ನೋಡಿ ಅವನತ್ತ ಬಗ್ಗಿದ. "ಮತ್ತೆ ಬಂದಿತಾ ಇದು....? ನಿನಗಾದರೂ ಯಾಕೆ ಇಷ್ಟು ಹಟ? ಅವಳು ಹೇಳಿದ್ದಾಗೆ

ಕೇಳಿಕೊಂಡಿರು ಸುಮ್ಮನೆ."

ಅವನನ್ನು ಹಿಂಬಾಲಿಸಿ ಬಂದಿದ್ದ ಯಮುನ, "ಆಹಃ! ಎಲ್ಲಿಂದ ತಂದೆ ಇದನ್ನು...." ಎನ್ನುತ್ತ ಕೆಳಗೆ ಕುಳಿತಳು, ತನ್ನ ಲಂಗವನ್ನು ಮುದ್ದೆಮಾಡಿ ಕೊಂಡು. "ಚಿಕ್ಕಪ್ಪ, ದೀಪವನ್ನು ಇಲ್ಲೇ ಇಟ್ಟುಹೋಗು. ನಂಗೆ ಮರಿಯನ್ನು ಸರಿಯಾಗಿ ನೋಡ್ಬೇಕು. ಅಕ್ಕ ಆಗಲೇ ಹೇಳಿದ್ಲು ಇಲ್ಲಿಗೆ ಒಂದು ನಾಯಿ ಮರಿ ಬಂದಿದೆಯೆಂದು. ಅಮ್ಮ ಜೈದಳಂತೆ...."

ಗಣೇಶ ನಸುನಕ್ಕ. ತನ್ನಂತೆ ಅವಳಿಗೂ ನಾಯಿ ಸಾಕಲು ಇಷ್ಟವೆಂದು ಅರಿತು ಖುಷಿಯಾಯಿತು. ಮೆಲ್ಲನೆ ಅಂದ: "ನಿನ್ನ ಅಮ್ಮನಿಗೆ ಇಷ್ಟವಿಲ್ಲದಿದ್ದರೆ ನಾವು ಸಾಕೋಣ!"

"ಓಹೋ! ಗಂಜಿ ನೀರು ಹಾಕಿದರೂ ಸಾಕು ಇದಕ್ಕೆ. ಪಾಪ—" ಯಮುನ ಮರಿಯ ರೇಶ್ಮೆಯಂತಹ ಕಪ್ಪುಕೂದಲನ್ನು ಸವರಿದಳು, "ತನ್ನ ಅಮ್ಮನನ್ನು ಬಿಟ್ಟು ಬಂದು ಬಹಳ ದುಃಖವಾಗಿರಬೇಕಲ್ಲ. ನಾವೇ ಇದರ ಅಪ್ಪ-ಅಮ್ಮ ಆಗೋಣ....ನಮಗೆ ಆಟ ಆಡೋದಕ್ಕಾಯ್ತು."

ಕೊಟ್ಟಿಗೆಯ ಬೈಪಣೆಯನ್ನು ಒರಗಿನಿಂತ ಕೃಷ್ಣಯ್ಯನ ಮನಸ್ಸು ಇನ್ನೆಲ್ಲೋ...."ತಾಯಿಯಿಲ್ಲದ ಅವನಿಗೆ ನಾವೇ ಅಪ್ಪ-ಅಮ್ಮ....!" ಅಕ್ಕನ ಪಿಸುಧ್ವನಿಯಲ್ಲಿ ಹೇಳಿದಂತಾಗಿ ಕಳವಳಗೊಂಡಿತು ಮನಸ್ಸು. ಲಾಟೆನನ್ನು ಅಲ್ಲೇ ಇರಿಸಿ ಸರಿದು ಹೋದ ಅಲ್ಲಿಂದ.

"ಇವತ್ತು ಶಾಲೆಗೆ ಯಾಕೆ ಬಂದಿದ್ದಿ, ಗಣೇಶ?" ಪಿಸುಧ್ವನಿ ತೆಗೆದಳು ಯಮುನ. "ಹೆಡ್‌ಮಾಸ್ತರರು ನನ್ನನ್ನು ಅಕ್ಕನನ್ನು ತಮ್ಮ ಕೋಣೆಗೆ ಕರೆದು, 'ನಿಮ್ಮ ಮನೇಲಿ ಇರುವ ಹುಡುಗನಿಗೆ ಬುದ್ಧಿ ಹೇಳಿ' ಎಂದು ನಮ್ಮನ್ನು ಜೋರು ಮಾಡಿದ್ರು. ಇನ್ಮೇಲೆ ಹಾಗೆಲ್ಲ ಕಲ್ಲು ಬಿಸಾಡಿ ಗಲಾಟೆ ಮಾಡ್ಬೇಡ...."

"ನನಗೂ ಕಲಿಯುವ ಆಸೆ. ಕಲಿತು ತುಂಬ ದೊಡ್ಡವನಾಗ್ಬೇಕು. ಇದ್ದಾಳೆ ನೋಡು ನಿನ್ನ ಅಮ್ಮ....ಅವಳಿಂದ ನನಗೆ ಊಹೂಂ....ಸಾಧ್ಯವೇ ಇಲ್ಲ ಯಾವುದೂ."

"ಛೆ!....ಪಾಪ...." ಲಾಟಿನ್‌ನ ಮಂದ ಪ್ರಕಾಶದಲ್ಲಿ ಅವನ ಮುಗ್ಧವಾದ ಕಣ್ಣುಗಳನ್ನು ನೋಡುತ್ತ ಅಂದಳು ಎದುರು ಕುಳಿತವಳು, "ನನ್ನ

ಪುಸ್ತಕಗಳು ಇವೆ. ದಿನಾ ರಾತ್ರಿ ಓದಿ ಕಲಿ."

ನಗು ಬಂದಿತು ಗಣೇಶನಿಗೆ. ಇನ್ನೂ ಆರು ವರ್ಷದ ಹೊಸದಾಗಿ ಒಂದನೆಯ ಕ್ಲಾಸಿಗೆ ಸೇರಿದ ಹಸುಗೂಸು ಅವಳು. ಪುಸ್ತಕ ಪಾಟಿಯ ಮೇಲೆ ಅ, ಆ, ಇ, ಕಲಿಯುವ ವಯಸ್ಸು. ಅವಳ ಪುಸ್ತಕಗಳನ್ನು ತಾನು ಓದಿ ಕಲಿಯುವುದೇ? ಅವಳ ಹಾಲುಗೆನ್ನೆಯನ್ನು ಮೃದುವಾಗಿ ಹಿಂಡಿ ಕೇಳಿದ: "ನೀನು ಕಲಿಸ್ತೀಯಾ ನನಗೆ?"

"ಓಹೋ! ಯಾಕಾಗಬಾರದು? ಮಾಸ್ತರರು ನನಗೆಲ್ಲ ಹೇಳಿಕೊಟ್ಟಿದ್ದಾರೆ."

"ನಾಳೆಯಿಂದಲೇ ನಂಗೆ ಹೇಳಿಕೊಡು ನೋಡೋಣ. ನಾನು ಹಸಿ ಹಸಿ ದಡ್ಡ!"

ಯಮುನ ಅನುಮಾನದಲ್ಲಿ ಕಣ್ಣುಗಳನ್ನು ಅರಳಿಸುತ್ತಿದ್ದಂತೆ ಕೇಳಿಸಿತು ತಾಯಿಯ ಅಬ್ಬರದ ಧ್ವನಿ: "ಆಗ್ಲಿಂದಲೂ ಅಲ್ಲಿ ಯಾಕೆ ಕುಕ್ಕರು ಬಡಿದಿದ್ದಿಯೇ? ಬಾ ಇಲ್ಲಿ."

"ಇವಳೊಬ್ಬಳು ಅಮ್ಮ! ನಿನ್ನ ಜೊತೆ ಒಂದು ಗಳಿಗೆ ಮಾತನಾಡ್ತಾ ಇದ್ದರೆ ಶುರು ಮಾಡ್ತಾಳೆ ಗಲಾಟೆ." ಗೊಣಗುತ್ತ ಅವಳು ಲಾಟಿನು ಎತ್ತಿಕೊಂಡು ಹೊರಟಳು ಅಲ್ಲಿಂದ.

ಗಣೇಶ ತನ್ನ ಹಾಸಿಗೆ ಸುರುಳಿಯನ್ನು ಎತ್ತಿ ತಂದು ದನದ ಕೊಟ್ಟಿಗೆಯ ಮೂಲೆಯಲ್ಲಿ ಹಾಸಿಕೊಂಡ. ಇವತ್ತು ನಾಯಿಮರಿಯ ಸಹವಾಸ ಹೆಚ್ಚು ಇಷ್ಟವಾಗಿತ್ತು ಅವನಿಗೆ. ಹಿಂಡಿ ಅಕ್ಕಚ್ಚಿನ ಪರಿಮಳ, ದನಗಳ ಸೆಗಣಿ ಮೂತ್ರದ ವಾಸನೆ, ಗೊಬ್ಬರದ ಗಬ್ಬುನಾತ, ಸೊಳ್ಳೆಯ ಕಡಿತದಿಂದ ಸ್ಥಳವನ್ನು ಬಿಟ್ಟು ಕದಲಲಿಲ್ಲ. ನಾಯಿಮರಿಯ ಮಗ್ಗುಲಿನಲ್ಲಿ ತಲೆಯಿಟ್ಟು ಮಲಗಿದವನಿಗೆ ಮತ್ತೆ ನಿದ್ರೆ ಯಾವಾಗ ಆವರಿಸಿತೋ ತಿಳಿಯದು.

ಕೋಣನ್ಸೆಯಲ್ಲಿರುವ ತನ್ನ ಎರಡು ಮಕ್ಕಳಿಗೆ ಪ್ರತಿ ತಿಂಗಳೂ ಒಂದಿಷ್ಟು ಹಣ ವನ್ನು ಕೊಡುವ ಏರ್ಪಾಟು ಮಾಡಿಕೊಂಡಿದ್ದ ಕೃಷ್ಣಯ್ಯ. ತಾನೇ ಅಲ್ಲಿಗೆ ಹೋಗಿ ಒಂದೆರಡು ದಿನ ಮಾವನ ಮನೆಯಲ್ಲಿ ಉಳಿದು ಮಕ್ಕಳನ್ನು ವಿಚಾರಿಸಿಕೊಂಡು ಹಣದ ಜೊತೆಯಲ್ಲಿ ಅಗತ್ಯದ ಬಟ್ಟೆ, ಪುಸ್ತಕಗಳನ್ನು ಕೊಟ್ಟು ಹಿಂದಿರುಗುವದು ವಾಡಿಕೆ. ಇಬ್ಬರನ್ನು ಅಲ್ಲಿಯೇ ಸೇರಿಸಿದ್ದ ಶಾಲೆಗೆ. ಅಜ್ಜ ಅಜ್ಜಿಯ ನೆರಳಿನಲ್ಲಿ ಇರಲಿಲ್ಲ ಯಾವ ಭೀತಿ, ಕಾಳಜಿ. ಆದರೆ ಕೃಷ್ಣಯ್ಯ ನಿಗೆ ಸಹಜವಾದ ಪಿತೃವ್ಯಾಮೋಹ. ಮಕ್ಕಳು ಗಣೇಶನಂತೆ ತನ್ನ ಜೊತೆ ಯಲ್ಲಿಯೇ ಇರಲಿ ಎಂಬ ಬಯಕೆ. ಎಂದಾದರೂ ಒಂದು ದಿನ ಸುಮಿತ್ರಳ ಬುದ್ಧಿ ಬದಲಾಗಿ ಅವರನ್ನು ಕರೆಯಿಸಿಕೊಳ್ಳಬಹುದು ಎಂಬ ದೂರದ ಮಿಣುಕು ಆಸೆ!

ಈ ತಿಂಗಳು ಹಣವನ್ನು ತೆಗೆದುಕೊಂಡು ಹೋಗಿ ಮಕ್ಕಳನ್ನು ನೋಡಿ ಕೊಂಡು ಬರಬೇಕು ಎಂದುಕೊಂಡರೂ ಮೇಲಿಂದಮೇಲೆ ವಿಘ್ನಗಳು. ಇರಿಸಿದ ಅಡಿಕೆತೋಟದ ಕೆಲಸಗಳು. ಇದರೊಂದಿಗೆ ನೆರೆಯಲ್ಲಿರುವ ಸುಮಿತ್ರಳ ಭಾವ ಗೋಪಣ್ಣನ ಜೊತೆಯಲ್ಲಿ ಪ್ರಾರಂಭವಾಯಿತು ನೀರಿನ ಜಗಳ.

ಆ ಸ್ಥಳದಲ್ಲಿ ಕೆರೆಯಿರಲಿಲ್ಲ. ಕೆರೆಯನ್ನು ತೋಡಿಸುವ ಸಾಮರ್ಥ್ಯವಿರ ಲಿಲ್ಲ ಸುಮಿತ್ರಳ ತಂದೆಗೆ. ಬದಿಯ ಕಾಡಿನಿಂದ ಮಳೆಗಾಲ ಕಳೆದಮೇಲೆಯೂ ಹರಿದು ಬರುವ ಒರತೆ ನೀರಿಗೆ ಕೊರತೆಯಿಲ್ಲದಿರುವುದರಿಂದ ಅದನ್ನೇ ಗದ್ದೆ ಗಳಿಗೆ ತಿರುಗಿಸಿಕೊಂಡು ಅಲ್ಲಲ್ಲಿ ಒಡ್ಡು ಕಟ್ಟಿ ನೀರನ್ನು ಬಳಸಿಕೊಳ್ಳುವದು ರೂಢಿಯಾಗಿತ್ತು. ಸುಮಿತ್ರಳಿಗೆ ಪಾಲು ಕೊಟ್ಟು ತನ್ನ ಗದ್ದೆಯನ್ನು ಮಾತ್ರ ಬೇಸಾಯ ಮಾಡಿಕೊಂಡಿದ್ದ ಗೋಪಣ್ಣನಿಗೆ ಕಳೆದ ವರ್ಷ ಸುಗ್ಗಿಯಲ್ಲಿ ಕೃಷ್ಣಯ್ಯ ತೆಗೆದ ಸಮೃದ್ಧವಾದ ಬತ್ತದ ಬೆಳೆಯನ್ನು ಕಂಡು ಕಣ್ಣು ಕುಕ್ಕಿ ಹೋಗಿತ್ತು. ತಾವೆಲ್ಲ ಒಂದಾಗಿ ಇದ್ದಾಗ ಎಲ್ಲ ಗದ್ದೆಗಳಲ್ಲಿಯೂ ತೆಗೆಯು ವಷ್ಟು ಬೆಳೆಯನ್ನು ಅವನು ಒಂದೇ ಒಂದು ಎಕರೆಯಲ್ಲಿ ತೆಗೆದಿದ್ದನೆಂದರೆ ಏನಾಶ್ಚರ್ಯ! ಗೋಪಣ್ಣನಿಗೆ ಕೃಷ್ಣಯ್ಯನ ಅರ್ಧದಷ್ಟು ಬೆಳೆ ಸಿಕ್ಕಿರಲಿಲ್ಲ. ತನ್ನ

ಮೇಲ್ಭಾಗದ ಗದ್ದೆಗಳಿಗೆ ಬಿಟ್ಟಿದ್ದ ನೀರೂ ಅದರೊಂದಿಗೆ ತಾನು ಹಾಕಿದ ಗೊಬ್ಬರದ ಸಾರವೂ ಕೆಳಭಾಗದ ಗದ್ದೆಗಳಿಗೆ ಕೊಚ್ಚಿ ಹೋದುದರಿಂದ ಕೃಷ್ಣಯ್ಯ ಅಷ್ಟು ಚೆನ್ನಾಗಿ ಬೆಳೆ ತೆಗೆದಿದ್ದಾನಲ್ಲವೇ ಎಂದುಕೊಂಡು ಅವನಿಗೆ ಅಸೂಯೆ, ದ್ವೇಷ ಹೊರಹೊಮ್ಮಿ ಬಂದಿತ್ತು.

ಈ ಸಲ ಹರಿದು ಬರುವ ನೀರನ್ನು ತನಗೆ ಇಷ್ಟಬಂದಂತೆ ತಿರುಗಿಸಿ ಕೊಂಡು ಒಡ್ಡು ಕಟ್ಟಿಸಿಕೊಂಡ. ಮೇಲ್ಭಾಗದ ಅವನ ಗದ್ದೆಗಳಿಗೆ ಹೆಚ್ಚಾಗಿ ಉಳಿದ ನೀರನ್ನು ಹಾನುಊಲಿನಂತೆ ಕೆಳಭಾಗದ ಸುಮಿತ್ರಳ ಪಾಲಿನ ಗದ್ದೆ ಗಳಿಗೆ ಕಳುಹಿಸುವದರ ಬದಲಾಗಿ ತನ್ನ ನೆರೆಯಲ್ಲಿರುವ ನಾಯ್ಕರ ಗದ್ದೆಗಳಿಗೆ ಬಿಟ್ಟುಕೊಟ್ಟ.

ಸುಗ್ಗಿ ಬೆಳೆ ಮೇಲೇರಿ ಸೊಂಪಾಗಿ ಕಾಣುವ ಬದಲು ಕೆಂಪಾಯಿತು. ಸುಮಿತ್ರ ಮೂರುನಾಲ್ಕು ಬಾರಿ ಹುಡುಗಿಯರನ್ನು ಗೋಪಣ್ಣನಲ್ಲಿ ಕಳುಹಿಸಿ ಎಚ್ಚರಿಸಿದಳು. ಕೃಷ್ಣಯ್ಯ ತನ್ನ ಕೆಲಸದವನನ್ನು ಕಳುಹಿಸಿ ಒಡ್ಡು ಕಟ್ಟಿದ್ದ ನೀರನ್ನು ಬಿಡುವಂತೆ ಕೇಳಿಕೊಂಡ. ಆದರೆ ಅವನಿಂದ ಬಂದಿತು ನಕಾರದ ಉತ್ತರ: "ಅದೇನು ಅವನ ಅಪ್ಪನ ಆಸ್ತಿಯೇನು? ನಾನು ನನ್ನ ಖುಷಿ ಬಂದಂತೆ ಮಾಡುವವನು!"

ಕೃಷ್ಣಯ್ಯ ಕೆರಳಿದ ಕೇಸರಿಯಾದ ಅವನ ಒರಟು ಉತ್ತರದಿಂದ. ಹೆಂಡತಿಯನ್ನು ಕರೆದು ವಿಚಾರಿಸಿಕೊಂಡ: "ಏನು....ನಾನು ಮುಂದೆ ಹೋಗಲಾ?"

"ಉಳಿಸಿಕೊಂಡ ನೀರೂ ಅವನಪ್ಪನದಲ್ಲ....ಒಡ್ಡು ಒಡೆದು ಹಾಕಿ!"

ಕೃಷ್ಣಯ್ಯ ತಡಮಾಡದೆ ಗಣೇಶನನ್ನು ಹತ್ತಿರ ಕರೆದು ಕಿವಿಯಲ್ಲಿ ಪಿಸು ಗುಟ್ಟಿದ ಮೆಲ್ಲನೆ. ಅವನ ಕೈಗೆ ಪಿಕಾಸನ್ನು ಕೊಟ್ಟು ತಾನು ಹಾರೆಯನ್ನು ಎತ್ತಿಕೊಂಡ.

ಮರುದಿನ ಬೆಳಗ್ಗೆ ಬೇಲಿಯಾಚೆ ಕೇಳಿಸಿತು ಗೋಪಣ್ಣನ ಸ್ವರ— "ತಲೆಯಿಲ್ಲದ ಮೂರ್ಖರು! ಯಾರ್‍ರೋ ಅದು ಒಡ್ಡು ಕಡಿದು ಹಾಕಿದವರು? ಗದ್ದೆ ನೀರೆಲ್ಲ ಪೋಲಾಗ್ತಾ ಇದೆ."

ಕೃಷ್ಣಯ್ಯ ಮನೆಯಿಂದ ಹೊರಗೆ ಬಂದು ನಿಂತ ಗದ್ದೆ ಏರಿಯ ಮೇಲೆ. ಅವನ ಗದ್ದೆಯ ತುಂಬಾ ತುಂಬಿತ್ತು ನೀರು. ಹೆಚ್ಚಾದ ನೀರು ಸುಮ್ಮನೆ

ಹರಿದು ಹೋಗುತ್ತ ಇದೆ.

"ನನ್ನ ಸ್ಥಳಕ್ಕೆ ಬಂದು ಯಾರವು ಒಡ್ಡು ಕಡಿದವರು?"

"ಮತ್ಯಾರು....? ನಾನೇ! ಹೆಚ್ಚಾದ ನೀರನ್ನು ಬಿಡು ಎಂದು ಮರ್ಯಾದೆಯಲ್ಲಿ ಎಷ್ಟು ಸಾರೆ ಹೇಳಿದರೂ ನೀನು ಕೇಳಲಿಲ್ಲ. ಈಗ ನೋಡು, ನೀರು ಹೇಗೆ ಸರಾಗವಾಗಿ ಬರ್‍ತಾ ಇದೆ ಅಂತ. ನಿನಗೂ ನಷ್ಟವಿಲ್ಲ, ನನಗೂ ಕಷ್ಟವಿಲ್ಲ."

"ಲೋ!...." ಗೋಪಣ್ಣ ಕ್ರೋಧದಲ್ಲಿ ಅವುಡುಗಚ್ಚಿದ. "ಚಹದ ಅಂಗಡಿಯ ಗ್ಲಾಸುಗಳನ್ನು ತೊಳೆದಷ್ಟು ಸುಲಭ ಅಂದ್ಕೊಂಡಿದ್ದಿಯಾ ಇಲ್ಲಿ ಕೆಲಸ? ಥೂ, ಎಂಜಲೆಲೆಗೆ ಆಸೆಪಡುವ ನಾಯಿ....ಇವತ್ತು ಮತ್ತೆ ಕಟ್ತೀನೆ ಒಡ್ಡು."

"ನೀನು ಹತ್ತು ಸಾರೆ ಕಟ್ಟು" ಗುಡುಗಿದ ಕೃಷ್ಣಯ್ಯ: "ನಿನ್ನ ಗದ್ದೆಯ ಬೇಲಿ ಮುರಿದು ಅದನ್ನು ಒಡೀತೇನೆ. ಆಮೇಲೆ ನನ್ನನ್ನು ಹಾಗೆ ಹೀಗೆ ಅನ್ನ ಬೇಡ!"

ಅಂದೇ ಸಾಯಂಕಾಲ ಒಡ್ಡು ಕಟ್ಟಿಸಿದ ಗೋಪಣ್ಣ. ರಾತ್ರಿ ಕೃಷ್ಣಯ್ಯ ಬಿಡಿಸಿಕೊಟ್ಟ. ಹೀಗೇ ಮುಂದುವರಿಯಿತು ಎರಡು ದಿನ. ಈ ಹೊಗೆಯಾಡುವ ಜಗಳದ ಮಧ್ಯೆ ತೋನ್ಸೆಗೆ ಹೋಗಿ ಹಣವನ್ನು ಕೊಟ್ಟುಬರಲು ಗಣೇಶನಿಗೆ ತಿಳಿಸಿದ ಕೃಷ್ಣಯ್ಯ. ಮಕ್ಕಳು ತನಗಾಗಿ ಕಾಯುತ್ತಿರಬಹುದು. ತನ್ನ ಬದಲಿಗೆ ಗಣೇಶನನ್ನು ಕಳುಹಿಸಿದರೆ ಎರಡು ದಿನ ಅವರಿಗೂ ಖುಷಿಯಾಗಬಹುದು ಎಂದೂ ಯೋಚಿಸಿದ.

ತೋನ್ಸೆಗೆ ಹೋಗಲು ತುದಿಗಾಲಿನಲ್ಲಿ ಸಿದ್ಧನಾದ ಗಣೇಶ. ಬೆಳ್ಳಿ ಪಾಡಿಗೆ ಬಂದನಂತರ ಒಂದೇ ಒಂದು ಬಾರಿ ಹೋಗಿದ್ದ ಅಲ್ಲಿಗೆ. ಈಗ ಅಪ್ಪ ತಾನಾಗಿಯೇ ಕಳಿಸುತ್ತಿದ್ದಾನೆ. ಶಂಕರ-ಸುನಂದೆಯ ಜೊತೆಯಲ್ಲಿ ನಾಲ್ಕುದಿನ ಮಜವಾಗಿ ಕಳೆದು ಬರಬೇಕು. ಆಹಾ, ಹಿಂದೆ ಅಕ್ಕು ಬದುಕಿದ್ದಾಗ ಅಜ್ಜನ ಮನೆಗೆ ಹೋಗಲು ಯಾವಾಗಲೂ ಅವನ ಹಟ. ಶಾಲೆಗೆ ಎರಡು ದಿನಗಳ ರಜೆ ಸಿಕ್ಕಿದರೆ ಸಾಕು, ಅಜ್ಜನ ಮನೆಗೆ ಹೋಗುವ ಹುಮ್ಮಸ್ಸು. ರಜೆಯ ದಿನ ಗಳಲ್ಲಿ ನಾಗಪ್ಪಯ್ಯ, ಶೀನಪ್ಪಯ್ಯನ ಮಕ್ಕಳು, ಅಕ್ಕುವಿನ ಮೂರುಮಕ್ಕಳು, ಜೊತೆಯಲ್ಲಿ ಸೇರಿದರೆಂದರೆ ಮನೆ ಕಿಷ್ಕಿಂಧೆ. ಎಲ್ಲರಿಗೂ ಬಾಲ ಇಲ್ಲದಿರುವಷ್ಟೇ

ಕೊರತೆ. ಸಮಯದ ಪರಿವೆ, ಊಟತಿಂಡಿಗಳ ಗಮನವಿಲ್ಲ ಯಾರಿಗೂ. ಆಟ ಒಂದೇ ಮುಖ್ಯ.

ಮುಳಿಹುಲ್ಲು, ತೆಂಗಿನಗರಿಗಳನ್ನು ಹೊದಿಸಿದ ನಾಲ್ಕು ಕೋಣೆಗಳ ಸಣ್ಣದಾದ ಗುಡಿಸಲು ಗಣೇಶನ ಪಾಲಿಗೆ ಅರಮನೆ. ಕ್ಷೀಣಶರೀರದ ಅಜ್ಜ ನಸುಕಿನಲ್ಲಿ ಎದ್ದು ಅಡಿಕೆಯನ್ನು ಕುಟ್ಟುತ್ತಾನೆ ಜಗಲಿಯ ಮೂಲೆಯ ಒರಳಿನಲ್ಲಿ. ಕಟ್ ಕಟ್....ಚಟ್....ಉಚ್ಛ್ವಸದಿಂದ ಸರಕುವ ಊಂಪ್.... ಉಸ್....ಸದ್ದು ಅವರೊಡನೆ ಬೆರೆಯುತ್ತದೆ. ಅಜ್ಜಿ ತನ್ನ ಮೂಗಿನಿಂದ ರಾಮಾಯಣ ಅಥವಾ ಭಾಗವತದ ಶ್ಲೋಕಗಳನ್ನು ಹಾಡುತ್ತ ಕತ್ತಲೆಯಲ್ಲಿಯೇ ಕೆಲಸ ಮಾಡುತ್ತಾಳೆ. ಅಜ್ಜಿಯ ಹಿಂದೆ ಮುಂದೆ ಓಡಾಡುತ್ತ ಅವಳ ಕೆಲಸಗಳಿಗೆ ಉಪದ್ರವವನ್ನು ಕೊಡುವುದೆಂದರೆ ನಗುವೋ ನಗು ಗಣೇಶನಿಗೆ. ರಾತ್ರಿ ಅವಳ ಮಗ್ಗುಲಲ್ಲಿ ಮಲಗಿದರೆ ಎಲ್ಲೆಲ್ಲಿಯದೋ ಕಥೆಗಳ ಮೂಟೆ ಬಿಚ್ಚುತ್ತಾಳೆ. ಭೂತಗಳ ಕಥೆ ಬಂದಾಗ ಮೈನಡುಕ, ಆಗ ಅಜ್ಜಿ ಅವನ ತಲೆಗೂದಲಲ್ಲಿ ಕೈಯಾಡಿಸಿ, "ದೊಡ್ಡವನಾದ್ಮೇಲೆ ನೀನೆಷ್ಟು ಪ್ರಖ್ಯಾನಾಗ್ತಿಯೊ" ಎನ್ನಬೇಕು. ಹಾಗೆ ಹೇಳಿಸಿಕೊಳ್ಳುವುದು ಅವನಿಗೆ ಪ್ರಿಯವಾದುದು.

ಮಣ್ಣಿನ ಬಟ್ಟಲಿನಲ್ಲಿ ಹೊಗೆಯಾಡುವ ಬಿಸಿಗಂಜಿ, ಕೊಚ್ಚಿದ ನೀರುಳ್ಳಿ, ಚೂರುಗಳು, ಹಲಸಿನ ಹಪ್ಪಳದ ತುಂಡು, ಮಾವಿನ ಅಥವಾ ನಿಂಬೆಹೋಳಿನ ಉಪ್ಪಿನಕಾಯಿ. ಇವಿಷ್ಟೇ ಊಟಕ್ಕೆ. ಗಣೇಶನಿಗೆ ಅದೇ ಅಮೃತಸಮಾನ. ಅದರ ನೆನಪಿನಿಂದಲೇ ನೀರೂರುತ್ತದೆ ನಾಲಿಗೆ.

ಗಣೇಶನ ತಲೆತುಂಬ ತುಂಬಿತ್ತು ಅಜ್ಜನ ಮನೆ. ಉತ್ಸಾಹದಲ್ಲಿ ಹೊರಡಲು ಸಿದ್ಧನಾಗುತ್ತಿದ್ದಂತೆ ಸುಮಿತ್ರ ಪ್ರಶ್ನಾರ್ಥಕವಾಗಿ ನೋಡಿದಳು ಅವನನ್ನು.

"ಹಣ ತೆಗೆದುಕೊಂಡು ಅಲ್ಲಿಯವರೆಗೆ ಹೋಗುವುದಕ್ಕಿಂತ ಇಲ್ಲೇ ಪೋಸ್ಟ್ ಆಫೀಸ್‌ನಲ್ಲಿ ಮನಿಯಾರ್ಡರ್ ಮಾಡೋಣ. ಎಲ್ಲಿ ನಿನ್ನ ಅಪ್ಪ? ಕರೆ, ನಾನೇ ಹೇಳ್ತೇನೆ."

ಗಣೇಶನ ಮುಖ ಹಿಡಿಯಷ್ಟಾಯಿತು. ನಾಲ್ಕು ದಿನ ಹಾಯಾಗಿ ಇರೋಣ ಎಂದುಕೊಂಡಿದ್ದ. ಕೃಷ್ಣಯ್ಯನಿಗೂ ವೃಥಾ ಬಸ್ಸಿಗೋಸ್ಕರ ಹಣ ದಂಡಮಾಡುವುದಕ್ಕಿಂತ ಮನಿಯಾರ್ಡರ್ ಮಾಡುವುದೇ ಲೇಸು ಎನಿಸಿ

ಅನುಮೋದಿಸಿದ ಹೆಂಡತಿಯ ಮಾತನ್ನು.

"ಸೊಸೈಟಿಯಲ್ಲಿ ಸಕ್ಕರೆ, ಗೋದಿ ಬಂದಿದೆಯಂತೆ...." ಎರಡು ಚೀಲಗಳನ್ನು ತೆಗೆದು ಗಣೇಶನ ಕೈಲಿರಿಸಿದಳು ಸುಮಿತ್ರ. "ರೇಶನ್ ಕಾರ್ಡು ಕೊಡ್ತೀನೆ, ಹೋಗಿ ತಗೊಂಡು ಬಾ. ಆಮೇಲೆ ಅಡಿಕೆ ತೋಟ ಇಟ್ಟಿದ್ದಾರಲ್ಲ, ಆ ಗದ್ದೆಯ ಸುತ್ತಮುತ್ತಲೆಲ್ಲ ಕಾಡು ಬೆಳೆದಂತೆ ಹುಲ್ಲು ಬೆಳಕೊಂಡಿದೆ, ಅದನ್ನು ಹೆರೆದು ತಂದು ಹಾಕು ಕೊಟ್ಟಿಗೆಗೆ."

ಇಲ್ಲ ಎನ್ನುವುದು ತಿಳಿದಿಲ್ಲ ಅವನ ನಾಲಗೆಗೆ. ಮೌನವಾಗಿ ಬಟ್ಟೆಯನ್ನು ಬದಲಿಸಿ ಅವಳು ಕೈಗಿತ್ತ ರೇಶನ್ ಕಾರ್ಡು, ಹಣ, ಚೀಲಗಳನ್ನು ತೆಗೆದುಕೊಂಡು ಅಂಗಳಕ್ಕಿಳಿದ. ತೋಟಕ್ಕೆ ಹೋಗುವ ಉತ್ಸಾಹ ಝುರ್ರನೆ ಇಳಿದುಹೋದರೂ ಉಕ್ಕಿತ್ತು ಅವನಲ್ಲಿ ರೋಷ. ಅಕ್ಕ ಇದ್ದಿದ್ದರೆ....? ಅವಳು ಹೀಗೆ ಬೇಡ ಎಂದಿದ್ದರೆ ಅವನು ಜಗಳವಾಡಿ ಹೊರಟುಬಿಡುತ್ತಿದ್ದ. ಆದರೆ ಇಲ್ಲಿ ದೊಡ್ಡಮ್ಮನ ಕೈಯಲ್ಲಿ ಅಗೋಚರವಾದ ಒಂದು ಮಾಯಾದಂಡವಿದೆ. ಅದು ತಿರುಗಿದಂತೆ ತಾನು ನಡೆಯಬೇಕು!

## 8

ಸೊಸೈಟಿಯಿಂದ ಸಕ್ಕರೆ, ಗೋದಿಯನ್ನು ತೆಗೆದುಕೊಂಡು ಮೀಸೆ ಅಣ್ಣನ ಅಂಗಡಿಯತ್ತ ಬಂದಾಗ ಬಾಯಾರಿ ಒಣಗಿ ಬಂದಿತ್ತು ಗಂಟಲು. ಗಿರಾಕಿಗಳು ಹೆಚ್ಚಿಗೆಯಿರಲಿಲ್ಲ. ಎರಡು ದೋಸೆ, ಒಂದು ಗ್ಲಾಸು ಬಿಸಿ ಚಹ ಕುಡಿದಮೇಲೆ ನೆಮ್ಮದಿಯೆನಿಸಿತು ಮನಸ್ಸಿಗೆ. ಮೀಸೆ ಅಣ್ಣ ಬಂದ ಹೊಸ ಗಿರಾಕಿಗೆ ಕಾಫಿ ಕೊಟ್ಟು ಗಣೇಶನ ಬದಿಯಲ್ಲಿಯೇ ಕುಳಿತ. ನೀರಿನ ಜಗಳವನ್ನು ಕೇಳುವ ಕುತೂಹಲ ಅವನಿಗೆ. ಎಲ್ಲವನ್ನೂ ವಿವರಿಸಿದ ಗಣೇಶ:

"ನನ್ನ ಅಪ್ಪ ಅಂದರೆ ಗೋಪಣ್ಣನಿಗೆ ತುಂಬ ಸಸಾರ. ನೀರು ಬಿಡದೆ ಸುಮ್ಮನೆ ಸತಾಯಿಸ್ತಾ ಇದ್ದಾನೆ."

"ಅವನಿಗೆ ಮೊದಲಿನಿಂದಲೂ ಎದುರು ಸಿಟ್ಟು ಜಾಸ್ತಿ. ಹಾಗಂತ ನಿಮ್ಮ ಮೇಲೆ ಅವನಿಗೆ ಯಾವ ದ್ವೇಷವಿಲ್ಲ. ಹತ್ತಾಣೆ ತಾಜಾ ಮನುಷ್ಯ. ಅವನು ಮೀಸೆಯನ್ನು ಕುಣಿಸಿ ಹೇಳಿದ: "ಈಗ್ತಾನೆ ಅವನ ಮಾವ ಬಂದು

ಹೋದ ಇಲ್ಲಿಗೆ. ಅವನಿಗೆ ಅದೇ ಚಿಂತೆಯಂತೆ. ಅಲ್ಲ, ಕೃಷ್ಣಯ್ಯನನ್ನು ಎಷ್ಟೊಂದು ಬೈದ ಗೊತ್ತ? ಆದರೂ ನಿನ್ನ ಅಪ್ಪನ ಕೆಲಸವನ್ನು ನೋಡಿ ಎಷ್ಟು ಮೆಚ್ಚಿದರೂ ಸಾಲದಂತೆ!”

ಗಣೇಶನ ಮುಖ ಅರಳಿತು. ಮೀಸೆ ಅಣ್ಣ ಅವನತ್ತ ಮುಖ ತಂದು ಮೆಲ್ಲನೆ ಕೇಳಿದ, “ಅಲ್ಲವ್ರೋ, ಏನೋ! ನಿನ್ನ ಚಿಕ್ಕಮ್ಮ ಹೊಸ ಮನೆ ಕಟ್ಟಿಸ್ತಾಳಂತೆ, ಹೌದೇನೋ?”

ಇದು ಅವನಿಗೆ ಹೊಸ ವಿಷಯ. ಊರಿನಲ್ಲಿ ಎಲ್ಲಿಯೇ ಒಂದು ಸಣ್ಣ ಇಲಿ ಹೋಗಿರಲಿ ಮೊದಲು ತಲಪುವದು ಮೀಸೆ ಅಣ್ಣನ ಅಂಗಡಿಗೆ. ಅದು ರಂಗೇರುವದೂ ಅಲ್ಲಿಯೇ. ತನಗೆ ಏನೂ ತಿಳಿಯದೆಂದು ತಲೆಯಲ್ಲಾಡಿಸಿದಾಗ ನಕ್ಕ ಅವನು.

“ಆಚಾರಿಯ ಸಣ್ಣಮಗ ಹೇಳ್ದ ನನಗೆ. ಬಾಗಿಲು ಕಿಟಕಿ ಎಲ್ಲ ಮಾಡಲು ಹೇಳಿದ್ದಾರಂತೆ. ಕಟ್ಟಿಸಬೇಕಾದ್ರೆ ಅನ್ನು. ಕಡಿಮೆಯೆಂದರೂ ಒಂದೈದಾರು ಸಾವಿರ ಬೇಕಾದೀತು ಅಲ್ವ? ಹೌದೇನೋ ಹಣ ಬೇಕಾದಷ್ಟು ಇದ್ದೀತಲ್ಲ ನಿನ್ನ ಚಿಕ್ಕಮ್ಮನ ಹತ್ರ?”

ಮೀಸೆ ಅಣ್ಣನ ಬೆವರಿನ ಗಬ್ಬುವಾಸನೆಯಿಂದ ದೂರ ಸರಿದ ಗಣೇಶ. ಅಷ್ಟರಲ್ಲಿ ಬೇರೆ ಯಾರೋ ಗಿರಾಕಿ ಬಂದುದರಿಂದ ಅವನು ಎದ್ದ. ಇವನೂ ಚೀಲಗಳನ್ನು ಎತ್ತಿಕೊಂಡ.

“ಜೇನು ಬಂದಿದೆ, ಹೋಗುವಾಗ ತಗೊಂಡು ಹೋಗು.” ಮೀಸೆ ಅಣ್ಣ ಒಳಗಿನಿಂದ ಎರಡು ದೊಡ್ಡ ಬಾಟಲಿಗಳನ್ನು ತಂದು ಗಣೇಶನ ಕೈಲಿರಿಸಿದ, “ಜೋಪಾನ! ಎಲ್ಲಿಯಾದರೂ ಒಡೆಯಿತೊಂದ್ರೆ ನಿನ್ನ ತಲೆಯೂ ಒಡೆದೀತು, ಹಾಂ!”

ಗಣೇಶ ಚೀಲ, ಜೇನಿನ ಬಾಟಲಿಗಳನ್ನು ಜಾಗ್ರತೆಯಾಗಿ ಹೆಗಲ ಮೇಲೇರಿಸಿಕೊಂಡು ಅಲ್ಲಿಂದ ಹೊರಬಿದ್ದು ಕಾಲದಾರಿಯಲ್ಲಿ ಇಪ್ಪತ್ತು ಮಾರು ಮುಂದೆ ನಡೆದಿರಬೇಕು, ಒಂದು ಹುಳಿಮಾವಿನ ಮರದ ಕೆಳಗೆ ನಾಲ್ಕಾರು ಹುಡುಗರು ಗೋಲಿಗಳನ್ನು ಆಡುತ್ತಿರುವದು ಕಾಣಿಸಿತು. ತಮ್ಮತಮ್ಮಲ್ಲೇ ‘ಹಾ ಹೋ’ ಎಂದುಕೊಳ್ಳುತ್ತ ಆಡುತ್ತಿದ್ದಾರೆ ಉತ್ಸಾಹದಲ್ಲಿ. ಮನೆಯಲ್ಲಿ ಬೀಡಿಕಟ್ಟಿ ಜೀವನ ಸಾಗಿಸುತ್ತಿದ್ದ ಹದಿನೈದರ ಒಳಗಿನ ಹುಡುಗರಲ್ಲಿ

ಒಂದಿಬ್ಬರು ಕೀರ ಇತ್ತೀಚೆಗೆ ಗಣೇಶನಿಗೆ ಪರಿಚಿತರು.

"ಬರ್ತಿಯೇನೋ ಆಟಕ್ಕೆ?"—ಕರೆದ ಯಾದವ.

"ನಾಲ್ಕು ಗೋಲಿ ಸಾಲ ಕೊಡ್ತೀವಿ. ಬಾ ಆಟಕ್ಕೆ"—ಆಹ್ವಾನಿಸಿದ ಸುಂದ್ರು.

ಗಣೇಶ ಅತ್ತಿತ್ತ ನೋಡಿದ. ಸ್ವಲ್ಪ ಸಮಯ ಆಡಿದರೆ ತಪ್ಪಿಲ್ಲವಲ್ಲ. ಯಾದವನ ಜೇಬು ಈಗಾಗಲೇ ಗೆದ್ದ ಗೋಲಿಗಳಿಂದ ತುಂಬಿಹೋಗಿದೆ. ಗೋಲಿಯಾಟದಲ್ಲಿ ತನ್ನದು ನೇರ ಗುರಿ. ಎಡಹೆಬ್ಬೆರಳನ್ನು ನೆಲಕ್ಕೆ ಊರಿ ತೋರುಬೆರಳಿನಿಂದ ಬಲಗೈ ಬೆರಳಿನಲ್ಲಿರುವ ಗೋಲಿಯನ್ನು ಚಿಮ್ಮಿಸಬೇಕು ಮುಂದಕ್ಕೆ. ಎದುರಾಳಿಯ ಗೋಲಿಯನ್ನು ಹೊಡೆದು ಅಲ್ಲಿರುವ ಸಣ್ಣ ಕುಳಿಯಲ್ಲಿ ಅದನ್ನು ಹಾಕಿದರೆ ಆ ಗೋಲಿ ಹೊಡೆದವನಿಗೆ. ತಡಮಾಡದೆ ಗಣೇಶ ಚೀಲಗಳನ್ನು ಮಾವಿನ ಮರದ ಬೊಡ್ಡೆಗೆ ಒರಗಿಸಿಟ್ಟು ಆಟಕ್ಕಿಳಿದ. ಕಣ್ ಕಣಾ ಕಣ್ ಕಣಾ ಸದ್ದಿನೊಂದಿಗೆ ಬೆರಳು ಬೆರಳಿನೊಡನೆ ಆಡುವ ಗೋಲಿಗಳು ಮಿಂಚುತ್ತಿದ್ದವು ಸಂಜೆಯ ಬಿಸಿಲಿಗೆ. ಪುಟ್ಟದಾದ ಕುಳಿಯಲ್ಲಿ ಮಿಂಚುವ ಗೋಲಿ ಹೋಗಿ ಬೀಳುವದೆಂದರೆ ಅದೆಂತಹ ತಮಾಷೆ. ಯಾದವನ ಜೇಬು ಅರ್ಧ ಖಾಲಿಯಾಗಿ ತುಂಬಿತು ಗಣೇಶನ ಜೇಬು. ಅವನ ಗುರಿಗೆ ಎದುರು ಇನ್ನಾರೂ ಇಲ್ಲ. ಸುಂದ್ರು ತಾನೂ ಆಡಿದ ಅವನ ಜೊತೆ.

ಸೋಲುತ್ತ ಗೆಲ್ಲುತ್ತ ಮುಂದುವರಿದ ಆಟದಲ್ಲಿ ಬಿಸಿಲು ನಿಧಾನವಾಗಿ ಇಳಿಯುತ್ತ ಬಂದದ್ದು ತಿಳಿಯಲಿಲ್ಲ ಮೊದಲು. ಕಾಡಿನಲ್ಲಿ ಕುಪ್ಪಳದ ಹಕ್ಕಿಯ ಸ್ವರ ಕೇಳಿ ಎಚ್ಚೆತ್ತ ಗಣೇಶ ಗಡಿಬಿಡಿಯಿಂದ ತನ್ನ ಗೆದ್ದ ಗೋಲಿಗಳನ್ನೆಲ್ಲ ಒಟ್ಟುಮಾಡಿಕೊಂಡ. ನಾಳೆ ಮತ್ತೆ ಆಡಲು ಬರುತ್ತೇನೆಂದು ತಿಳಿಸಿ ಮಾವಿನ ಮರದ ಕೆಳಗೆ ಇಟ್ಟ ತನ್ನ ಚೀಲಗಳನ್ನು ತೆಗೆದುಕೊಳ್ಳಲು ಅತ್ತ ತಿರುಗಿದ. ಆದರೆ ಅವನು ಇಟ್ಟ ಸ್ಥಳದಲ್ಲಿ ಚೀಲಗಳು ನಾಪತ್ತೆ! ಅರೆ, ಇದೇನಾಯಿತು? ಅವನು ಎಲ್ಲ ಕಡೆಗೂ ನೋಡಿದ, ಹುಡುಕಿದ.

"ಯಾದವ, ನನ್ನ ಚೀಲಗಳು ಎಲ್ಲಿ ಹೋದವು?" ಕೇಳಿದ ಅರಸುತ್ತ. ಉಳಿದ ಹುಡುಗರೂ "ನಾವೆಲ್ಲ ಇಲ್ಲಿರುವಾಗ ಚೀಲಗಳನ್ನು ಯಾರು ತೆಗೆದು ಕೊಂಡು ಹೋಗ್ತಾರೆ? ಇರಬೇಕು ಇಲ್ಲೇ" ಎಂದೆಂದು ಹುಡುಕಿದರು ಸುತ್ತಲೂ. ಕಾಣಲಿಲ್ಲ ಎಲ್ಲಿಯೂ.

“ನಿನ್ನ ಹತ್ರ ಚೀಲ ಇದ್ದಿರಲಾರದು....ನಿಂಗೆಲ್ಲೋ ಮರೆತಿರಬೇಕು” ಎಂದ ಸುಂದ್ರು.

ತಲೆಕೆರೆದುಕೊಂಡ ಗಣೇಶ. ಚೀಲದಲ್ಲಿ ದೊಡ್ಡಮ್ಮ ಕೊಟ್ಟ ರೇಸರ್ ಕಾರ್ಡ್ಸ್, ಚೀಟಿ, ಚಿಲ್ಲರೆ ಹಣ ಇತ್ತು. ಮೀಸೆ ಅಣ್ಣ ಕೊಟ್ಟ ಜೇನು ಬಾಟಲಿಗಳು. ಎಲಾ! ಈ ಕಾಡಿನ ಮಧ್ಯೆ ಅದನ್ನು ಕದ್ದೊಯ್ಯುವ ಧೈರ್ಯ ಯಾರಿಗಿದೆ? ಗೋಲಿಯಾಡಿದ ಗೆಳೆಯರೆಲ್ಲರೂ ತಮ್ಮತಮ್ಮ ಗೋಲಿಗಳೊಂದಿಗೆ ಹೊರಟುಹೋದರು ಅಲ್ಲಿಂದ. ಅವನೊಬ್ಬನೇ ಹೊಂಗೆಮರದ ಕೆಳಗೆ ನಿಂತು ಸುತ್ತಲೂ ನೋಡಿದ ಆತಂಕದಲ್ಲಿ. ತಾನು ಆಟದಲ್ಲಿ ಮಗ್ನನಾದಾಗ ಯಾರೋ ಕಾಡುದಾರಿಯಲ್ಲಿ ಬಂದಿರಬೇಕು. ತನ್ನ ಚೀಲಗಳನ್ನು ಒಯ್ದಿರಬೇಕು. ಅಬ್ಬಬ್ಬ! ಮನೆಗೆ ಹೋಗುವದಾದರೂ ಹೇಗೆ? ಇವತ್ತು ದೊಡ್ಡಮ್ಮನ ವಿಶ್ವರೂಪದರ್ಶನ ತನಗೆ ಸಿಗುತ್ತದೆ. ಗೋಲಿಗಳಂತೆ ಅವಳ ದೊಡ್ಡ ಕಣ್ಣುಗುಡ್ಡೆಗಳೂ ಹೊರಳಾಡುತ್ತವೆ. ಆ ಕೂಡಿದ ಹುಬ್ಬನ್ನು ನೋಡುವದು ಹೇಗೆ? ಅವನು ಮತ್ತೆ ಮಾವಿನ ಮರದ ಕೆಳಗೆ ಎಲ್ಲ ಕಡೆಗೂ ಹುಡುಕಿದ. ಯಾರೋ ತಮಾಷೆಗಾಗಿ ಚೀಲಗಳನ್ನು ತೆಗೆದುಕೊಂಡು ಇಲ್ಲೇ ಎಲ್ಲಿಯಾದರೂ ಅವಿತುಕೊಂಡಿರಬಹುದು. ಇನ್ನೇನು ತನ್ನ ಹುಡುಕಾಟವನ್ನು ಕಂಡು ನಗುತ್ತ ತನಗೆ ಚೀಲಗಳನ್ನು ಒಪ್ಪಿಸಬಹುದೆಂದು ನಿರೀಕ್ಷಿಸಿದ. ಊಹುಂ, ಯಾರೂ ಕಾಣಲಿಲ್ಲ —ಹೆದರಿಕೆಯಿಂದ ಚಡಪಡಿಸಲಾರಂಭಿಸಿದ ತನ್ನಲ್ಲೇ.

ತಾಯಿಯಿಲ್ಲದ ಮಗು ಅವನು. ಸ್ವಲ್ಪ ತಪ್ಪಿ ನಡೆದರೂ ದೊಡ್ಡಮ್ಮ ಸುಮ್ಮನಿರಲಾರಳು. ಅಮ್ಮ ಇದ್ದಿದ್ದರೆ ಯಾವ ಭೀತಿಯೂ ಇರಲಿಲ್ಲ. ಅವನು ಬಹಳ ಹೊತ್ತು ಅಲ್ಲಿ ಇಲ್ಲಿ ತಿರುಗಿದ. ಎಷ್ಟು ಹೊತ್ತು ಹೀಗೇ ತಿರುಗುವದು? ತಾನು ಕಳೆದುಕೊಂಡದ್ದನ್ನು ದೊಡ್ಡಮ್ಮನಿಗೆ ಹೇಳಲೇಬೇಕು, ಹೇಳುತ್ತೇನೆ....ಆದರೆ....

9

ಕೃಷ್ಣಯ್ಯ ನರಸಿಂಹಭಟ್ಟರಲ್ಲಿ ತೆಗೆದುಕೊಂಡು ಹೋದ ತಮ್ಮ ನೀರಿನ ಜಗಳವನ್ನು. ಒಂದು ಕಾಲಕ್ಕೆ ಮುನ್ನೂರು ಮುಡಿ ಗೇಣಿ ಬತ್ತವನ್ನು ಪಡೆಯುತ್ತಿದ್ದ ಶ್ರೀಮಂತ ಭೂಮಾಲಿಕ. ಕುಳಿತಲ್ಲಿಯೇ ಮೊದಲು ಸಂಗ್ರಹ ವಾಗುತ್ತಿತ್ತು ಬತ್ತ. ತಮ್ಮ ಅರ್ಧದಷ್ಟು ಭೂಮಿಯನ್ನು ಒಕ್ಕಲುಗಳ ಸ್ವಾಧೀನಕ್ಕೆ ಕೊಟ್ಟಿದ್ದ ಅವರು ಶ್ರೀಮಂತಿಕೆ, ದರ್ಪದಲ್ಲಿ ತಮ್ಮ ಅರ್ಧ ಆಯುಷ್ಯವನ್ನು ಕಳೆದು ಈಗ ಅರ್ವತ್ತರ ಅಂಚಿನಲ್ಲಿದ್ದಾರೆ. ಮಕ್ಕಳು, ಮೊಮ್ಮಕ್ಕಳಿಂದ ತುಂಬಿದ ಮನೆ.

ಕೃಷ್ಣಯ್ಯ ನೀರಿನ ಜಗಳವನ್ನು ತಂದಾಗ ಅವರು ಯಾವ ಆಸಕ್ತಿಯನ್ನೂ ತೋರಿಸಲಿಲ್ಲ. ಗೋಪಣ್ಣನನ್ನು ಕರೆದು ಬುದ್ಧಿ ಹೇಳಬೇಕೆಂದು. ಯಾವ ತಡೆಯೂ ಇಲ್ಲದೆ ನೀರು ತನ್ನ ಕೆಳಗಿನ ಗದ್ದೆಗಳಿಗೆ ಹರಿದುಬರಬೇಕೆಂದು ಕೇಳಿಕೊಂಡ ಕೃಷ್ಣಯ್ಯ ವಿನಯದಲ್ಲಿ. ಅವರು ನಕ್ಕರು.

"ಏನೋಪ್ಪಾ. ನನ್ನನ್ನು ದೊಡ್ಡ ಮನುಷ್ಯ ಅಂತ ತಿಳಿದಿದ್ದಿಯೇನೋ. ನಾನೂ ನಿನ್ನಂತೆ ಶ್ರೀಸಾಮಾನ್ಯದವ. ಮೂರ್ಕಾಸಿನ ಜನ ಅಂದ್ಕೋ. ನನ್ನ ಹತ್ರ ದೂರು ತಂದು ನಿಂಗೇನೂ ಲಾಭವಿಲ್ಲ."

"ಹಾಗೆನ್ನಬೇಡಿ....ನೀವು ಧನಿಗಳು, ನಿಮ್ಮ ಹತ್ರ ಹೇಳಿದರೆ ಎಲ್ಲ ಸರಿಹೋಗುತ್ತದೆ."

"ಹಹ್ಹ....ಹ್ಹ....ದನಿ ಎಂದೋ ಸತ್ತುಹೋಗಿದ್ದಾನೆ ಅಂತ ಗೊತ್ತಿಲ್ಲವೆ ನಿನಗೆ? ಒಂದುಕಾಲಕ್ಕೆ ನನ್ನವೇ ಆದ ಭೂಮಿಯೆಲ್ಲ ಈಗ ಒಕ್ಕಲುಗಳಿಗಾಗಿ ಅವರೇ ಆಗಿದ್ದಾರಲ್ಲ ಭೂಮಾಲಿಕರು? ನಾನು ಮಾಡೋದೇನಿದೆ? ಮಾತನ್ನು ಆಡುವುದಕ್ಕೂ ನನಗೆ ಹಕ್ಕಿಲ್ಲ."

"ಆದರೂ ನೀವು ಗೋಪಣ್ಣನಿಗೆ ಬುದ್ಧಿ ಹೇಳಿದರೆ ಅವನು ಕೇಳಬಲ್ಲ ಅಂದ್ಲು ಸುಮಿತ್ರ."

"ಅವಳಿಗೆಲ್ಲೋ ಹುಚ್ಚು. ಕೇಳೋದಕ್ಕೆ ಅವನೇನು ನನ್ನ ಆಳೇ? ನನಗೂ ಅವನಿಗೂ ಯಾವ ಸಂಬಂಧವೂ ಇಲ್ಲ. ನಿನ್ನ ಮತ್ತು ಅವನ ಜಗಳ

ಗಳನ್ನು ನೀವೇ ಇತ್ಯರ್ಥ ಮಾಡ್ಕೊಳ್ಳಿ. ಇಲ್ಲ, ಸರಕಾರಕ್ಕೆ ಮನವಿ ಕಳ್ಸಿ. ಸರಕಾರ ನೋಡಿಕೊಳ್ಳುತ್ತದೆ ನಿಮ್ಮನ್ನ. ಏನೋ, ಬ್ಹಾಳ ಕೆಲ್ಸ ಮಾಡಿಸ್ತಾ ಇದ್ದೀಯಂತ ಸುದ್ದಿ ಕೇಳಿದೆ. ಹೌದೇನೋ?"

"ಏನೋ ತಮ್ಮ ದಯ."—ಹಲ್ಕಿರಿದ ಕೃಷ್ಣಯ್ಯ.

"ಮಕ್ಕಳನ್ನು ದೂರ ತಳ್ಳಿ ನೀನಿಲ್ಲಿ ಇದ್ದೀಯಲ್ಲ. ಇರು....ಹೇಗೆ ಸುಮಿತ್ರ? ನಿನ್ನನ್ನು ಚೆನ್ನಾಗಿ ನೋಡಿಕೊಳ್ತಾಳ?" ವಿಚಿತ್ರವಾಗಿ ನಕ್ಕರು ನರಸಿಂಹ ಭಟ್ಟರು. "ಅಂದ್ಹಾಗೆ, ಗಣೇಶ ಏನ್ಮಾಡ್ತಾನೆ? ಕೆಲ್ಸಗಿಲ್ಸದಲ್ಲಿ ಚುರುಕಾಗಿದ್ದಾನೇನೊ? ಈಗ ಸುತ್ತಲೂ ಬೀಡಿ ಕಟ್ಟುವ ಕೆಲಸದಿಂದಾಗಿ ಸಣ್ಣ ಚೂರುಮೆಣಸಿಕಾಯಿಯಷ್ಟು ದೊಡ್ಡ ಹುಡುಗನೂ ನಮ್ಮ ಬಿಟ್ಟೀ ಕೆಲ್ಸಗಳಿಗೆ ಸಿಗುವದಿಲ್ಲ. ಅವನು ಇಲ್ಲಿಗ್ಬಂದ್ರೆ ಅಷ್ಟೋ ಇಷ್ಟೋ ಕೆಲ್ಸ ಕೊಡ್ತೇನೆ. ಹೇಳಿಬಿಡು."

ಕೃಷ್ಣಯ್ಯ ಅಲ್ಲಿಂದ ಹಿಂದಿರುಗಿ ಮನೆ ಸೇರಿದಾಗ ಚೆನ್ನಾಗಿ ಕತ್ತಲೆ ಆಗಿತ್ತು. ಒಣಹುಲ್ಲಿನ ರಾಶಿಯ ಬದಿಯಲ್ಲಿ ಬಿಕ್ಕಳಿಸುತ್ತ ಕುಳಿತ ಗಣೇಶ ನನ್ನು ಕಂಡು ಅಚ್ಚರಿಗೊಂಡ. ಕರಿನಾಯಿ ಅವನ ಕಾಲುಗಳ ಬಳಿಯಲ್ಲಿ ಕುಣಿಗುಡುತ್ತ ಮಲಗಿತ್ತು.

"ಇಲ್ಲೇನು ಮಾಡ್ತಾ ಇದ್ದೀಯೋ ಕತ್ತಲೆಯಲ್ಲಿ?" ಕೇಳಿದ ಕೃಷ್ಣಯ್ಯ ಅವನತ್ತ ಬಗ್ಗಿ.

"ಅವನನ್ನು ಯಾಕೆ ಕೇಳ್ತ ಇದ್ದೀರಿ?" ಹಿಂದಿನಿಂದಲೇ ಕೇಳಿಸಿತು ಸುಮಿತ್ರಳ ಏರುಧ್ವನಿ: "ಬೀದಿ ಹುಡುಗರ ಜೊತೆಯಲ್ಲಿ ಗೋಲಿಯಾಡ್ತಾ ಈಗ ಮೂರುಸಂಜೆಯಲ್ಲಿ ಸೇರಿಕೊಂಡಿದ್ದಾನೆ ಮನೆಯನ್ನು. ರೇಶನ್‌ಕಾರ್ಡು, ಚೀಲ, ಜೇನುಬಾಟಲಿ ಎಲ್ಲವನ್ನೂ ಕಳ್ಕೊಂಡು ಬಂದಿದ್ದಾನೆ. ಇವನನ್ನು ಏನ್ಮಾಡಬೇಕೋ ತಿಳೀತ ಇಲ್ಲ ನನಗೆ."

"ಹಾಗೋ ವಿಷಯ?" ಕೃಷ್ಣಯ್ಯ ಕೆಳಗೆ ಕುಳಿತ ಗಣೇಶನನ್ನು ಕೈ ಹಿಡಿದು ಎಬ್ಬಿಸಿ ಜಗಲಿಗೆ ಕರೆತಂದ. ದೀಪದ ಬೆಳಕಿನಲ್ಲಿ ಗಣೇಶ ಪೂರ್ತಿ ಹೆದರಿದವನಂತೆ ತೋರಿದ. ಇವತ್ತು ಕಳೆದುಕೊಂಡ ವಸ್ತುಗಳಿಗೆ ಅವನಿಗಿಂತ ಹೆಚ್ಚು ಬೆಲೆಯಿದ್ದಿರಬಹುದು! ಕೃಷ್ಣಯ್ಯ ಅವನ ಮನಸ್ಸನ್ನು ಅರಿತು ಕೊಳ್ಳುವಷ್ಟು ಬುದ್ಧಿವಂತನಾಗಿರಲಿಲ್ಲ. ಬೆನ್ನಮೇಲೆ ಮುಷ್ಟಿಯಿಂದ ಬಾರಿಸಿದ ಎರಡು ಬಾರಿ.

"ನಿಜವಾಗಲೂ ಎಲ್ಲ ಕಳೆದುಕೊಂಡಿದ್ದಿಯಾ, ಇಲ್ಲ? ಎಲ್ಲವನ್ನೂ ಮಾಡಿ ಹಣವನ್ನು ಗುಳುಂ ಮಾಡಿದ್ದೀಯಾ? ನಿನ್ನಂತವರನ್ನು ನಂಬುವದೂ ಕಷ್ಟ. ಇಲ್ಲಿ ಕೇಳು" ಸುಮಿತ್ರಳತ್ತ ತಿರುಗಿದ, "ಇವನನ್ನು ತೋಟದ ಕೆಲಸಗಳಿಗೆ ಕಳುಹಿಸಿ ಅಂದಿದ್ದಾರೆ ನರಸಿಂಹಭಟ್ಟರು."

"ಇಲ್ಲಿಯೇ ಬೇಕಾದ ಕೆಲಸಗಳಿರುವಾಗ ಅಲ್ಲಿಗೆ ಯಾಕೆ? ಬೇಡವೇ ಬೇಡ. ತೋನ್ಸೆಯಿಂದ ಕಾಗದ ಬಂದಿದೆ. ಶಂಕರನಿಗೆ ಜ್ವರವಂತೆ."

"ಎಲ್ಲಿ ಕಾಗದ? ಯಾರಿಗೆ ಜ್ವರ? ಸುನಂದಾ ಹೇಗಿದ್ದಾಳೆ?" ಕೃಷ್ಣಯ್ಯ ಸಣ್ಣ ದೀಪವನ್ನು ಮೂಲೆಯಲ್ಲಿಟ್ಟು ಹುಡುಗಿಯರು ಓದಿಕೊಳ್ಳುತ್ತಿದ್ದ ದೊಡ್ಡ ದೀಪವನ್ನು ಎತ್ತಿಕೊಂಡ. ಸುಮಿತ್ರ ಒಳಗಿನಿಂದ ತಂದು ಕೊಟ್ಟಳು— ಕಾಗದವನ್ನು. ಗಂಗಯ್ಯ ಬರೆದ ಕಾಗದ.

ಗಣೇಶನಿಗೂ ಓದುವ ಆಸೆಯಾಯಿತು. ಗಂಗಯ್ಯ ದೊಡ್ಡ ಕಾಗದವನ್ನು ಬರೆಯದೇಯಿದ್ದರೂ ಕೆಲವೊಮ್ಮೆ ಸ್ವಾರಸ್ಯವಾಗಿ ತೋನ್ಸೆಯ ವಿಷಯ ಗಳನ್ನೆಲ್ಲ ತಿಳಿಸುತ್ತಾನೆ. ಶಂಕರನಿಗೆ ಜ್ವರವಂತೆ. ಈಗ ಹೇಗಿದ್ದಾನೋ. ಅಬ್ಬ! ಅಪ್ಪನ ಮುಖ ಹೇಗಾಗಿದೆ? ಅವನ ಕಣ್ಣುಗಳೂ ನೀರಿನಿಂದ ತುಂಬಿ ಬರುತ್ತಿವೆ.

"ನಾಳೆ ನಾನು ಹೋಗಿ ಬರ್ತೇನೆ." ಕಾಗದವನ್ನು ಮಡಿಸಿ ಮಾಡಿನ ಬದಿಗೆ ಒತ್ತಿಟ್ಟು ಹೇಳಿದ, "ನಾಲ್ಕು ದಿನಗಳಾದವಂತೆ ಅವನಿಗೆ ಜ್ವರ ಪ್ರಾರಂಭವಾಗಿ. ನನ್ನನ್ನು ನೋಡಬೇಕು ಅಂತ ಹೇಳ್ತಾ ಇದ್ದಾನಂತೆ.... ಪಾಪ...."

ಆ ರಾತ್ರಿ ಗಣೇಶನಿಗೆ ಉಪವಾಸ. ಅದೇ ಸುಮಿತ್ರಳ ಶಿಕ್ಷೆಯ ಅಸ್ತ್ರ! ಅವನು ಜೋರಾಗಿ ಗಲಾಟೆ ಮಾಡಲು ಯತ್ನಿಸಿದಾಗ ದೊಣ್ಣೆಯತ್ತಿದ ಕೃಷ್ಣಯ್ಯ. ಅದನ್ನು ನೋಡಿಯೇ ಸತ್ತು ಸುಮ್ಮನಾಯಿತು ಅವನ ನಾಲಿಗೆ. ಎಲ್ಲರೂ ಕಟುಕರು! ಅಮ್ಮ ಇದ್ದಾಗ ತನ್ನನ್ನು ಪ್ರೀತಿಯಿಂದ ನೋಡಿ ಕೊಳ್ಳುತ್ತಿದ್ದ ಅಪ್ಪ ಇಲ್ಲಿ ಹೇಗೆ ಬದಲಾಗಿಹೋಗಿದ್ದಾನೆ. ತಾನು ಅವನ ಮಗನೇ ಅಲ್ಲ ಎಂದುಕೊಂಡಿರಬೇಕು! ಶಂಕರನಿಗೆ ಜ್ವರ ಎಂದಾಕ್ಷಣ ಅವನ ಮುಖ ಹೇಗಾಯಿತು? ತನಗೂ ಇವತ್ತು ಜ್ವರವಿತ್ತು. ಆದರೆ ಅಪ್ಪನ ಗಮನಕ್ಕೇ ಬರಲಿಲ್ಲ. ಹೊಟ್ಟೆ ಹಸಿವೆಯ ಬೆಂಕಿಯಲ್ಲಿ ಬೆಂದುಹೋದರೂ ಅಪ್ಪ ದುಃಖಿಸಲಾರ. ಯಾಕೆ ಹೀಗೆ? ತಂದೆಯಾದವನಿಗೂ ಇಷ್ಟು ಕಠಿಣ

ಹೃದಯವಿರುತ್ತದೆಯೇ? ತಾಯಿ ಮತ್ತು ತನಗೆ ಇಬ್ಬರಿಗೂ ಉಪವಾಸ. ತಾವಿಬ್ಬರೂ ಇಲ್ಲಿಗೆ ಬೇಡದವರು. ನಿಜ, ಅಪ್ಪನಿಗೆ ಹತ್ತಿರದಲ್ಲಿರುವ ತನಗಿಂತ ದೂರವಿರುವ ಇನ್ನಿಬ್ಬರ ಮೇಲೆಯೇ ಅನುಕಂಪ ಹೆಚ್ಚಿರಬೇಕು....

ರಾತ್ರಿ ಎಷ್ಟು ಗಂಟೆ ಕಳೆಯಿತೋ, ಮನೆಯೆಲ್ಲಾ ನಿಶ್ಶಬ್ದ. ಅವನು ನಿದ್ರೆ ಬಾರದೆ ಹೊರಳಾಡಿ ಕತ್ತಲೆಯನ್ನು ದಿಟ್ಟಿಸುತ್ತ ಕುಳಿತಿದ್ದಂತೆ ತೆರೆದು ಕೊಂಡಿತು ಒಳಬಾಗಿಲು. ಅವನು ನೋಡುತ್ತಿದ್ದಂತೆಯೇ ಮೆಲ್ಲನೆ ಹೆಜ್ಜೆ ಯಿರಿಸುತ್ತ ಬಂದಳು ಯಮುನ. ಅವಳ ಒಂದು ಕೈಯಲ್ಲಿ ಬುಡ್ಡಿ ದೀಪ. ಇನ್ನೊಂದು ಕೈಯಲ್ಲಿ ಪಾತ್ರೆ.

"ಇನ್ನೂ ಬರಲಿಲ್ಲವೇ ನಿದ್ರೆ? ಹಿಡಿ, ನಿನಗಾಗಿ ಅನ್ನ ತಂದಿದ್ದೇನೆ. ಬೇಗ ಉಣ್ಣು."

## 10

ಹಳೆಯದಾದ, ಜೀರ್ಣವಾದ ಮನೆಯನ್ನು ಕೆಡವಿ ಹೊಸ ಮನೆಯನ್ನು ಕಟ್ಟಿಸಬೇಕೆಂದು ಸಲಹೆ ಮಾಡಿದ್ದಳು ಸುಮಿತ್ರ. ವಾಸಕ್ಕೆ ಅನುಕೂಲವಲ್ಲದ, ತಗ್ಗಾದ ಕಿಟಕಿ ಬಾಗಿಲುಗಳಿರುವ ಹುಲ್ಲು ಹೊದೆಯಿಸಿದ ಮಣ್ಣಿನ ಮನೆ ಈ ಮಳೆಗಾಲದಲ್ಲಿ ಕುಸಿದು ಬೀಳುವುದು ನಿಜ. ಮಳೆಗಾಲ ಬರುವ ಮೊದಲೇ ಸಿದ್ಧವಾಗಬೇಕಾಗಿದೆ ಮನೆ. ಮಣ್ಣಿನ ಗೋಡೆ, ಕಡಿಮೆ ಕ್ರಯದ ರೀಪು, ಪಕಾಸು, ಹಂಚುಗಳನ್ನು ಉಪಯೋಗಿಸಿದರೆ ಕೆಲವೇ ಸಾವಿರ ರೂಪಾಯಿ ಗಳಲ್ಲಿ ಮನೆ ಕಟ್ಟಬಹುದು. ಕೃಷ್ಣಯ್ಯ ಆ ಕ್ಷಣವೇ ಒಪ್ಪಿಕೊಂಡ. ಹಣದ ವ್ಯವಹಾರವೆಲ್ಲ ಸುಮಿತ್ರಳೇ ನೋಡಿಕೊಳ್ಳುತ್ತಿದ್ದುದರಿಂದ ಅವನಿಗಿರಲಿಲ್ಲ ತಲೆ ಬಿಸಿ. ಅವಳು ಹೇಳಿದ್ದನ್ನು ಮಾಡಿದರೆ ಸಾಕು. ಮರದ ಕೆಲಸಗಳಿಗೆ ಆಚಾರಿಗಳನ್ನು, ಮಣ್ಣು ಕೆಲಸಗಳಿಗೆ ಇಬ್ಬರು ಕೆಲಸದವರನ್ನು ಅವಳೇ ಗೊತ್ತುಪಡಿಸಿದಾಗ 'ಬೇಡ' ಎನ್ನಲಿಲ್ಲ. ಮನೆಯ ವಿಷಯದಲ್ಲಿ ಸುಮಿತ್ರ ಅಲ್ಪಸ್ವಲ್ಪ ಪತಿಯೊಂದಿಗೆ ವಿಚಾರ ವಿನಿಮಯ ಮಾಡಿದಳು, ಕೇಳಲಿಲ್ಲ ಮೂರನೆಯವರನ್ನು! ಅವಳು ಮಾಡುವ ಯೋಜನೆ, ಸಲಹೆ, ಕೆಲಸಗಳನ್ನು ವಿರೋಧಿಸಲಿಲ್ಲ ಕೃಷ್ಣಯ್ಯ.

ಮನೆಯ ಎದುರು ಇರುವ ಎತ್ತರದ ಸ್ಥಳದಲ್ಲಿ ಮನೆ ಕಟ್ಟುವದೆಂದೂ ಅನಂತರ ಹಳೆ ಮನೆಯನ್ನು ಕೆಡವಿ ಅಲ್ಲಿ ಅಂಗಳ ಮಾಡುವದೆಂದೂ ನಿಶ್ಚಯಿಸಿ ಪ್ರಾರಂಭಮಾಡಿಯಾಯಿತು ಹೊಸ ಕೆಲಸವನ್ನು. ಗಣೇಶನಿಗೋ ಎಲ್ಲಿಲ್ಲದ ಉತ್ಸಾಹ. ಅವರೊಂದಿಗೇ ಬಿಡುವಿಲ್ಲದ ದುಡಿತ. ತಲೆಯಲ್ಲಿ ಹೊರುತ್ತಾನೆ ಮಣ್ಣನ್ನು, ತರುತ್ತಾನೆ ನೀರನ್ನು. ಕೆಲಸದವರೊಂದಿಗೆ ಮಣ್ಣನ್ನು ಕಲಸಿ ಕಾಲಿನಿಂದ ಗಜಗಜನೆ ತುಳಿಯುತ್ತಾನೆ. ಕಲಸಿದ ಮಣ್ಣನ್ನು ತಲೆಯಲ್ಲಿ ಹೊತ್ತು ಗೋಡೆಯಿಡಲು ಸಹಕರಿಸುತ್ತಾನೆ. ಒಣಗಿದ ಮಣ್ಣಿನ ಭಾಗಗಳನ್ನು ಪೆಟ್ಟುಮಣೆಯಿಂದ ಗುದ್ದುವಾಗ ಸೋಲುತ್ತವೆ ಅವನ ಕೈಗಳು, ನೋಯು ತ್ತವೆ ಭುಜಗಳು. ಬೆಳಗ್ಗೆ ದನದ ಹಾಲನ್ನು ಅವನೇ ಕರೆಯುತ್ತಾನೆ. ಅನಂತರ ಮಣ್ಣಿನ ಕೆಲಸ. ಮಧ್ಯಾಹ್ನ ಹೊಸ ಅಡಿಕೆ ಸಸಿಗಳಿಗೆ ನೀರು ಹುಯ್ಯಬೇಕು. ಸಾಯಂಕಾಲ ಕಾಡಿನಲ್ಲಿ ಕೆಲಸದವನು ಕಡಿದು ಹಾಕಿದ ಮರವನ್ನು ಹೊತ್ತು ಸಾಗಿಸಬೇಕು ಮನೆಯಂಗಳಕ್ಕೆ. ಮುಸ್ಸಂಜೆಯಲ್ಲಿ ಎರಡು ಕಟ್ಟು ಹಸಿರು ಸೊಪ್ಪನ್ನು ಮಾಡಿ ತರಬೇಕು ದನದ ಕೊಟ್ಟಿಗೆಗೆ.

"ಇವನು ಇರುವದರಿಂದ ನಮಗೆ ಎಂಟು ಭುಜಗಳ ಬಲ!" ಎಂದು ಸುಮಿತ್ರ ಎಲ್ಲರೊಡನೆ ಹೇಳುವಾಗ ಗಣೇಶನ ಭುಜ ಮೇಲೇರಿ ಕೆಳಗಿಳಿಯು ತ್ತವೆ ಹೆಮ್ಮೆಯಲ್ಲಿ.

ಅವಳು ಬಾಯ್ತುಂಬ ಹೊಗಳಿದಂತೆ ತೋರಿದರೂ ಅವನಿಗೆ ಮಾಡುವ ಉಪಚಾರ ಎಂದಿನಂತೆ. ಹೆಚ್ಚಿಲ್ಲ, ಕಡಿಮೆಯಿಲ್ಲ. ಅವಳ ಸ್ವಭಾವ ಅವನ ವಿಷಯದಲ್ಲಿ ಒಂದೇ ದಿಕ್ಕಿಗೆ ಹರಿಯುವ ನದಿಯಂತೆ. ಕೃಷ್ಣಯ್ಯನೂ ಈ ದಿನ ಗಳಲ್ಲಿ ತನ್ನಿಂದ ನಿಧಾನವಾಗಿ ದೂರ ಸರಿಯುತ್ತಿದ್ದಾನೆ ಎಂಬ ಅನಿಸಿಕೆ ಗಣೇಶ ನಿಗೆ. ಹಗಲೆಲ್ಲ ಅಪ್ಪನೊಡನೆ ಹೆಗಲಿಗೆ ಹೆಗಲು ಹಚ್ಚಿ ದುಡಿದರೂ ಉಣ್ಣುವ ತಿನ್ನುವ ಸಮಯದಲ್ಲಿ, ಸುಮ್ಮನೆ ಕುಳಿತಾಗ ಸುಮಿತ್ರಳೊಂದಿಗೆ ಹರಟುತ್ತಾನೆ. ಅವನು ಸಮೀಪದಲ್ಲಿದ್ದರೂ ಇನ್ನಾರೋ ಎನ್ನುವಂತೆ ವರ್ತಿಸುವದನ್ನು ನೋಡಿ ದರೆ ಗಣೇಶನಿಗೆ ಅಚ್ಚರಿ! ದಿನಕ್ಕೆ ಹಲವು ಬಾರಿಯಾದರೂ ಜ್ಞಾಪಿಸಿಕೊಳ್ಳು ತ್ತಾನೆ ಶಂಕರ-ಸುನಂದೆಯನ್ನು.

ಮುಸ್ಸಂಜೆಯಾದಮೇಲೆ ಅವನ ಪಾಲಿಗೆ ಘೋರಶಿಕ್ಷೆ. ಕಟ್ಟುವ ಹೊಸ ಮನೆಯಿಂದಾಗಿ ಈಗ ಅವನಿಗೆ ದನದ ಕೊಟ್ಟಿಗೆಯ ಮೂಲೆಯಲ್ಲಿ ಖಾಯಂ

ಸ್ಥಳ. ಅಪ್ಪನ ಸ್ನೇಹ, ವಾತ್ಸಲ್ಯದ ಮಾತುಗಳನ್ನು ಕೇಳಲು ಹಾತೊರೆಯುತ್ತವೆ ಕಿವಿಗಳು. ಆದರೆ ಅಪ್ಪ ಅಷ್ಟಿಷ್ಟು ಕುಡಿದು ಬಂದು ಜಗಲಿಯ ತುದಿಯಲ್ಲಿ ಅಥವಾ ಒಳಗೆಲ್ಲೋ ಕುಳಿತು ಬಿಡುತ್ತಾನೆ ಬೀಡಿ ಎಳೆಯುತ್ತ. ಸುಮಿತ್ರ ತನ್ನಿಬ್ಬರು ಹುಡುಗಿಯರನ್ನು ಆದಷ್ಟು ದೂರವಿರಿಸಿದ್ದಾಳೆ ಅವನಿಂದ. ಜೊತೆ ಯಲ್ಲಿ ಆಡುವದೂ ಅವನ ಪಾಲಿಗೆ ನಿಷೇಧ! ಪರಕೀಯನಂತೆ ಮನೆಯವರಿಂದ ಪ್ರತ್ಯೇಕವಾಗಿರುವಾಗ ಮನಸ್ಸು ಹಾತೊರೆಯುತ್ತದೆ ಏನನ್ನೋ. ನಗಬೇಕು, ಚೆನ್ನಾಗಿ ನಗಬೇಕು ಎನ್ನಿಸುತ್ತದೆ. ಸುಮ್ಮನೆ ಗೋಡೆಗೊರಗಿ ಕುಳಿತರೆ ಎಡೆ ಬಿಡದೆ ಆಕಳಿಕೆ. ಬೀಸುವ ಚಳಿಗಾಳಿಯಲ್ಲಿ, ತಂಗಾಳಿಯಲ್ಲಿ, ಬೆಳದಿಂಗಳಿನಲ್ಲಿ, ಕಾಡಿನಿಂದ ಕೇಳಿಬರುವ ಸದ್ದಿನಲ್ಲಿ ಅವನ ಮನಸ್ಸು ಏನನ್ನೋ ಹುಡುಕಲು ಯತ್ನಿಸುತ್ತದೆ. ಅವನ ಹೃದಯ ತಟಪಟ ಹೊಯ್ದಾಡುತ್ತದೆ, ಎಳೆ ಗುಬ್ಬಚ್ಚಿ ಮರಿಯಂತೆ.

ಚಿಮಣಿದೀಪದ ಬೆಳಕಿನಲ್ಲಿ ಏನಾದರೊಂದು ಪುಸ್ತಕವನ್ನು ಕೈಗೆತ್ತಿ ಕೊಂಡು ಓದಲು ಪ್ರಾರಂಭಿಸಿದಾಕ್ಷಣ ಸುಮಿತ್ರಳ ಗರ್ಜನೆ, "ದೀಪ ತೆಗೀ. ಚಿಮಿಣೀ ಎಣ್ಣೆಗೆ ಕಂಡಾಬಟ್ಟೆ ಕ್ರಯ. ನೀನು ಓದಿ ಉದ್ಧಾರವಾಗುವುದು ಅಷ್ಟರಲ್ಲೇ ಇದೆ!"

ಒಂದಿನಿತೂ ಸ್ಮರಣೆಯಿಲ್ಲ. ಅವಳ ಕೋಣೆಯಲ್ಲಿ ಕೆಲವೊಮ್ಮೆ ಮಧ್ಯ ರಾತ್ರಿಯ ತನಕ ಉರಿಯುತ್ತ ಇರುತ್ತದೆ ದೀಪ. ನಿಜ, ತಾನು ಅವಳಿಗೆ ಮಲ ಮಗ! ಅವಳದ್ದೇ ಪಡಿಯಚ್ಚು ಸುಮನ. ತಾನೆಂದರೆ ಅವಳ ದೃಷ್ಟಿಯಲ್ಲಿ ಮನೆ ಆಳು. ಸಣ್ಣಪುಟ್ಟ ಕೆಲಸಗಳನ್ನು ಮಾಡಿಕೊಡಲೇಬೇಕು. ಸ್ವಲ್ಪ ಹೆಚ್ಚು ಕಡಿಮೆಯಾದರೂ ತನ್ನ ಮೇಲೆ ಅಧಿಕಾರ ಚಲಾಯಿಸುವಳು.

ಹೀಗೆ ಒಂದು ದಿನ ಅಂಗಳದಲ್ಲಿ ಒಣಹಾಕಿದ್ದ ಬಟ್ಟೆಯನ್ನು ತರಲಿಲ್ಲ ಎಂದು ಆಕ್ಷೇಪಿಸಿ, "ನಾನು ಹೇಳಿದ ಕೆಲಸವನ್ನು ಮಾಡದಷ್ಟು ಸೊಕ್ಕೇನೋ ನಿನಗೆ?" ಎಂದು ಸುಮನ ಆರ್ಭಟಿಸಿದಾಗ ಮೈರಕ್ತವೆಲ್ಲ ಕುದಿಯಿತು ಎಳೆಯನಿಗೆ. ತನಗಿಂತ ಚಿಕ್ಕವಳು ತನ್ನ ಮೇಲೆ ಅಧಿಕಾರ ಚಲಾಯಿಸಲು ತಾನೇನು ಇಲ್ಲಿಯ ಆಳೇ? ಅವಳು ತಿನ್ನುತ್ತಿದ್ದ ಗೇರುಬೀಜಗಳನ್ನು ಮುಷ್ಟಿ ಯಿಂದ ಬಾಚಿಕೊಂಡು ಒಣಗಿದ್ದ ಇನ್ನೂ ಕೆಲವು ಬಟ್ಟೆಗಳನ್ನು ಅಂಗಳಕ್ಕೆ ಮಣ್ಣಿನಲ್ಲಿ ಎಸೆದ.

“ಹೋಗ್ಹೋಗು, ಬೇಕಿದ್ದರೆ ನಿನ್ನ ಬಟ್ಟೆಗಳನ್ನೆಲ್ಲ ನೀನೇ ತೊಗೊಂಡು ಬಾ.”

ಎಣ್ಣೆಗಪ್ಪು ಬಣ್ಣದ ಸುಮನ ಮತ್ತಷ್ಟು ಕಪ್ಪಾದಳು ಕ್ರೋಧದಲ್ಲಿ. ಗಣೇಶ ‘ಹಾ ಹೋ’ ಎಂದು ನಗುತ್ತ ಉಳಿದ ಗೇರುಬೀಜಗಳನ್ನು ಕಸಿದು ಬಾಯಿಗೆ ಸದುಕೊಂಡು ಕೈಮುಷ್ಟಿ ತಿರುಗಿಸಿದ ಅವಳೆದುರು, “ನೀನು ಹೇಳಿದ ಹಾಗೆ ಕೇಳ್ತೇನೆ....ಬೊಟ್ಟಿ....ನೀನೂ ನಿನ್ನ ಅಮ್ಮನಂತೆ ದಿನಾ ದಿನಾ ಚಾಳ ಜೋರಾಗ್ತಾ ಇದ್ದಿ. ನಾಲ್ಕು ಗುದ್ದುತೇನೆ ನೋಡು.”

ಅವನ ಅಪಹಾಸ್ಯದಿಂದ ಉರಿದೆದ್ದ ಸುಮನ, “ನೋಡಮ್ಮ ಇಲ್ಲಿ” ಎಂದು ಬೊಬ್ಬೆಹಾಕಿದಳು ಮುಳಿಹುಲ್ಲು ಹಾರಿಹೋಗುವಂತೆ.

ಕಸ ತೆಗೆಯುತ್ತಿದ್ದ ಸುಮಿತ್ರ ಗಳಿಗೆಯಲ್ಲಿ ಪ್ರತ್ಯಕ್ಷಳಾದಳು ಹಿಡಿಸೂಡಿಯೊಂದಿಗೆ. ತನ್ನ ಮಗಳನ್ನು ಕೆಣಕುವ ಧೈರ್ಯ ಬಂದಿತೇ ಗಣೇಶನಿಗೆ? ಇದೇನು ಉದ್ಧಟತನ? ಅವಳು ಸಾಕಷ್ಟು ಬೇಗ ಮಗಳ ತಲೆ ನೇವರಿಸಿದಳು. “ಗಣೇಶ, ಬಟ್ಟೆ ತಗೊಂಡು ಬಾ.”

ನಿಂತ ಸ್ಥಳದಿಂದ ಕದಲಲಿಲ್ಲ ಗಣೇಶ. ಹಗಲೆಲ್ಲ ಅವನು ಕೆಲಸದವನಂತೆ ದುಡಿಯುವದಿಲ್ಲವೇ? ಬಟ್ಟೆಯನ್ನು ತಂದು ಒಳಗಿಟ್ಟರೆ ಅವನ ಕೈಗಳು ಸವೆದು ಹೋಗುವದಿಲ್ಲ. ಎಲ್ಲ ಕೆಲಸಗಳಲ್ಲಿ ಇದೂ ಒಂದು. ಆದರೆ ಒಬ್ಬ ಕೆಲಸದವನಿಗೆ ಆಜ್ಞೆ ಮಾಡುವಂತೆ, ಹಕ್ಕಿನಿಂದ ಹೇಳುವಂತೆ ‘ಹೋಗು, ಮಾಡು’ ಎಂದು ಹೇಳಿದರೆ ತಾನೇನು ಇವರು ಹೇಳಿದುದನ್ನೆಲ್ಲ ಬಾಯ್ಮುಚ್ಚಿ ಮಾಡುವಂತಾಯಿತಲ್ಲ. ಸುಮ್ಮನೆ ಇದ್ದರೆ ಬೆಟ್ಟವನ್ನೇ ಹೊರು ಎಂದಾರು. ತಾನು ಬಂದಮೇಲೆ ಒಂದು ಕಡ್ಡಿಯೆತ್ತುವದಕ್ಕೂ ಸೋಮಾರಿತನ ಇವರಿಗೆಲ್ಲ.

“ಕೇಳಿತೇನೋ ನಾನು ಹೇಳಿದ್ದು....?”

“ಕಿವಿ ಕೆಪ್ಪಾಗಿಲ್ಲ, ಇನ್ನೂ. ಅವಳ ಬಟ್ಟೆಗಳನ್ನು ನಾನ್ಯಾಕೆ ತರಲಿ? ಅವಳೇ ಬೇಕಿದ್ದರೆ ತಂದು ಒಳಗಿಡಲಿ.”

ಸುಮಿತ್ರಳ ಕಣ್ಣುಗಳು ಹೊರಳಿದವು ಅತ್ತ ಇತ್ತ. ಹಿಡಿಸೂಡಿ ಹಿಡಿದು ಕೊಂಡೇ ಅವನ ಹತ್ತಿರ ಬಂದು ಗಿರಸಿ ಕಿವಿಯನ್ನು ಹಿಂಡಿದಳು....ತಪ್ಪಿಸಿ ಕೊಳ್ಳಲಾಗಲಿಲ್ಲ ಅವನಿಂದ.

“ನಿನ್ನನ್ನು ಈ ಮನೇಲಿ ನಾನು ಸುಮ್ಮನೆ ಸಾಕ್ತಾ ಇದ್ದೇನೆಯೋ?

ಇಷ್ಟು ಚೆನ್ನಾಗಿ ಒಳ್ಳೆಯ ಮನೆಯಲ್ಲಿರುವದು ನಿನ್ನ ಪುಣ್ಯ ಅಂದ್ಕೋ! ತಗೊಂಡು ಬಾ ಬಟ್ಟೆಗಳನ್ನು."

ಕಿವಿನೋವಿನಿಂದ ತಲೆಯಲ್ಲಾಡಿಸಿದ ಅವನು. "ಇನ್ಮೇಲೆ ನಾನು, ನನ್ನ ಮಕ್ಕಳು ಹೇಳಿದ ಕೆಲ್ಸಗಳನ್ನು ಹಾಂ ಹೂಂ ಅನ್ನದೆ ಮಾಡ್ಬೇಕು. ತಿಳೀತೇನೊ —ನಾಯೀ!"

ಸುಮಿತ್ರಳ ದೃಷ್ಟಿಯಲ್ಲಿ ಅವನು ನಾಯಿ! ದುಃಖವುಕ್ಕಿದರೂ ತಡೆದು ಕೊಂಡು ತಿರುಗಿಸಿದ ಮುಖವನ್ನು. ಅವನ ಕರಿನಾಯಿ ಬಾಲ ಅಲ್ಲಾಡಿಸುತ್ತ ಕುಳಿತಿತ್ತು ಅಂಗಳದ ತುದಿಯಲ್ಲಿ. ಅದಕ್ಕೆ ಹತ್ತಿರ ಬರುವ ಧೈರ್ಯವಿಲ್ಲ. ಸುಮಿತ್ರಳಿಗೆ ಅವನ ಮೇಲಿರುವದಕ್ಕಿಂತ ಮಿಗಿಲಾದ ಕ್ರೋಧವಿದೆ ನಾಯಿಯ ಮೇಲೆ. ಅದರ ನೆರಳು ಕಂಡರೂ ಎತ್ತುತ್ತಾಳೆ ಕೋಲನ್ನು.

ಇತ್ತೀಚಿನ ದಿನಗಳಲ್ಲಿ ಕರಿನಾಯಿ ಗಣೇಶನ ಆತ್ಮೀಯ ಸ್ನೇಹಿತ. ಎಲ್ಲಿಂದಲೋ ಅಲೆದು ಬಂದು ಅವನ ಆಶ್ರಯಕ್ಕೆ ಬಿದ್ದ ಮರಿ ದೊಡ್ಡದಾಗಿದೆ. ಈಗ ಬುದ್ಧಿ ಬಂದಿದೆ. ಅವನಂತೆ ಸುಮಿತ್ರಳ ಕೋಪಕ್ಕೆ ತುತ್ತಾಗಿ, ಅವನು ಇಕ್ಕುವ ಅನ್ನವನ್ನು ತಿಂದು, ಅವನು ಹೋದ ಕಡೆಗೆಲ್ಲಾ ಹಿಂಬಾಲಿಸಿ ರಾತ್ರಿ ಅವನ ಹಾಸಿಗೆಯ ಬದಿಯಲ್ಲಿಯೇ ಬಿದ್ದುಕೊಳ್ಳುತ್ತದೆ ವಿಧೇಯ ಮಿತ್ರನಂತೆ. ಕಟ್ಟಿಹಾಕಿದ ದನದಂತೆ ಒಬ್ಬಂಟಿಗನಾಗಿ ಸುಮ್ಮನೆ ಕುಳಿತಾಗ ನಾಯಿ ಅವನ ಕಾಲು ನೆಕ್ಕುತ್ತ, ಬಾಲ ಅಲ್ಲಾಡಿಸುತ್ತ, ಅವನಿಂದ ಪ್ರೀನೇವರಿಸಿ ಕೊಳ್ಳುತ್ತದೆ. ಜೀವವೆಂದರೂ ಹತ್ತಿರವಾಯಿತು ಮಾತುಬಾರದ ಆ ಮೂಕ ಪ್ರಾಣಿ.

ಮನೆಯ ಗೋಡೆಗಳು ಸಾಕಷ್ಟು ಮೇಲೇರಿವೆ. ಕಿಟಕಿ, ಬಾಗಿಲುಗಳನ್ನೂ ವ್ಯವಸ್ಥಿತವಾಗಿ ಇಡಲಾಯಿತು. ಇದೇ ಸಮಯದಲ್ಲಿ ನರಸಿಂಹ ಭಟ್ಟರ ಮನೆಯಿಂದ ಅವರ ಅಡಿಕೆತೋಟದ ಕಾವಲಿಗಾಗಿ ಹೇಳಿಕೆ ಬಂದಿತು ಗಣೇಶನಿಗೆ. ಇನ್ನೂ ಮುಖದ ಮೇಲೆ ಚಿಗುರುಮೀಸೆ ಮೂಡದ ಎಳೆಯ. ಇವನು ತೋಟದ ಕಾವಲನ್ನು ಮಾಡಬಲ್ಲನೇ?

"ಒಂದು ಇಲಿ ಹೋದರೆ ಅಷ್ಟೆತ್ತರಕ್ಕೆ ಹಾರುವವನು ತೋಟದ ಮಾಳದಲ್ಲಿ ರಾತ್ರೆ ಮಲಗಿದರೆ ಸೈ....ಅವರು ಇನ್ಯಾರನ್ನಾದರೂ ಮಾಡಿಕೊಳ್ಳಲಿ" ಎಂದಳು ಸುಮಿತ್ರ ಅಸಹನೆಯಿಂದ. ಅವಳಿಗೆ ಅವನನ್ನು ಕಳಿಸುವ ಮನಸ್ಸಿಲ್ಲ.

ರಾತ್ರೆ ಪಾತ್ರೆ ತೊಳೆಯುವನು, ಬೆಳಗ್ಗೆ ಹಾಲು ಕರೆಯುವನು, ಕೊಟ್ಟಿಗೆಯ ಕೆಲಸ ಎಲ್ಲದಕ್ಕೂ ಆಗಬೇಕು ಗಣೇಶ. ಅವನು ಹೊರಟುಹೋದರೆ ತನಗೇ ಕಷ್ಟ. ಬೆಳಗ್ಗೆ ತಡವಾಗಿ ಬಂದನೆಂದರೆ ಇನ್ನೂ ತಾಪತ್ರಯ.

"ದೊಡ್ಡವರು ಬಂದು ಕೇಳುವಾಗ" ಕೃಷ್ಣಯ್ಯ ಹೇಳಿದ, "ಇಲ್ಲ ಅಂತ ಹ್ಯಾಗೆ ಹೇಳಲಿ? ಅವನಿನ್ನೂ ಸಣ್ಣವನು ಅಂದೆ. ಸಣ್ಣವನಾದರೂ ನಂಬಿಕೆಯವನು ಬೇಕಂತೆ ಅವರಿಗೆ. ಸರಿ, ಕಳುಹಿಸ್ತೇನೆ ಎಂದು ಒಪ್ಕೊಂಡು ಬಂದೆ. ಇನ್ನು ನಿನ್ನ ಇಷ್ಟ."

ನಾಲ್ಕು ದಿನಗಳನಂತರ ನರಸಿಂಹಭಟ್ಟರು ಬಂದರು ಅವರ ಮನೆದಾರಿಯಲ್ಲಿ. ಕೃಷ್ಣಯ್ಯ ಮತ್ತು ಗಣೇಶ ಕಟ್ಟಿಗೆ ತರಲೆಂದು ಹೊರಟುಹೋಗಿದ್ದರು ಮನೆಹಿಂಬದಿ ಇರುವ ಕಾಡಿಗೆ. ಅಂಗಳದ ಒರಳಲ್ಲಿ ಬತ್ತವನ್ನು ಕುಟ್ಟುತ್ತಿದ್ದ ಸುಮಿತ್ರ ಭಟ್ಟರನ್ನು ಕಂಡು ಒನಕೆಯನ್ನು ಬದಿಗಿರಿಸಿ ಬೆವರಿಳಿಯುವ ಮುಖವನ್ನು ಒರಸಿಕೊಳ್ಳುತ್ತ, "ಬನ್ನಿ" ಎಂದಳು ಸಂಕೋಚದಲ್ಲಿ. ಅದು ಉಪಚಾರದ ಮಾತು. ನೇರವಾಗಿ ಒಳಗೆ ಕರೆದು ಕುಳ್ಳಿರಿಸುವದು ಸಾಧ್ಯವಿಲ್ಲ. ಕರೆದರೂ ಅವರು ಬರಲಾರರು. ಅರ್ಧ ಕಟ್ಟಿದ್ದ ಹೊಸಮನೆಯ ಒಳಹೊರಗೆಲ್ಲ ವೀಕ್ಷಿಸಿದ ಭಟ್ಟರು ವ್ಯಕ್ತಪಡಿಸಿದರು ಸಂತೋಷವನ್ನು.

"ಮನೆ ಚೆನ್ನಾಗಿ ಕಟ್ತಾ ಇದ್ದೀರಿ" ನೋಡುತ್ತ ಅವರೆಂದರು, "ಎಲ್ಲಿ ಕೃಷ್ಣಯ್ಯ? ಮನೆಗೆ ಕಳಿಸಿದರೆ ಒಂದೆರಡು ತಾಳೆ ಅಡ್ಡಗಳನ್ನು ತೆಗೆದುಕೊಂಡು ಹೋಗಬಹುದು. ಬರಲಿ." ಅವರ ದೃಷ್ಟಿ ಗದ್ದೆಯತ್ತ ಹರಿಯಿತು. "ಬೆಳೆ ಚೆನ್ನಾಗಿದೆಯಲ್ಲ. ರೋಗಗೀಗ ಬಂದಿಲ್ಲ ತಾನೇ?"

"ಬಂದಿತ್ತು" ಸುಮಿತ್ರ ದೇಹವನ್ನು ಕುಗ್ಗಿಸಿಕೊಳ್ಳುತ್ತ ಅಂದಳು, "ಅವರು ಬೇಕಾದ ಔಷಧಿಗಳನ್ನೆಲ್ಲ....ಅಂದರೆ....ಅವರಿವರ ಹತ್ರ ಕೇಳಿ ಅದಕ್ಕೆ ಹೊಡೆದಿದ್ದಾರೆ."

"ಬಹಳ ಕಷ್ಟಪಡ್ತಾನಮ್ಮ ಕೃಷ್ಣಯ್ಯ. ಅಂತೂ ನೀನು ಅದೃಷ್ಟವಂತೆ. ಏನಾಯ್ತು ನಿಮ್ಮ ನೀರಿನ ಜಗಳ? ಗೋಪಣ್ಣ ಏನು ಹೇಳ್ತಾನೆ?"

"ಸುಗ್ಗಿ ಬೆಳೆ ಕುಯ್ಯುವ ತನಕ ಜಗಳ ಇದ್ದದ್ದೇ. ನಾನಂತೂ ಅವರ ಮನೆ ಹತ್ರಪತ್ರ ಸುಳಿದಿಲ್ಲ. ನಾನಾಯ್ತು....ನನ್ನ ಮನೆಯಾಯ್ತು. ತುಂಬ ಬಿಸಿಲು. ಕುಡಿಯಲು ಸ್ವಲ್ಪ ಏನಾದರೂ ಎಳೆನೀರು...."

"ಏನೂ ಬೇಡ" ಅವರು ಮತ್ತೊಮ್ಮೆ ನೋಡಿದರು ಸುತ್ತಲೂ. "ಎಲ್ಲಿ ಗಣೇಶ? ತೋಟದ ಕಾವಲಿಗೆ ಬರ್ತಾನೇನು? ಕೇಳೋಣವೆಂದು ಬಂದೆ ಇಲ್ಲಿಯವರೆಗೆ"

ಹಿರಿಯರ ಗಂಭೀರ ಪ್ರಶ್ನೆಗೆ ಸುಮಿತ್ರ ಹೇಗೆ ಉತ್ತರಿಸಬೇಕು ಎಂದು ತಿಳಿಯದೆ ತೊಳಲಾಡಿದಳು. ಅವರದೇ ಆದ ಈ ಭೂಮಿಯನ್ನು ಸರಕಾರದ ಕಾನೂನಿನಿಂದ ಈಗ ದಕ್ಕಿಸಿಕೊಂಡಿದ್ದರೂ ಸಂಪೂರ್ಣವಾಗಿ ಮರೆಯುವಷ್ಟು ಕೃತಘ್ನಳು ಅವಳಲ್ಲ. ಹಿಂದೆ, ಇಂದು, ಮುಂದೆ ಎಂದೆಂದಿಗೂ ಸಹಾಯ ಮಾಡಬಲ್ಲ ಆ ಹಿರಿಯರನ್ನು ಅಗೌರವಿಸುವುದೂ ಅಪರಾಧವೇ ಸರಿ.

"ನೋಡಿದೆಯಾ?" ಅವರು ವಿಷಾದದಲ್ಲಿ ಅಂದರು, "ಸೋಂಪನಿಗೆ ದರಕಾಸ್ತು ಮಾಡಿಕೊಟ್ಟು ಮನೆ ಬೇರೆ ಕಟ್ಟಿಸಿಕೊಟ್ಟಿದ್ದೆ. ಆದರೆ ಉಪಕಾರ ಮಾಡಿದ ಸ್ಮರಣೆಯೂ ಅವನಿಗಿಲ್ಲ. ದಿನಾಲೂ ತೋಟದಿಂದ ನಾಲ್ಕು ನಾಲ್ಕು ಸೇರು ಹಣ್ಣು ಅಡಿಕೆಯನ್ನು ಕದ್ದು ಸಾಗಿಸ್ತ ಇದ್ದ ಅವನ ಮನೆಗೆ. ನಮಗೆ ಯಾರಿಗೂ ತಿಳಿಯಲೇ ಇಲ್ಲ."

"ಈಗಿನ ಜನಗಳೇ ಹಾಗೆ." ಧ್ವನಿ ಸೇರಿಸಿದಳು ಸುಮಿತ್ರ, "ಗಣೇಶನ ಹತ್ರ ತೋಟದ ಕಾವಲಿಗೆ ಹೋಗ್ತಿಯೇನೋ ಅಂತ ಕೇಳಿದಾಗ ಇಲ್ಲ ಅಂದಿದ್ದ. ಇನ್ನೊಂದ್ಸಾರಿ ಕೇಳಿ ನೋಡಿ ಒತ್ತಾಯಿಸಿ ಕಳಿಸ್ತೇನೆ."

ನರಸಿಂಹ ಭಟ್ಟರಿಗೆ ಅಷ್ಟೇ ಬೇಕಾಗಿತ್ತು. "ನಾನು ನಿಗದಿಪಡಿಸಿದ ಸಂಬಳ ಕೊಡುತ್ತೇನೆ, ಇವತ್ತಿನಿಂದಲೇ ಬರಲಿ" ಎಂದು ತಿಳಿಸಿ ಹೊರಟು ಹೋದರು. 'ತಥ್' ಸುಮಿತ್ರ ಒನಕೆಯನ್ನು ಎತ್ತಿ ಹಾಕಿದಳು ಒರಳಿನ ಮೇಲೆ. ಶ್ರೀಮಂತ ಹಿರಿಯರು ಮನೆಬಾಗಿಲಿನವರೆಗೂ ಬಂದು ಕೇಳಿದಾಗ ಗಣೇಶನನ್ನು ಕಳುಹಿಸದೇ ಇರುವುದೂ ಅಸಭ್ಯತನ. ಇನ್ನೊಬ್ಬರ ಋಣಕ್ಕೆ ಒಳಗಾದರೆ ಯಾವಾಗಲೂ ಹೀಗೇ.

ರಾತ್ರಿ ಊಟ ಬಡಿಸುವಾಗ ತೋಟದ ಕಾವಲಿಗೆ ಹೋಗುವ ವಿಷಯವನ್ನು ಹೇಳುತ್ತಿದ್ದಂತೆ ಗಣೇಶ ಮನದಲ್ಲೇ ಬೆಚ್ಚಿ, "ಸಾಧ್ಯವಿಲ್ಲ" ಎಂದುಬಿಟ್ಟ. ಸುಮಿತ್ರ ಅವನ ಹತ್ತಿರವೇ ಕುಳಿತು ಸೌಟಿನಿಂದ ಕುಟ್ಟಿದಳು ನೆಲವನ್ನು.

"ಅವರಾಗಿಯೇ ಬಂದು ಕೇಳುವಾಗ ಇಲ್ಲ ಅನ್ನಲಾಗಲಿಲ್ಲ. ರಾತ್ರಿಯ ಕೊಟ್ಟಿಗೆ ಕೆಲ್ಸಗಳನ್ನೆಲ್ಲ ಮುಗ್ಸಿ ಹೋಗು, ನಸುಕುಮೂಡುವ ಮೊದಲೇ ಬಾ."

"ಅಲ್ಲೇನು ಊಟ, ಬೆಳಗ್ಗೆಯ ಕಾಫಿ ಕೊಡ್ತಾರ?"

"ಅದೆಲ್ಲ ಇಲ್ಲ. ಏನೋ ಹಣ ಅಷ್ಟು ಕೊಡ್ತಾರಂತೆ. ಕೊಟ್ಟಿದ್ದನ್ನ ನನ್ನ ಕೈಗೆ ತಂದೊಪ್ಪಿಸು. ಇನ್ನು ಕೆರೆ ತೋಡಿಸುವ ಕೆಲ್ಸ ಪ್ರಾರಂಭವಾದ, ಎಷ್ಟು ಹಣ ಇದ್ದರೂ ಸಾಲದು."

ನಿಜವಾಗಿಯೂ ಕೆರೆ ತೋಡಲು ಅಸಮ್ಮತಿ ಸೂಚಿಸಿದ್ದಳು ಸುಮಿತ್ರ. ಒರತೆ ನೀರು ಬೇಕಾದಷ್ಟು ಇರುವಾಗ ಗೋಪಣ್ಣನಿಗೆ ಹೆದರಿ ಕುಳಿತುಕೊಳ್ಳುವದೇ? ಆದರೆ ಕೃಷ್ಣಯ್ಯ ಯೋಚಿಸಿದ್ದಾನೆ ತನ್ನಲ್ಲಿಯೇ. ಇವತ್ತು ನೀರಿನ ಜಗಳ, ನಾಳೆ ಇನ್ನೊಂದರ ವೈಮನಸ್ಸು....ನಾಡಿದ್ದು ಇನ್ನೇನಾದರೂ ಹೊಗೆಯಾಡುವ ಕಿಚ್ಚು. ಹೀಗೆ ಎರಡೂ ಮನೆಗಳಲ್ಲಿ ಶಾಂತಿಯಿರದು. ಗೋಪಣ್ಣ ಹರಿಯುವ ನೀರನ್ನು ತನ್ನ ಗದ್ದೆಗಳಿಂದಾಚೆ ಎಲ್ಲಿಗೆ ಬೇಕಾದರೂ ಬಿಡಲಿ ಅಥವಾ ಹೊಟ್ಟೆಯೊಳಗೆ ತುಂಬಿಸಿಕೊಳ್ಳಲಿ. ಮುಂದಿನ ಸುಗ್ಗಿ ಬೇಸಾಯದ ಒಳಗೇ ಸಿದ್ಧವಾಗಬೇಕು ಕೆರೆ. ಹೇಗಿದ್ದರೂ ಸೊಸೈಟಿ ಕೊಡುತ್ತದೆ ಸಾಲವನ್ನು.

"ನೀನು ಚಿಂತಿಸಬೇಡ" ಭುಜತಟ್ಟಿ ಹೇಳಿದ ಕೃಷ್ಣಯ್ಯ, "ಈಗ ತೆಗೆಯುವ ಎರಡರಷ್ಟು ಬೆಳೆಯನ್ನು ಪ್ರತಿ ಎಕರೆಯಲ್ಲಿ ತೆಗೆಯುತ್ತೇನೆ ನೋಡು. ವರ್ಷದೊಳಗೆ ಸಾಲವೆಲ್ಲ ಮುಗಿಸಿಬಿಡಬಹುದು."

ಅವನು ಕೆರೆ ತೋಡಿಸುವ ವಿಷಯ ಯಾರ ಮುಖಾಂತರವೋ ತಿಳಿದುಕೊಂಡ ಗೋಪಣ್ಣನಿಗೆ ಅತೀವ ವಿಸ್ಮಯ. ದಾರಿಯಲ್ಲಿ ಎದುರಾದ ಗಣೇಶನನ್ನು ಅಂದು ತಡೆದು ನಿಲ್ಲಿಸಿ ಮೀಸೆ ಅಣ್ಣನ ಅಂಗಡಿಗೆ ಕರೆದೊಯ್ದು ಹೊಟ್ಟೆ ತುಂಬ ತಿನ್ನಿಸಿ ಅವನೊಂದಿಗೆ ಮಾತನಾಡಿ ತಾನು ಕೇಳಿದ ವಿಷಯ ಸುಳ್ಳಲ್ಲ ಎಂದು ಖಚಿತಪಡಿಸಿಕೊಂಡ. ಗಣೇಶ ಮುಗ್ಧನಾಗಿ ಹೇಳಿದ:

"ನಾವು ಒಳ್ಳೆಯವರಾದರೆ ಊರು ಒಳ್ಳೆಯದಾಗುತ್ತದೆಯೆಂದು ನನ್ನ ಅಮ್ಮ ಹೇಳ್ತಾ ಇದ್ಲು ಯಾವಾಗಲೂ. ಗೋಪಣ್ಣ ತುಂಬ ಒಳ್ಳೆಯವನು. ಅವನಿಗೆ ನಮ್ಮಿಂದ ತೊಂದರೆಯಾಗಬಾರದೆಂದು ಅಪ್ಪನ ಹೇಳಿಕೆ. ನಿನ್ನ ಸಂಗಡ ಜಗಳ ಮಾಡಲು ಸಿದ್ಧವಿಲ್ಲವಂತೆ ಅಪ್ಪ. ಅದಕ್ಕೇ ಕೆರೆ ತೆಗೆವ ಯೋಜನೆ!"

ಪೆಚ್ಚಾದ ಗೋಪಣ್ಣ. ಅನಂತರದ ದಿನಗಳಲ್ಲಿ ನೀರಿನ ಅಗತ್ಯ ಕೆಳಗಿನ ಗದ್ದೆಗಳಿಗೆ ಇಲ್ಲದೇ ಹೋದರೂ ಯಾರೂ ಹರಿಯುವ ನೀರಿಗೆ ಕಟ್ಟಲಿಲ್ಲ

ಒಡ್ಡನ್ನು. ಗಣೇಶನಿಗೂ ಕತ್ತಲೆಯಲ್ಲಿ ಹೋಗಿ ಒಡ್ಡು ಬಿಡಿಸುವ ಕೆಲಸ ತಪ್ಪಿ ಹೋಯಿತು.

ಅವನ್ನೆಲ್ಲ ನೆನಪಿಸಿಕೊಳ್ಳುತ್ತ ಹೇಳಿದ ಗಣೇಶ: "ಶಾಲೆ ಕೆಲಸವನ್ನು ಇನ್ನು ಒಂದೆರಡು ದಿನಗಳಲ್ಲಿ ಪ್ರಾರಂಭವಾಗುತ್ತವಂತೆ ಅಪ್ಪ. ನಾನು ಹೇಗೆ ಹೋಗಲಿ?"

"ಇಲ್ಲಿ ಕೆಲಸ ಇರುವುದು ಹಗಲು. ನೀನು ಅಲ್ಲಿ ಮಲಗುವುದು ರಾತ್ರಿ."

"ರಾತ್ರಿ ತೋಟದಲ್ಲಿ ಹೆದರಿಕೆ ನನಗೆ. ನಾನೊಬ್ಬನೆಯೆ ಅಲ್ಲಿ?"

"ನಿನ್ನನ್ನು ಒಬ್ಬನನ್ನೇ ಯಾಕೆ ಮಲಗಿಸ್ತಾರೆ?" ಅವನ ಭಯದ ಧ್ವನಿಗೆ ಅಭಯದ ಸ್ವರ ಸೇರಿಸಿದಳು: "ಇನ್ಯಾರಾದರೂ ಜೊತೆಗಿದ್ದಾರು. ಹೋಗು."

ಗಣೇಶ ಚಕಿತನಾಗಿ ನೋಡಿದ ಸುಮಿತ್ರಳನ್ನು. ಅವಳೂ ಹಾಗೇ ನೋಡಿದಳು ಹುಡುಗನನ್ನು. ಓ....ಹಿಂದೆಂದೂ ಕಾಣದ ಹೊಳಪು, ಭೀತಿಯ ಝಳಕು ಕಾಣಿಸಿದೆ ಹುಡುಗನ ಕಣ್ಣುಗಳಲ್ಲಿ. ಇನ್ನೂ ಕಿಶೋರ ವಯಸ್ಸು. ಬೆಚ್ಚಗೆ ಮನೆಯಲ್ಲಿ ಮಲಗಬೇಕೆನ್ನುವ ಮನಸ್ಸು. ತಾನು ಒತ್ತಾಯದಿಂದ ಹೊರಡಿಸಿದ್ದೇನೆ ತೋಟದ ಕಾವಲಿಗೆ. ಇದೇನು....ಇವನ ಮುಗ್ಧವಾದ ಮುಖದಲ್ಲಿ ಅರಳಿದ ಕಣ್ಣುಗಳು ತನ್ನನ್ನು ಹೀಗೇಕೆ ಆಕರ್ಷಿಸುತ್ತಿವೆ? ಎಂತಹ ಲಕ್ಷಣವಾದ ಹುಡುಗ! ಶ್ರೀಮಂತರ ಮನೆಯಲ್ಲಿ ಬೆಳೆದಿದ್ದರೆ ಹೇಗಿರುತ್ತಿದ್ದನೋ. ಇಲ್ಲಿಯ ಬಿಸಿಲಿಗೆ, ಕಷ್ಟಗಳಿಗೆ ಕುಗ್ಗಿಲ್ಲ ಮುಖದ ಕಾಂತಿ. ನೂರು ಜನರಲ್ಲಿ ಹುಡುಕಿ ಆರಿಸಿ ತೆಗೆಯಬಹುದು. ಅದಕ್ಕೋಸ್ಕರವೇ ಅಕ್ಕ ಇವನನ್ನು ಪ್ರೀತಿಯಿಂದ ನೋಡಿಕೊಂಡದ್ದು. ಕೃಷ್ಣಯ್ಯನಿಗೂ ಬಿಡಲಾರದ ಮೋಹ. ಈವತ್ತು ಅವನು ತೋಟದ ಕಾವಲಿಗೆ ಹೊರಡುತ್ತಾನೆ ಎಂದರೆ ತನಗೂ ಬೇಸರ. ಅದು ಕೇವಲ ಕ್ಷಣಿಕ. ಆದರೆ ತನ್ನ ಮನಸ್ಸಿನಲ್ಲೇಕೆ ಈ ರೀತಿಯ ಗೊಂದಲ? ಇವನು ತನ್ನ ಮಗನಾಗಿದ್ದರೆ....?

ಅದೇ ಗುಂಗಿನಲ್ಲಿ ಸುಮಿತ್ರ ಅವನ ಸಮೀಪದಲ್ಲಿ ಕುಳಿತು ಇನ್ನಷ್ಟು ಅನ್ನವನ್ನು ಸೌಟಿನಿಂದ ತೋಡಿ ತೆಗೆದು ಸುರಿದಳು ಅವನ ಬಟ್ಟಲಿಗೆ. ಗಣೇಶ ನಿಬ್ಬೆರಗಾಗಿ ನೋಡಿದ ಅವಳನ್ನು.

# 11

ನರಸಿಂಹಭಟ್ಟರ ಅಡಿಕೆ ತೋಟದ ಕಾವಲಿಗೆ ಬಂದ ಮೊದಲ ನಾಲ್ಕಾರು ದಿನಗಳು ಗಣೇಶನಿಗೆ ರಾತ್ರಿಯೆಲ್ಲ ಜಾಗರಣೆ. ತೋಟದ ಮಧ್ಯದಲ್ಲಿ ಮಾಳ. ನಾಲ್ಕು ಕಂಬಗಳನ್ನು ನಿಲ್ಲಿಸಿ ಎತ್ತರದಲ್ಲಿ ಹಲಗೆಗಳನ್ನು ಸೇರಿಸಿ ಸೋಗೆಯ ಹೊದಿಕೆಯಿಂದ ಮಾಡಿದ ಮಾಳದಲ್ಲಿ ಜೊತೆಗೆ ಮುದುಕ ದುಗ್ಗಪ್ಪ. ಭೀತಿ ಪಡುವ ಅಗತ್ಯವಿಲ್ಲ. ಕಂಠಪೂರ್ತಿ ಕುಡಿದು ಬರುವ ದುಗ್ಗಪ್ಪ ಒಂದು ಸಲ ಟಾರ್ಚಿನ ಬೆಳಕಿನಲ್ಲಿ ತೋಟವನ್ನೆಲ್ಲ ಸುತ್ತಿಬಂದು ಮಾಳದಲ್ಲಿ ಮಲಗಿದ ಎಂದರೆ ಮತ್ತೆ ಕುಂಭಕರ್ಣ! ಅರೆನಿದ್ರೆಯಲ್ಲಿ ಏನೇನೋ ಬಡಬಡಿಕೆ, ಗೊರಕೆ. ಎಚ್ಚರಗೊಂಡರೂ ಅಸಂಬದ್ಧ ಮಾತುಗಳು. ಕಳ್ಳರು ಬಂದು ಹತ್ತಿರ ನಿಂತರೂ ತಿಳಿಯಲಿಕ್ಕಿಲ್ಲ ಅವನಿಗೆ.

ತೋಟದಲ್ಲಿ ಮಲಗುವ ಅನುಭವ ಗಣೇಶನಿಗೆ ಹೊಸದು. ಉರಿ, ಸಣ್ಣ ಇರುವೆಯ ಕಾಟದೊಂದಿಗೇ ಮುತ್ತಿಡುವ ತೋಟದ ಸೊಳ್ಳೆಗಳ ಉಪದ್ರವ. ತೆಂಗಿನ ಚಾಪೆಯ ಮೇಲೆ ಕಂಬಳಿಯನ್ನು ಹಾಸಿಕೊಂಡು ಮೈತುಂಬ ಗೋಣಿಯನ್ನು ಹೊದ್ದು ಮಲಗಿದರೂ ಎದೆಯಲ್ಲಿ ನಡುಕ. ದುಗ್ಗಪ್ಪನ ಗೊರಕೆಯ ಸದ್ದು ಕೇಳುವದಕ್ಕೂ ಆಗುವದಿಲ್ಲ. ಅಡಿಕೆಮರದಲ್ಲೇನೋ ಪಟಪಟ, ಚಟಚಟ ಸದ್ದು. ಆಗಾಗ ಅಡಿಕೆಸೋಗೆ, ತೆಂಗಿನ ಮಡಲು ಧಬಾರನೆ ಬಿದ್ದಾಗ ಅವನೂ ಮಲಗಿದಲ್ಲಿಂದ ಅಷ್ಟೆತ್ತರಕ್ಕೆ ಹಾರಿಬೀಳುತ್ತಾನೆ. ಏನದು ಸದ್ದು? ಜೀವ ಅಂಗೈಯಲ್ಲಿ. ಭೂತಗಳು ಸಂಚರಿಸುತ್ತಿದ್ದಾವೆಯೋ? ಹಾವು ಹರಣೆಗಳೇನಾದರೂ ಬಂದು ಮೈಯನ್ನು ಸುತ್ತಿಕೊಳ್ಳಬಹುದೇ? ಹತ್ತಿರದ ಜೋಳುಗುಡ್ಡೆಯಲ್ಲಿ ಆಗಾಗ ಬೆಳಕಿನ ಮಿಂಚು. ಓಹೋ! ಅದು ಕೊಳ್ಳಿದೆವ್ವವಿರಬೇಕು. ಇನ್ನೇನು ಹತ್ತಿರಕ್ಕೇ ಬಂದುಬಿಡುತ್ತದೆ. ಅಬ್ಬಬ್ಬ ಹೇಗೆ ಕಣ್ಣು ತೆರೆದು ನೋಡುವುದು? ಸರಿಯಾಗಿ ನಿದ್ದೆ ಬಂದುಬಿಟ್ಟರೆ ಬೆಳಗ್ಗೆ ಎದ್ದರೆ ಸಾಕು. ಆದರೆ ನಿದ್ರೆ ಎತ್ತಲೋ. ಒಂದು ರಾತ್ರಿ ಬಹಳ ಚಳಿ ಎಂದು ಮಾಳದ ಕೆಳಗೆ ಬೆಂಕಿಹಾಕಿಕೊಂಡ ದುಗ್ಗಪ್ಪ. ಅದರ ಶಾಖ ಹಿತವಾದರೂ ಮೈ ಬೆಚ್ಚಗಾದರೂ ಬೆಂಕಿ ಜ್ವಾಲೆಯಲ್ಲಿ ಕಣ್ತೆರೆದು ಸುತ್ತಲು ನೋಡುವ ದಕ್ಕೂ ಹೆದರಿಕೆ.

ಮನೆಗೆ ಬಂದರೆ ಮನಸ್ಸಿಗೆ ಅದೇ ಯೋಚನೆ. ರಾತ್ರಿ ವೇಗಪ್ಪ ತೋಟದಲ್ಲಿ ಮಲಗುವನು ಎಂದು ಹಿಂದೆ. ಮೈಯಲ್ಲಿ ಸೊಳ್ಳೆಯ ಪ್ರಸಾದದ ಕಜ್ಜಿಗಳು. ಕೆಲಸ ಮಾಡುವುದಕ್ಕೂ ಮನಸ್ಸಿಲ್ಲದೆ ದೊಡ್ಡಮ್ಮನಿಂದ ಹೇಳಿಸಿಕೊಂಡ. ಇಲ್ಲ, ತನ್ನಿಂದ ಇನ್ನು ರಾತ್ರಿ ಕಾವಲಿಗೆ ಹೋಗಲು ಸಾಧ್ಯವೇ ಇಲ್ಲ.

ಆ ರಾತ್ರಿ ಕೃಷ್ಣಯ್ಯ ಎಂದಿಗಿಂತಲೂ ಹೆಚ್ಚಾಗಿ ಕುಡಿದು ಬಂದು ಆಗ ತಾನೇ ಕುಳಿತಿದ್ದ ಹೊರಜಗಲಿಯಲ್ಲಿ. ತಾಳಿಅಡ್ಡಿ, ಮಾವಿನ ಪಕಾಸುಗಳನ್ನು ಹೊತ್ತು ಹೊತ್ತು ಹಣ್ಣಾಗಿತ್ತು ಅವನ ಮೈ. ನಾಳೆಯಿಂದ ಸುಗ್ಗಿ ಬತ್ತವನ್ನು ಕುಯ್ಯಬೇಕು. ಅಂಗಳದ ತುಂಬ ಕಸ ಮುಳ್ಳು ರಾಶಿರಾಶಿ ಬಿದ್ದಿದೆ. ಅವನ್ನೆಲ್ಲ ತೆಗೆದು ಒಂದಷ್ಟು ಸೆಗಣಿಯನ್ನು ಸಾರಿಸದೇ ಹೋದರೆ ಕುಯ್ದ ಬತ್ತವನ್ನು ಅಂಗಳದಲ್ಲಿ ಹಾಕುವಂತಿಲ್ಲ. ಕೆಲಸಗಳ ತಾಪತ್ರಯ ನೂರೆಂಟು. ಅದರೊಂದಿಗೇ ಮಧ್ಯಾಹ್ನ ಗಂಗಯ್ಯನಿಂದ ಬಂದಿತ್ತು ಕಾಗದ:

'ಮನೆಯಲ್ಲಿ ನಾಗಪ್ಪಯ್ಯ ಮತ್ತು ಶೀನಪ್ಪಯ್ಯನಿಗೆ ದಿನೇದಿನೇ ವೈಮನಸ್ಸು ಬೆಳೆಯುತ್ತ ಇದೆ. ನನ್ನ ಸಂಸಾರ ಮೊದಲಿನಂತಿಲ್ಲ. ಮುದುಕನಾದ ನನ್ನ ಮಾತನ್ನು ಕೇಳುವ ತಾಳ್ಮೆ ಅವರಿಗಿಲ್ಲ. ಇರುವ ತುಂಡುಭೂಮಿಯನ್ನೂ ಪಾಲುಮಾಡಬೇಕೆಂದು ಹಟ ಹಿಡಿದಿದ್ದಾನೆ, ಶೀನಪ್ಪಯ್ಯ. ಹೆಜ್ಜೆಯಂತಹ ಭೂಮಿಯಲ್ಲಿ ಪಾಲುಮಾಡುವುದಾದರೂ ಏನನ್ನು? ಈಗಲೇ ನಮ್ಮ ಸ್ಥಿತಿ ತಲೆಗೆಳೆದರೆ ಕಾಲಿಗಿಲ್ಲ, ಕಾಲಿಗೆಳೆದರೆ ತಲೆಗಿಲ್ಲ. ಇನ್ನು ಪಾಲಾಗಿಬಿಟ್ಟರೆ ಮುಗಿದೇಹೋಯಿತು! ಇದರ ಶೀನಪ್ಪಯ್ಯ ತನ್ನ ಹೆಂಡತಿ, ಮಗುವಿನೊಂದಿಗೆ ತೋನ್ನೆ ಬಿಟ್ಟು ದೂರ ಎಲ್ಲಿಗೋ ಹೋಗುವ ಅಂದಾಜಿನಲ್ಲಿದ್ದಾನೆ. ಅವರವರ ಸಂಸಾರದ ಹೊಣೆ ಅವರವರಿಗೆ. ಇನ್ನೊಬ್ಬರಿಗೆ ಅದರ ಹೊಣೆ ಹೊರಿಸಬಾರದು ಎನ್ನುತ್ತಿದ್ದಾನೆ ಅವನು. ಇನ್ನೊಬ್ಬರ ಹೊರೆಯನ್ನು ಹೊರುವದಕ್ಕೆ ಯಾರೂ ಸಿದ್ಧರಾಗಿಲ್ಲ. ಈಗಿನ ಕಾಲವೇ ಹಾಗೇ. ಸಣ್ಣಮ್ಮನಿಗೂ ಬಹಳ ನಿಶ್ಶಕ್ತಿ. ತನ್ನ ಕೆಲಸವನ್ನು ಮಾಡಿಕೊಳ್ಳುವದೂ ಅನೇಕ ವೇಳೆ ಅವಳಿಂದ ಸಾಧ್ಯವಾಗುವದಿಲ್ಲ. ನನಗೋ ಉಬ್ಬಸರೋಗ. ಯಾರ ಕಡೆಗೂ ಹೆಚ್ಚಿಗೆ ಗಮನ ಕೊಡಲು ಸಾಧ್ಯವಿಲ್ಲ.'

ಇನ್ನೂ ಏನೇನೋ ಬರೆದಿದ್ದ ಗಂಗಯ್ಯನ ಕಾಗದವನ್ನು ಓದಿಯೇ

ಕಳವಳ ಉಂಟಾಗಿತ್ತು ಕೃಷ್ಣಯ್ಯನಿಗೆ. ಶಂಕರ-ಸುನಂದೆಯರನ್ನು ಯೋಚಿಸಿ ಮಿಡುಕಿತ್ತು ಅವನ ಮನ. ಕಾಗದವನ್ನು ತೋರಿಸಿದ್ದ ಹೆಂಡತಿಗೆ. ಅವಳು ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸದೆ ಸುಮ್ಮನೆ ನಕ್ಕಾಗ ಅವನೋ ಕಾದ ಬಿಸಿನೀರನ್ನು ಹುಯ್ದುಕೊಂಡಂತೆ ವ್ಯಗ್ರನಾಗಿದ್ದ. ಛೀ! ತಂದೆಯಾದ ತಾನು ಮಕ್ಕಳ ಪಾಲಿಗೆ ಇಲ್ಲವಾಗಿ ಹೋದೆನಲ್ಲ ಎಂದು ಉರಿದೆದ್ದ. ಸುಮನ, ಯಮುನೆಯರನ್ನು ಇವಳು ಒಂದು ದಿನವಾದರೂ ಅಗಲಿ ಇರಬಲ್ಲಳೇ? ಅವಳಿಗೆ ಅವಳ ಮಕ್ಕಳೇ ಹೆಚ್ಚು ಪ್ರಿಯರು ನಿಜ. ಆದರೆ ಮಲತಾಯಿಯ ಸ್ಥಾನದಲ್ಲಿದ್ದು ತನ್ನ ಎರಡು ಮಕ್ಕಳನ್ನೂ ಪ್ರೀತಿಯಿಂದ ನೋಡಿಕೊಳ್ಳುವದು ಸಾಧ್ಯವಾಗದೇ ಅವಳಿಂದ? ಅಕ್ಕ ಇರಲಿಲ್ಲವೇ? ಅಕ್ಕನಿನಂತಹ ವಿಶಾಲಮನಸ್ಸು ಇವಳಿಗೆಲ್ಲಿಂದ ಬರಬೇಕು?

ಒಳಗೆ ಸುಮಿತ್ರ ಹೇಳುತ್ತಿದ್ದಳು ಮಗಳಿಗೆ, "ಮುದುಕನ ಕಾಗದ ಬಂದ ಮೇಲಿಂದ ಶುರುವಾಗಿದೆ ಪಿಟಿಲು ಕುಯ್ಯಲು. ಅವರಿಬ್ಬರೂ ಇನ್ನೂ ಎಳೆಯ ಮಕ್ಕಳೇ? ಅಜ್ಜನ ಮನೇಲಿ ಹೇಗೂ ಹೊಂದಿಕೊಂಡಿದ್ದಾರೆ. ಅಲ್ಲೇ ಇರಲಿ. ಸುಮ್ಮನೆ ಇಲ್ಲದ ವ್ಯಾಮೋಹ ಇವರಿಗೆ."

ಕೃಷ್ಣಯ್ಯನ ಮೈಯೆಲ್ಲ ಬಿಸಿಯೇರಿತು. ಒಳಗೆ ಹೋಗಿ ಅವಳನ್ನು ಚೆನ್ನಾಗಿ ಥಳಿಸಬೇಕೆನ್ನುವ ಕ್ರೋಧವೂ ಉಕ್ಕಿತು. ಅದೇ ಸಮಯದಲ್ಲಿ ಗಣೇಶ ಅವನ ಹತ್ತಿರ ಬಂದು ತನಗೆ ಇನ್ನುಮುಂದೆ ತೋಟದ ಕಾವಲಿಗೆ ಹೋಗಲು ಸಾಧ್ಯವಿಲ್ಲವೆಂದು, ತನ್ನ ಹೆದರಿಕೆಯನ್ನೂ ಹೇಳಿಕೊಂಡ ಅವನಲ್ಲಿ. ಇನ್ನೇನು ಅಪ್ಪ ತನ್ನಮೇಲೆ ಕನಿಕರಪಡುತ್ತಾನೆ ಎಂದು ನಿರೀಕ್ಷಿಸಿದ. ಆದರೆ ಆದದ್ದೇ ಬೇರೆ. ಒಳಹೊರಗೆಲ್ಲ ತುಂಬಿಕೊಂಡಿದ್ದ ಹುಣ್ಣಿಮೆಯ ಬೆಳದಿಂಗಳಿನ ಬೆಳಕಿನಲ್ಲಿ, ಮಸಿಹಿಡಿದ ಸಣ್ಣದೀಪದ ಪ್ರಕಾಶದಲ್ಲಿ ಕೃಷ್ಣಯ್ಯನ ಕೆಂಪಾದ ಕಣ್ಣುಗಳು ಮತ್ತಷ್ಟು ಕೆಂಪಾಗಿ ಗಣೇಶನನ್ನು ಇಡಿಯಾಗಿ ನುಂಗುವಂತೆ ನೋಡಿದವು. ದೇಹದ ಭಾರವನ್ನು ಕೈಗಳ ಮೇಲೆ ಊರಿ ಎದ್ದುನಿಂತ ಅವನು.

"ಏನ್ಹೇಳಿದೆ ನೀನು?" ಒಂದು ಹೆಜ್ಜೆ ಹಿಂದೆ ಸರಿದು ಗಣೇಶನನ್ನು ಬಿಗಿಯಾಗಿ ಹಿಡಿದುಕೊಂಡ, "ಹೊಸು ಬಿಟ್ಟು ಮಲಗುವ ಕುಂಭಕರ್ಣನಿಗೆ ತೋಟದಲ್ಲಿ ಪಾಪ ಹೆದರಿಕೆಯಂತೆ. ದರಿದ್ರದವನೇ! ದಿನೇದಿನೇ ಸೋಮಾರಿ

ಆಗ್ತ ಇದ್ದಿ?" ಎನ್ನುತ್ತ ಮುಖಕ್ಕೆ, ಬೆನ್ನಿಗೆ ದಬದಬನೆ ಗುದ್ದಿದ. ಕೈನಿಗೆ
ಒಂದು ಕುಂಟುನೆಪ. ಇನ್ಮೇಲೆ ಅದಾಗದು, ಇದಾಗದು ಎಂದು ಹೇಳ್ತಾ
ಹೋದರೆ ನಿನ್ನನ್ನು ಏನು ಮಾಡ್ತೀನೆ ಅಂತ ಗೊತ್ತೋ ನಿನಗೆ....ಸಿಗಿದು
ತೋರಣ ಮಾಡ್ತೀನೆ....ತೋರಣ!"

ಅಪ್ಪನ ಅನಿರೀಕ್ಷಿತ ಹಿಡಿತದಲ್ಲಿ ಜೀವ ಹಿಂಡಿದಂತಾಗಿ ತಪ್ಪಿಸಿಕೊಳ್ಳಲೂ ಸಾಧ್ಯವಾಗದೆ ಅತ್ತಿತ್ತ ಮುಖ ತಿರುಗಿಸುತ್ತಿದ್ದಂತೆ ಕೃಷ್ಣಯ್ಯ ನೂಕಿದ ಅವನನ್ನು. ನೂಕಿದ ರಭಸಕ್ಕೆ ಬಡಿದು ಗೋಡೆಗೆ ಹೋಗಿ ಅಪ್ಪಳಿಸಿದ, ತಲೆ ಬಡಿಯಿತು ಹಿಂದಕ್ಕೆ. ಕಾಲು ತಿರುಚಿಕೊಂಡು ಬಿದ್ದ ಅಲ್ಲಿಯೇ.

"ನಿದ್ದೆ ಬರ್ತಾ ಇದೆಯಲ್ಲೋ, ಮಗನೇ. ಅದೇ ಸೊಕ್ಕು ನಿನಗೆ. ಸೋಮಾರಿ, ನಿನಗೆ ರಾತ್ರಿ ಹೆದರಿಕೆಯಂತೆ. ಇರು ಇರು." ಮುಂದೆ ಬಂದ ಕೃಷ್ಣಯ್ಯ ಕಾಲನ್ನೆತ್ತಿ ಬಲವಾಗಿ ಒದ್ದ ಅವನನ್ನು. "ನಾಯೀ, ನಿನ್ನನ್ನು ಹತ್ತು ದಿನ ಭೂತಸ್ಥಾನದಲ್ಲಿ ಮಲಗಿಸಿದರೆ ಮೈಯಲ್ಲಿದ್ದ ಚಳಿಯೆಲ್ಲ ಬಿಟ್ಟೀತು...."

ಗಣೇಶ 'ಹೋ ಹೋ' ಎಂದು ಚಡಪಡಿಸಿ ಹೊರಳಾಡುತ್ತಿದ್ದಂತೆ ಇನ್ನೂ ಒಂದು ಒದೆ ಸಿಕ್ಕಿತು ಬೆನ್ನ ಮೇಲೆ. ಅಯ್ಯೋ, ಅಪ್ಪ ಯಾಕೆ ಹೀಗಾದ? ತೋಟದಲ್ಲಿ ಮಲಗಲು ಹೆದರಿಕೆ ಎಂದಾಕ್ಷಣ ಇಷ್ಟು ಸಿಟ್ಟುಬರಬೇಕೆ? ತಾನು ಮತ್ತೇನೂ ಹೇಳಲಿಲ್ಲ. ಆಗಷ್ಟೇ ಬಾಗಿಲಲ್ಲಿ ಬಂದು ನಿಂತ ದೊಡ್ಡಮ್ಮ ತನ್ನನ್ನು ನೋಡಿದರೂ ಸುಮ್ಮನಿದ್ದಾಳೆ. ಅವಳಿಗೆ ತನ್ನ ಮೇಲೆ ಒಂದಿನಿತಾದರೂ ಕರುಣೆ ಇಲ್ಲವಲ್ಲ! ಬೆಳ್ಳಿಪಾಡಿಗೆ ಬಂದು ನೆಲೆಸುವ ಮೊದಲು ಒಂದು ದಿನವಾದರೂ ಅಪ್ಪ ತನ್ನ ಮೈಮುಟ್ಟಿದವನಲ್ಲ. ಈಗ ಸ್ವಲ್ಪ ಹೆಚ್ಚುಕಡಿಮೆಯಾದರೆ ಸಾಕು, ಬಾಣ ತನ್ನ ಮೇಲೆ.

"ಬೇಡ, ಅಪ್ಪಾ!...." ಗಣೇಶನ ಬಾಯಿ ಕಟ್ಟಿ ಹೋಗಿದ್ದರೂ ಮತ್ತೊಂದು ಒದೆ ಪಕ್ಕೆಲುಬಿನ ಮೇಲೆ ಬಿದ್ದಾಗ ತಡೆಯಲಾರದೆ ಬೊಬ್ಬಿರಿದ, "ಅಮ್ಮಾ!...."

ಕೃಷ್ಣಯ್ಯನ ಕಾಲು ಮಿಂಚಿನ ವೇಗದಲ್ಲಿ ಹಿಂದಕ್ಕೆ ಬಂದುಬಿಟ್ಟಿತು. ತಲೆಗೇರಿದ ಕೋಪದಲ್ಲಿಯೂ ಹುಡುಗ, "ಅಮ್ಮಾ!...." ಎಂದಾಗ ನಡುಗಿ ಹೋದ ಅವನು. ರೋಮರೋಮವೂ ಸೆಟೆದುನಿಂತವು. 'ಅಮ್ಮಾ' ಎಂಬ ಆರ್ತಸ್ವರ ಹೊಡೆದೆಬ್ಬಿಸಿತು ಅವನನ್ನು. ಹೆಂಡದ ಅಮಲು, ನೆತ್ತಿಗೇರಿದ

ಕ್ರೋಧ ಝುರ್ರನೆ ಇಳಿದು ಕೆಂಪಾದ ಕಣ್ಣುಗಳನ್ನು ಅಗಲಿಸಿ ನೋಡಿದ. ಅಕ್ಕನ ಗೆಳತಿಯಾದ ಗಣಿಸಿಂದು ಮುಖ ತೇಲಿಬಂದಿತು. ಓ....ಅಂದು ಅವಳಿಗಿತ್ತ ವಾಗ್ದಾನವೆಲ್ಲ ಗಾಳಿಪಾಲಾಗಿ ಹೋಯಿತೇ? ಯಾರದೋ ಅಸ್ಪಷ್ಟ ಧ್ವನಿ. ಹಳೆಯದನ್ನು ನೆನಪು ಮಾಡುವುದು ಬೇಡವಾಗಿತ್ತು ಈ ಗಳಿಗೆಯಲ್ಲಿ. ಮುಷ್ಟಿ ಬಿಗಿದುಕೊಂಡೇ ಹಿಂದಕ್ಕೆ ತಿರುಗಿದ. ಅವನಲ್ಲಿ ಕನಿಕರ, ಬೇಸರ ಯಾವುದೇ ವಿಧದ ವ್ಯಥೆಯೂ ಉಂಟಾಗಲಿಲ್ಲ.

"ಬಾಯ್ಮುಚ್ಚಿಕೊಂಡು ಹೋಗು ತೋಟಕ್ಕೆ. ನೀನೇನು ಹುಡುಗಿಯಲ್ಲ. ನಾಲ್ಕು ದಿನ ಕಳೆದರೆ ತಾನೇ ಅಭ್ಯಾಸವಾಗಿಬಿಡುತ್ತದೆ ಎಲ್ಲ...."

ಗಣೇಶ ಎಡಗೈಯಿಂದ ಪಕ್ಕೆಲುಬನ್ನು ತಿಕ್ಕಿಕೊಂಡ. ಉಸಿರು ಕಟ್ಟುವಂತಹ ನೋವು. ತಿರುಚಿಹೋದ ಕಾಲನ್ನು ನೇರವಾಗಿ ಇಡುವುದಕ್ಕೂ ಆಗಲಿಲ್ಲ. ಬಡಿದ ತಲೆಯ ಹಿಂಭಾಗದಲ್ಲಿ ಎದ್ದಿದೆ ದೊಡ್ಡ ಬೊಕ್ಕೆ. ಅವನು ಹೇಗೋ ಕಷ್ಟಪಟ್ಟು ಸರಿಯಾಗಿ ಕುಳಿತುಕೊಂಡ. ಸುಮಿತ್ರ ನಿಧಾನವಾಗಿ ಬಂದಳು ಅವನ ಹತ್ತಿರ.

"ತುಂಬಾ ನೋವಾಯ್ತಾ?"—ಕಳಕಳಿಯಲ್ಲಿ ಕೇಳಿದವಳಂತೆ ನಟಿಸಿ ಕುಡಿಹುಬ್ಬನ್ನು ಮೇಲಕ್ಕೇರಿಸಿದಳು, "ನಾವು ಹೇಳಿದ್ಹಾಗೆ ಕೇಳಿಕೊಂಡಿದ್ದರೆ ನಿನಗೇ ಒಳಿತು. ತೋಟದಲ್ಲಿ ಮಲಗಿದರೂ ಒಂದೇ, ಇಲ್ಲಿ ದನದ ಕೊಟ್ಟಿಗೆ ಮೂಲೆಯಲ್ಲಿ ಬಿದ್ದುಕೊಂಡರೂ ಒಂದೇ ನಿನ್ನ ಪಾಲಿಗೆ. ಯಾಕೆ ಇಲ್ಲದ ಹಟ?"

ಅವಳ ಜೇನಿನ ಸವಿಯಂತಹ ಮಾತು ಬೇಕಿರಲಿಲ್ಲ ಅವನಿಗೆ. ತಿರುಗಿಸಿಕೊಂಡ ಮುಖವನ್ನು. ಸ್ವಲ್ಪ ಹೊತ್ತಿಗೆಲ್ಲ ಅವನ ಹತ್ತಿರಕ್ಕೆ ಬಂದಿತು ಪ್ರೀತಿಯ ನಾಯಿ. ಗಣೇಶ ತನ್ನ ಎರಡೂ ಕೈಗಳಿಂದ ಅದನ್ನು ತಬ್ಬಿಹಿಡಿದು ಅದರ ಕುತ್ತಿಗೆ ಮೇಲೆ ಮುಖವನ್ನು ಇರಿಸಿದ. 'ಒದೆಯಿಸಿಕೊಳ್ಳುವ ನಾಯಿ, ನಮ್ಮನ್ನು ಕೇಳುವವರು ಯಾರೂ ಇಲ್ಲ. ಹೇಳಿದ ಹಾಗೆ ಕೇಳಿಕೊಂಡಿರು!' ಬಾಯಿಯಿಂದ ಹೊರಟ ಬಿಸಿಯುಸಿರನ್ನು ಅರ್ಥಮಾಡಿಕೊಂಡಂತೆ ನಾಯಿ ತನ್ನ ನಾಲಗೆಯಿಂದ ನೆಕ್ಕಿತು ಅವನ ಅಂಗಾಲನ್ನು.

"ದನಗಳಿಗೆ ಹುಲ್ಲು ಹಾಕಿ ಬರಬೇಕಂತೆ." ಸುಮನ ಬಂದು ಹೇಳಿದಾಗ ಯಾಂತ್ರಿಕವಾಗಿ ಮೇಲೆದ್ದ. ಮೂಕಪ್ರಾಣಿಗಳಿಗೆ ಕಟ್ಟಿಹಾಕಿದ ಗೂಟದ ಎದುರು ಹಾಕಿದಷ್ಟು ತಿನ್ನುವುದೊಂದು ಗೊತ್ತು. ತಾನೂ ಇಲ್ಲಿಷ್ಟೇನೆ ಕಟ್ಟಿ

ಹಾಕಿದ ದನದಂತೆ! ಹೇಗೋ ಕಷ್ಟದಿಂದ ನಡೆದು ಬಂದ ಕೊಟ್ಟಿಗೆಗೆ. ಮನಸ್ಸಿನಲ್ಲಿರುವುದನ್ನೂ ಹೇಳಲಾಗದ ಸುಮ್ಮನೆ ಮೆಲಕಾಡಿಸುತ್ತ ನಿಂತ ದನಕರುಗಳ ಮೈಸವರಿದ, ಕೊಂಬು ಸವರಿದ, ಗಂಗೆದೊಗಲಿನಲ್ಲಿ ಕೈಯಾಡಿಸಿದ. ತಿನ್ನಲು ಹಾಕಿದ ಹುಲ್ಲನ್ನು.

ಸುಮಿತ್ರ ಬಡಿಸಿದ ಅನ್ನವನ್ನು ಸದ್ದಿಲ್ಲದೆ ಉಂಡು ಯಾರೊಂದಿಗೂ ಮಾತನಾಡದೆ ಹೊರಗೆ ನಡೆದ. "ಇವನ ಸಿಟ್ಟಿಗಿಷ್ಟು ಬೆಂಕಿಬೀಳ! ಒಂದು ಬತ್ತ ಹಾಕಿದರೆ ನಾಲ್ಕು ಅರಕು ಆಗುವಷ್ಟು ಊದಿಕೊಂಡಿದೆ ಇವನ ಮುಖ!" ಸುಮಿತ್ರ ಅವನಿಗೆ ಕೇಳಿಸುವಂತೆ ಹೇಳಿದಾಗ ಜೋರಾಗಿ ಬೊಬ್ಬಿರಿದು ಜಗಳ ಆಡಿ ಮನೆ ಬಿಟ್ಟು ಎಲ್ಲಿಯಾದರೂ ದೂರ ಹೋಗಬೇಕು ಎಂದೆನಿಸಿಬಿಟ್ಟಿತು.

## 12

ಅಡಿಕೆತೋಟದ ಸೊಳ್ಳೆಗಳು ಗಣೇಶನಿಗೆ ಬಹಳ ಪ್ರಿಯಮಿತ್ರರಾಗುತ್ತ ಬಂದಂತೆ ಅವನ ದೇಹವೂ ಒರಟಾಗಲಾರಂಭಿಸಿತು. ಈ ವಿಧದ ಹೊಸ ಜೀವನದಿಂದ ರಾತ್ರಿ ನಿದ್ರೆಬಾರದೆ ಹೊರಳಾಡಿದರೂ ನಸುಕು ಮೂಡುವ ಮೊದಲೇ ಎದ್ದು ಬಂದು ಸೇರಬೇಕು ಮನೆಯನ್ನು. 'ರಾತ್ರಿ ಹೆದರಿದೆಯಾ? ಚಳಿಯಾಯಿತೇ? ಸೊಳ್ಳೆಗಳಿಂದ ಕಷ್ಟಪಟ್ಟೆಯಾ?' ಎಂದು ವಿಚಾರಿಸುವವರು ಇಲ್ಲ ಯಾರೂ. "ಸೊಳ್ಳೆ ಕಚ್ಚಿಕಚ್ಚಿ ಮೈಯೆಲ್ಲ ದಡಿಕೆ" ಎಂದು ಸುಮನ-ಯಮುನೆಯರಿಗೆ ಕೇಳುವಂತೆ ಹೇಳಿಕೊಂಡರೂ ಅವರಿಗೆ ಅದೊಂದು ಕಷ್ಟದ ವಿಷಯವೇ ಅಲ್ಲ! ಕೇಳಿದರೂ ಕೇಳದವರಂತೆ ಮುಖ ತಿರುಗಿಸುವಾಗ ಅವನಿಗೆ ಮೈಯನ್ನೆಲ್ಲ ಪರಪರನೆ ಕೆರೆದುಕೊಂಡು ರಕ್ತ ಚಿಮ್ಮಿಸಿಕೊಳ್ಳಬೇಕೆನಿಸುತ್ತದೆ.

ತೋಟದ ತುಂಬ ಹಣ್ಣುಅಡಿಕೆಗಳಿರುವಾಗ ನರಸಿಂಹಭಟ್ಟರಿಗೂ ರಾತ್ರಿ ಸರಿಯಾಗಿ ನಿದ್ರೆ ಬರುವದಿಲ್ಲ. ಕೆಲವೊಮ್ಮೆ ಕೈಯಲ್ಲೊಂದು ಬೆತ್ತ, ಟಾರ್ಚನ್ನು ಹಿಡಿದುಕೊಂಡು ಮಧ್ಯರಾತ್ರಿಯಲ್ಲಿ ತೋಟವನ್ನು ಸುತ್ತು ಹಾಕಿ ಮಾಳದ ಹತ್ತಿರ ಬಂದಾಗ ದುಗ್ಗಪ್ಪನಿಗೆ ಎಂದಿನಂತೆ ಘೋರನಿದ್ರೆ. ಗಣೇಶ ಮಲಗಿದಲ್ಲೇ ಕೆರೆದುಕೊಳ್ಳುತ್ತಿರುತ್ತಾನೆ ಮೈಯನ್ನು. ಟಾರ್ಚಿನ ಬೆಳಕಿನಿಂದ ಮೊದಲು ಎಚ್ಚರವಾಗುವದು ಗಣೇಶನಿಗೇ.

"ರಾತ್ರಿ ಒಂದೆರಡು ಬಾರಿ ತೋಟವನ್ನೆಲ್ಲ ಸುತ್ತು ಹಾಕಿ ಬನ್ನಿ. ಈಗೀಗ ಎಲ್ಲ ಕಡೆಗೂ ಕಳ್ಳರ ಕಾಟ ಜಾಸ್ತಿ. ಅವರು ಹೇಳುತ್ತಿದ್ದಂತೆ ದುಗ್ಗಪ್ಪ ನಿದ್ರೆಯಲ್ಲೇ ಆಕಳಿಸಿ ಆಂ....ಎಂದು ಮೈಮುರಿದು "ನಾನೀಗ ತೋಟ ಎಲ್ಲ ತಿರಗ್ಗಿ ಬಂದೋ...." ಎಂದು ಹೊರಳಿ ಮಲಗುವನು. ಆಗ ಗಣೇಶನಿಗೂ ಭಟ್ಟರಿಗೂ ಉಕ್ಕುತ್ತದೆ ನಗು.

ನರಸಿಂಹಭಟ್ಟರು ಹೆಸರಿಗೆ ತಕ್ಕಂತೆ ಉಗ್ರ ನರಸಿಂಹಮೂರ್ತಿಯೇ ಆಗಿರಲಿಲ್ಲ. ಮುದ್ದು ಮುಖದ ಹುಡುಗನ ಮೇಲೆ ಅವರಿಗೆ ಉಂಟಾದ ವಾತ್ಸಲ್ಯ ಈ ಹಿಂದೆ ಯಾವ ಹುಡುಗನನ್ನು ನೋಡಿದಾಗಲೂ ಆಗಿಲ್ಲ. ಪ್ರತಿ ದಿನ ಬೆಳಗ್ಗೆ ಅವನು ತಮ್ಮ ಮನೆ ಮುಂದಿನ ಅಂಗಳದಿಂದ ನಡೆದುಹೋಗುವಾಗ ಅವರಿಗೆ ಕನಿಕರ. ಒಳಗಿನಿಂದ ಬಿಸಿ ತಿಂಡಿ, ಚಹವನ್ನು ಕೊಡುವ ಆಸೆ. ಇನ್ನೂ ಹುಡುಗ. ತಿನ್ನುವ ಆಸೆ ಇರುವುದು ಸಹಜ. ಒಂದೆರಡು ದಿನ ಬೆಳಗಿನ ಉಪಾಹಾರವನ್ನು ಕೊಟ್ಟರು ಅವನಿಗೆ. ಆದರೆ ಅನಂತರ ಕೇಳಲಾರಂಭಿಸಿತು ಒಳಗಿನಿಂದ ಗರ್ಜನೆ, ಗದ್ದಲ.

"ಏನೋ, ತಾಯಿಯಿಲ್ಲದ ಮಗು. ನಮ್ಮ ಮೊಮ್ಮಗ ಶ್ಯಾಮನ ಪ್ರಾಯದವನಿರಬೇಕು. ತೋಟದ ಕಾವಲಿಗೆ ಬರ್ತಾ ಇದ್ದಾನಲ್ಲ ಪಾಪ—" ಎಂದು ನರಸಿಂಹಭಟ್ಟರ ಅನುಕಂಪ.

"ತಾಯಿಯಿಲ್ಲದ ಮಕ್ಕಳು ಊರ ತುಂಬಾ ಇದ್ದಾವೆ. ಎಲ್ಲರನ್ನು ಕರ್ಕೊಂಡು ಬಂದು ಊಟ ತಿಂಡಿ ಹಾಕ್ತಾ ಇರಿ—" ಅವರ ಹೆಂಡತಿಯ ಮೂದಲಿಕೆಯ ಧ್ವನಿ.

"ಕೊಟ್ಟದ್ದು ಯಾವಾಗಲೂ ವ್ಯರ್ಥವಾಯ್ತು ಅನ್ಬೇಡ."

ಜಗಲಿಯ ಮೂಲೆಯಲ್ಲಿ ಕುಳಿತು ಅವರು ನೀಡಿದ್ದನ್ನು ತಿನ್ನುವ ಗಣೇಶನಿಗೆ ಒಳಗಿನ ಘರ್ಷಣೆ, ತಾರಕಕ್ಕೇರಿದ ಸ್ವರ ಕೇಳಿಸದೆ ಇರಲಾರದು. ನರಸಿಂಹಭಟ್ಟರಿಗೆ ಅವನ ಮೇಲೆ ಅನುಕಂಪವಿದ್ದರೂ ಅವರ ಹೆಂಡತಿ, ಮಗ, ಸೊಸೆ ಎಲ್ಲರೂ ಬೇರೆಯೇ! ರಾತ್ರಿಕಾವಲಿಗಾಗಿ ಕೂಲಿ ಕೊಟ್ಟಮೇಲೆ ಆಗಾಗ ಬೆಳಗಿನ ಉಪಾಹಾರ ಕೊಡುವುದೂ ತಪ್ಪು ಎಂದು ಅವರ ವಾದ. ಯಜಮಾನ ನೀಡುವ ಕನಿಕರದ ತುತ್ತಿಗೆ ಹಲವಾರು ತಿರಸ್ಕಾರದ ನೋಟ. ಅವನಿಗೆಷ್ಟೋ ಬಾರಿ ಈ ತಿರಸ್ಕಾರದ ಉಪಾಹಾರ ಬೇಕಿರದೇ ಇದ್ದರೂ ಒಳಗಿನಿಂದ ಕರೆ

ಬಂದಾಗ ಬಾಯಿಂದ ಸುರಿಯುತ್ತಿತ್ತು ಜೊಲ್ಲು.

ಕ್ರಮೇಣ ಒಳಗಿನವರ ಘರ್ಷಣೆ ಹೆಚ್ಚಿತು. ರಾತ್ರಿ ಕೋಟನಲ್ಲಿ ಮಲಗಿ ಬೆಳಗ್ಗೆ ಗಣೇಶ ಅವರ ಮನೆಯಂಗಳದಿಂದ ದಾಟಿಹೋದರೂ ಅನಂತರದ ದಿನಗಳಲ್ಲಿ ಕಾಣಿಸಿಕೊಳ್ಳಲಿಲ್ಲ ನರಸಿಂಹಭಟ್ಟರು. ಆದರೂ ಆಗಾಗ ಕದ್ದು ಮುಚ್ಚಿ ಬಾಳೆಹಣ್ಣನ್ನೋ ತಿಂಡಿಯನ್ನೋ ತಂದು ಅವನ ಕೈಯಲ್ಲಿರಿಸುವಾಗ ಒಳಗಿನಿಂದ ಎಲ್ಲಿ ಗಲಾಟೆ ಕೇಳಿಬರುತ್ತದೋ ಎಂಬ ಆತಂಕ ಮುಖದಲ್ಲಿ. ಅವನೊಡನೆ ಮನೆಮಕ್ಕಳಂತೆ ಹರಟುವರು. "ಸುಮಿತ್ರ ಮತ್ತು ಕೃಷ್ಣಯ್ಯರ ಮಧ್ಯೆ ಜಗಳವಿದೆಯೇ?" ಎಂದು ಕೇಳುವರು ಕುತೂಹಲದಲ್ಲಿ. ಹುಡುಗ ಹೇಳುತ್ತಾನೆ ಎಂಬ ವಿಶ್ವಾಸ. ಅವನೂ ಹೇಳಿಕೊಳ್ಳುತ್ತಿದ್ದ ಅವರೊಂದಿಗೆ,

"ಅಪ್ಪ ಬಹಳ ಸಾಧು, ಅಯ್ಯನೋರೆ. ದೊಡ್ಡಮ್ಮ ಹೇಳಿದ್ಹಾಗೆ ಕೇಳ್ತ ಇರ್ತಾನೆ. ನಾನೂ ಅಪ್ಪನೂ ಅವಳ ಮಾತನ್ನ ಕೇಳದೇಹೋದರೆ ನಮ್ಮನ್ನ ಇಡಿಯಾಗಿ ನುಂಗಿದರೂ ನುಂಗಿದಳೇ!"

"ಚಹದಂಗಡಿ ಇಟ್ಟ ನಿನ್ನ ಅಪ್ಪ ಕೃಷಿ ಹೇಗೆ ಮಾಡಿಸ್ತಾನಂತೆ. ಬೆತ್ತ ಹಿಡಿದುಕೊಂಡು ನಿನ್ನ ಚಿಕ್ಕಮ್ಮ ಅವನ ಕೈಲಿ ಕೆಲ್ಸ ಮಾಡಿಸ್ತಾಳೇನು? ಅಲ್ಲ, ಮಾತಿಗೆ ಕೇಳಿದೆ."

"ಹಾಗೇನಿಲ್ಲ. ಪ್ರತಿ ವಿಷಯವನ್ನೂ ದೊಡ್ಡಮ್ಮನ ಹತ್ರ ಕೇಳ್ತಾನೆ ಅಪ್ಪ."

ಗಣೇಶ ಮನೆಯ ವಿಷಯಗಳನ್ನೆಲ್ಲ ನರಸಿಂಹಭಟ್ಟರೆದುರು ಹೇಳುವವನ್ನು ಕೇಳಿಸಿಕೊಳ್ಳುತ್ತಿದ್ದ ದುಗ್ಗಪ್ಪನಿಗೆ ಮೀಸೆ ಅಣ್ಣನ ಅಂಗಡಿಯಲ್ಲಿ ಹಗಲುಹೊತ್ತು ಬೇರೆ ಕೆಲಸವಿಲ್ಲದೆ ಅವನ್ನೆಲ್ಲ ಉಪ್ಪು ಖಾರ ಹಚ್ಚಿ ಬಣ್ಣಿಸಿ, ರಂಜಿಸುತ್ತಿದ್ದ ಎಲ್ಲರೆದುರು. ಇನ್ನೊಬ್ಬರ ಮನೆ ವಿಷಯ ಕೇಳುವಾಗ ಎಲ್ಲರ ಕಿವಿಗಳೂ ಚುರುಕು. ಹೇಳುವಾಗ ನಾಲಿಗೆ ಇನ್ನಷ್ಟು ಹರಿತ.

ಆ ದಿನ ನಡೆದದ್ದು ಸಣ್ಣ ಗಲಾಟೆ. ಗಣೇಶ ತೆಂಗಿನ ಮರವನ್ನು ಹತ್ತುವ ಹಟದಲ್ಲಿ ಕಾಲಿಗೆ ಹಗ್ಗದ ಉರುಳನ್ನು ಮಾಡಿಕೊಂಡು ಕೈಗಳಿಂದ ಮರವನ್ನು ಅಪ್ಪಿ ಹಿಡಿದು ಹೇಗೋ ಪ್ರಯಾಸದಿಂದ ಜಾರುತ್ತ ಜಾರುತ್ತ ಅರ್ಧದಷ್ಟು ಭಾಗವನ್ನು ಏರಿದ. ಹತ್ತುವ ಮೊದಲ ಪ್ರಯತ್ನ. ಅನುಭವವಿಲ್ಲದ ಕೈ ಕಾಲುಗಳು. ಅರ್ಧ ಏರಿದಮೇಲೆ ಕೈಕಾಲು ಸೋತು ಬಂದಿತ್ತು, ನಡುಗಲು

ಆರಂಭಿಸಿದ ತನ್ನಲ್ಲೇ. ತುದಿ ಮುಟ್ಟಲು ಇನ್ನೂ ಅರ್ಧ ಬಾಕಿ ಇದೆ. ಇಳಿಯೋಣವೆಂದು ಕೆಳಗೆ ನೋಡಿದ. ಹತ್ತಿದಷ್ಟು ಇಳಿಯುವದು ಸುಲಭವಲ್ಲ. ಬುದ್ಧಿವಂತಿಕೆಯಲ್ಲಿ ಕಾಲುಗಳನ್ನು ಸಡಿಲಿಸಿ ಇಳಿಯಬೇಕು. ಸ್ವಲ್ಪ ಹೆಚ್ಚು ಕಡಿಮೆಯಾದರೂ ಹೊಟ್ಟೆಯೆಲ್ಲ ತರಿದು ತಲೆಮುಂಡೆ ನೆಲಕ್ಕೆ ಅಪ್ಪಳಿಸುವದು ಖಂಡಿತ. ತ್ರಿಶಂಕುಸ್ವರ್ಗ. ಏನು ಮಾಡಬೇಕೆನ್ನುವದು ತಿಳಿಯದೆ ಭೀತಿಯಲ್ಲಿ "ನನ್ನನ್ನು ಇಳಿಸಿಕೋ, ದೊಡ್ಡಮ್ಮಾ" ಎಂದು ಕೂಗಿದ ಜೋರಾಗಿ.

ಕೆಳಗೆ ನಿಂತಿದ್ದ ಸುಮಿತ್ರಳಿಗೆ ನಗುವೋ ನಗು. ಅವನು ತಮಾಷೆಗಾಗಿ ಹತ್ತುವಾಗ ಅವಳು ಬೇಡ ಎಂದಿರಲಿಲ್ಲ. ಸುಮನ ಚಪ್ಪಾಳೆ ತಟ್ಟಿದಳು ಅವನ ಅವಸ್ಥೆಯನ್ನು ಕಂಡು. ಗಣೇಶನಿಗೆ ಕಣ್ಣು ಕತ್ತಲೆಯಿಟ್ಟಂತೆ, ತಲೆತಿರುಗಿದಂತೆ ಎನಿಸಿತು. ಅದೇ ಸಮಯದಲ್ಲಿ ದಾರಿಯಾಗಿ ಬಂದ ಗೋಪಣ್ಣ ಮರ ಏರಿದ ಹುಡುಗನನ್ನು ಕಂಡು, "ಅಯ್ಯೋ, ಇವನ ಕರ್ಮ! ಬಿದ್ದು ಮುಂಡೆ ಒಡ್ಡು ಕೊಳ್ತಿಯಲ್ಲೋ...." ಎನ್ನುತ್ತ ಅತ್ತಿತ್ತ ನೋಡದೆ ಧಾವಿಸಿ ಬಂದ. ಅಷ್ಟು ಹೊತ್ತಿಗೆ ಗಣೇಶನ ಕೈಗಳ ಮತ್ತು ಕಾಲುಗಳ ಹಿಡಿತ ತಪ್ಪಿ "ಹೋ" ಎಂದು ಒರಲಿದ. ಮರ ಬಿಟ್ಟು ಕೆಳಮುಖವಾಯಿತು ಅವನ ದೇಹ. ಇನ್ನೇನು ಗಳಿಗೆ ಯೊಳಗೆ ನೆಲಕ್ಕೆ ಅಪ್ಪಳಿಸುತ್ತದೆ ಆ ದೇಹ. ಆದರೆ ಅಷ್ಟರಲ್ಲಿ ಗೋಪಣ್ಣ ನೀಡಿದ ಕೈಗಳ ಮೇಲೇ ಬಿದ್ದು ಅನಂತರ ಹೊರಳಿತು ಮಣ್ಣಿಗೆ.

"ಏನಾಯ್ತು....ಸರಿಯಾಗಿದ್ದೀಯಾ?...."—ಗೋಪಣ್ಣ ಅವನನ್ನು ತೆಂಗಿನ ಮರದ ಕೆಳಗಿನಿಂದ ಹೊತ್ತು ತಂದು ಮಲಗಿಸಿದ ಹುಲ್ಲಿನ ಮೇಲೆ. ಮೇಲ್ಮುಖನಾದ ಅವನ ಉಸಿರಾಟದ ಗತಿ ತೀವ್ರವಾಗಿತ್ತು. ಕೈಕಾಲುಗಳಲ್ಲಿ ಇನ್ನೂ ತರಗೆಲೆಯಂತೆ ನಡುಕ. ಹೊಟ್ಟೆಯ ಸಿಪ್ಪೆ ಸುಲಿದು ಒಸರಿತ್ತು ನೆತ್ತರು. ಗೋಪಣ್ಣ ತನ್ನ ತಲೆಯ ಮೇಲಿರುವ ಬಟ್ಟೆಯನ್ನು ಎತ್ತಿಕೊಂಡು ಹಾಕಿದ ಗಾಳಿಯನ್ನು. ಒಂದು ನಿಮಿಷ ತಾನು ಬರುವದು ತಡವಾಗಿ ಹೋಗಿದ್ದರೆ? ಇಲ್ಲಿ ನಿಂತವಳಿಗೂ ಬುದ್ಧಿಯಿಲ್ಲ. ಮರ ಏರದವನನ್ನು ಹೀಗೆ ಹತ್ತಿಸುವದೇ? ಸುಮನಳಿಗೆ ನೀರು ತರುವಂತೆ ಕೇಳಿಕೊಂಡ.

ಕೆರೆಯ ಕೆಲಸದಲ್ಲಿದ್ದ ಕೃಷ್ಣಯ್ಯ ಸುದ್ದಿ ತಿಳಿದು ಹೌಹಾರಿ ಹಾರೆ ಯನ್ನು ಹೆಗಲ ಮೇಲಿರಿಸಿಕೊಂಡು ಹಾಗೇ ಓಡಿಬಂದ ಗಣೇಶ ಬಿದ್ದ ಸ್ಥಳಕ್ಕೆ. ಗಾಳಿ ಬೀಸುತ್ತ ಕುಳಿತಿದ್ದ ಗೋಪಣ್ಣ ಅವನನ್ನು ನೋಡಿದಾಕ್ಷಣ ಎದ್ದು ನಿಂತು ಬಟ್ಟೆಯನ್ನು ತಲೆಗೆ ಕಟ್ಟಿಕೊಂಡ.

“ಮುಂಡೆ ಒಡೆಯುವದೇ ಇದ್ದದ್ದು ಹುಡುಗನ ಪುಣ್ಯ! ಸ್ವಲ್ಪ ಉಪಕಾರ ಮಾಡಿ” ಎಂದವನು ಹೊರಟುಬಿಟ್ಟ ಆ ಸ್ಥಳದಿಂದ. ಇನ್ನು ಅವನಿಗೆ ಅಲ್ಲಿ ಕೆಲಸವಿರಲಿಲ್ಲ. ಹೆಚ್ಚಿಗೆ ಮಾತನಾಡುವ ಮನಸ್ಸೂ ಇರಲಿಲ್ಲ.

ಕೃಷ್ಣಯ್ಯ ನಿಂತಿದ್ದ ಹಾಗೇ. ಸುಮಿತ್ರ ಬಲಗೈ ತಿರುಗಿಸಿ, “ಭಾರೀ ನೀನೊಬ್ಬ ಉಪಚರಿಸುವವನು!” ಎಂದಳು ಹೋಗುವವನಿಗೆ ಕೇಳಿಸುವಂತೆ.

“ವೈಷಮ್ಯ ಹೇಗೇ ಇರಲಿ, ಗೋಪಣ್ಣ ಸಕಾಲದಲ್ಲಿ ಬಂದಿದ್ದಾನಲ್ಲ. ಅವನಿಗೆ ಹೀಗೆ ಹೇಳುವುದೇ?” ಕೃಷ್ಣಯ್ಯ ಹಾರೆಯನ್ನು ಕೆಳಗೆ ಬಿಸಾಡಿ ರೇಗಿಕೊಂಡ ಹೆಂಡತಿಯ ಮೇಲೆ. ಗಣೇಶ ನಿಧಾನವಾಗಿ ಎದ್ದು ಕುಳಿತ.

ಮರುದಿನ ಮೀಸೆ ಅಣ್ಣನ ಅಂಗಡಿಯಲ್ಲಿ ಎಲ್ಲರ ಬಾಯಲ್ಲಿಯೂ ಇದೇ ವಿಷಯ. ಅಲ್ಲಿಗೆ ಬಂದ ಗಣೇಶನನ್ನು ಮೀಸೆ ಅಣ್ಣ ಎತ್ತಿ ಎತ್ತಿ ಕುಣಿಸಿದ. ಬದುಕಿ ಬಂದ್ಯಲ್ಲಪ್ಪೊ, “ಏನಾರS ದೇವರು ದೊಡ್ಡವನು ನೋಡು. ತೆಂಗಿನ ಮರ ಹತ್ತಿ ಕಾಯಿ ಕೀಳು ಅಂತ ಹೇಳಿದ್ಲಂತೆ ನಿನ್ನ ಚಿಕ್ಕಮ್ಮ. ಸೈ ಎಂದು ಹತ್ತಿದ ನೀನು ಗಟ್ಟಿಗನಪ್ಪ.”

“ಮುಂಡೆ ಹೋಳಾಗ್ತಿತ್ತು” ದುಗ್ಗಪ್ಪ ಗಣೇಶನ ಮುಖವನ್ನು ನಿವಾಳಿಸಿ ದೃಷ್ಟಿ ತೆಗೆದ, “ಅದರೂ ಇವನ ಚಿಕ್ಕಮ್ಮ....ಗೋಪಣ್ಣನನ್ನು ತಾರಾಮಾರಾ ಬೈದಳಂತೆ. ಆಗ ಇವನ ಅಪ್ಪ ಹಾರೆ ತಕ್ಕೊಂಡು ಅವಳನ್ನು ಹೊಡೆಯಲು ಹೋದನಂತೆ....”

“ಹೋ....ಹ್ಹೊ ಹ್ಹೊ ....” ಸೇರಿದ ಜನರು ಹಳೆಯ ಬೆಂಚುಗಳು ಅಲುಗಾಡುವಂತೆ ನಕ್ಕರು, “ಬಹಳ ತಮಾಷೆಯಾಗಿದೆಯಲ್ಲ....!”

ಕೃಷ್ಣಯ್ಯ, ಸುಮಿತ್ರಳಿಗೆ ಹಾರೆಯಲ್ಲಿ ಹೊಡೆದಾಟವಾಯಿತೆಂದು ಚಹದಂಗಡಿಯಲ್ಲಿ ರೂಪು ತಳೆದ ಸುದ್ದಿ ಯಶೋದೆಯ ಕಿವಿ ತಲುಪಿದಾಗ ಆಕೆಗೆ ಹಾಲು ಕುಡಿದಷ್ಟು ತೃಪ್ತಿ. ದಾರಿಯಲ್ಲಿ ಹೋಗುವ ಗಣೇಶನನ್ನು ಕರೆದು, “ಹೌದೇನೋ, ನಿನ್ನ ಅಪ್ಪನಿಗೂ ಸುಮಿತ್ರಳಿಗೂ ಜಗಳವಾಯ್ತಂತೆ ನಿನ್ನೆ....ಯಾಕೆ?” ಕೇಳಿದಳು.

“ಜಗಳವಾಗ್ಲಿಲ್ಲ. ಅವರ ದೊಡ್ಡಮ್ಮ ನಿನ್ನೆ ರಾತ್ರಿ ಬಹಳ ಹೊತ್ತಿನವರೆಗೆ ನಿಮ್ಮನ್ನೆಲ್ಲರನ್ನೂ ಬೈತಾ ಇದ್ಲು” ಎಂದ ಅವನು ಮುಚ್ಚುಮರೆಯಿಲ್ಲದೆ.

ಯಶೋದೆ ಬೆರಳ ನೆಟಿಗೆ ಮುರಿದಳು. “ಅವಳ ಹಣೆಬರಹವೇ ಹಾಗೆ. ಯಾರನ್ನಾದರೂ ಬೈತಾನೇ ಇರಬೇಕು. ಆ ಮುಂಡೆಯಿಂದ ನಿಮಗೇನಿದೆ ಸುಖ? ನಿನ್ನ ಅಪ್ಪ ಅಲ್ಲಿ ಬಳೆ ತೊಟ್ಟ ಹೆಂಗಸು! ನೀವು ಇಲ್ಲಿರುವ ಬದಲು ಜೇರೆಲ್ಲಿಯಾದರೂ ಇದ್ದಿದ್ದರೆ ಸುಖವಾಗಿ ಇರಬಹುದಿತ್ತು.”

“ಈ ರಾಡಿ ನೀರಿನ ಹಣೆಬರಹವೇ....” ಅವಳು ಚಪ್ಪಾಳೆ ತಟ್ಟುತ್ತ ಅಂದಳು ತಂದೆಯೊಂದಿಗೆ, “ಇಬ್ಬರಿಗೂ ಪ್ರಾರಂಭವಾಗಿದೆ ಜಗಳ. ಇನ್ನು ಒಂದು ಮುಖ ಅತ್ಲಾಗೆ, ಒಂದು ಮುಖ ಇತ್ಲಾಗೆ. ನಂಗೊತ್ತು— ಹೀಗಾಗುತ್ತದೆ ಎಂದು.”

“ಆದರೂ ನೀನು ಏನೇ ಹೇಳು” ವೃದ್ಧ ತಂದೆ ಹೇಳಿದ: “ಕೃಷ್ಣಯ್ಯ ಕೆಲಸಗಾರ. ಅವನಂತೆ ಕೆಲಸ ಮಾಡಲು ಗೋಪಣ್ಣನಿಂದಲೂ ಸಾಧ್ಯವಿಲ್ಲ!”

ತಂದೆ ಹೊಗಳಿದಾಗ ಯಶೋದೆಗೆ ಕೆಂಡ ಸುರಿದಂತಾಯಿತು. ಮನೆ ಅಳಿಯನಾಗಿದ್ದ ಗೋಪಣ್ಣ ಸ್ವಭಾವತಃ ಸಂಕೋಚವವನು. ಮಾವ ಆಸ್ತಿಯ ಸಮಸ್ತ ಜವಾಬ್ದಾರಿಯನ್ನು ಅವನ ಹೆಗಲಿಗೆ ಹೊರೆಸಿದ್ದರೂ ಕೃಷ್ಣಯ್ಯನಷ್ಟು ಬುದ್ಧಿ ಚುರುಕಿಲ್ಲ. ಕೆರೆ, ತೋಟ, ಮನೆ ಎಂದೆಲ್ಲ ಎಷ್ಟು ಯೋಜನೆಗಳನ್ನು ಹಮ್ಮಿಕೊಂಡಿದ್ದಾನೆ ಕೃಷ್ಣಯ್ಯ. ಎಲ್ಲ ಮೆಚ್ಚಬೇಕು ಅವನನ್ನು.

“ಎಲ್ಲ ನಾಲ್ಕು ದಿನಗಳ ಅಬ್ಬರ....” ಯಶೋದೆ ಸಹಿಸದೆ ಅಂದಳು, “ಆಮೇಲೆ ಸುಮಿತ್ರಳೊಂದಿಗೆ ಏಗೋದೇ ಕಷ್ಟವಾಗುತ್ತದೆ....ನೋಡೋಣ ....ನೋಡೋಣ.”

ಯಶೋದೆ ಆಡಿದ ಮಾತು ಸುಮಿತ್ರಳಿಗೆ ತಲುಪಿದಾಗ ಉದ್ವಿಗ್ನ ಗೊಂಡಿತು ಅವಳ ಮನಸ್ಸು. ಗಣೇಶ ಏನೇನೋ ಹೇಳಿ ಊರಲ್ಲಿ ತಮ್ಮ ಬಗ್ಗೆ ಸುಳ್ಳು ಪ್ರಚಾರ ಮಾಡುತ್ತಿದ್ದಾನೆಂದು ತಿಳಿದು ರೇಗಿದಳು ಅವನ ಮೇಲೆ, ಶಪಿಸಿದಳು:

“ಉತ್ತಮ ಕುಲದ ಸುಪುತ್ರ! ನಿನ್ನಿಂದ ನನಗೆ ಉಳಿಗಾಲವಿಲ್ಲ. ನಿನ್ನ ಕಥೆ, ನೀನ್ಯಾರು ಎನ್ನುವುದು ನನಗೊಬ್ಬಳಿಗೇ ಗೊತ್ತು. ನಿನ್ನನ್ನು ಇಲ್ಲಿ ಇಟ್ಟುಕೊಂಡದ್ದೇ ತಪ್ಪಾಯ್ತು. ನಾನು ಹಾಕಿದ ಅನ್ನ ಉಂಡು ಅಕ್ಕನ ಹತ್ರ ನನ್ನನ್ನೇ ದೂರಿದ್ದಾನೆ, ಮುಠ್ಠಾಳ!”

# 13

ಅಡಿಕೆ ತೋಟದ ಇನ್ನೊಂದು ದಾರಿಯಿಂದ ತನ್ನ ಮನೆಗೆ ಹೋಗುತ್ತಿದ್ದ ದುಗ್ಗಪ್ಪ ದಿನನಿತ್ಯ ಜೇಗ್ಗೆ ಚೀಲದಲ್ಲಿ ಅಡಿಕೆ ತುಂಬಿಕೊಂಡು ಕದ್ದೊಯ್ಯುವುದು ಯಾರಿಗೂ ತಿಳಿದಿರಲಿಲ್ಲ. ಅಂದು ಅಡಿಕೆ ತುಂಬಿಸುತ್ತ ಕುಳಿತಿದ್ದವನು ಸಿಕ್ಕಿಬಿದ್ದ ಗಣೇಶನ ಎದುರಿನಲ್ಲಿ. "ಬಾ, ಹೊರಗೆ ಹೋಗೋಣ." ಅಡಿಕೆ ತುಂಬಿದ್ದ ಚೀಲವನ್ನು ದುಗ್ಗಪ್ಪ ಸೊಂಟಕ್ಕೆ ಕಟ್ಟಿಕೊಂಡು ಮೇಲಿನಿಂದ ಪಂಚೆಯನ್ನು ಇಳಿಬಿಟ್ಟು ಎದ್ದುನಿಂತ. ತನ್ನ ಎರಡೂ ಕೈಗಳಿಂದ ಗಣೇಶನ ಮುಖವನ್ನು ಸವರಿ ವಿಚಿತ್ರವಾಗಿ ನಕ್ಕು 'ಹೋಗೋಣ' ಎಂಬಂತೆ ಕಣ್ಸನ್ನೆ ಮಾಡಿದ.

"ಕದ್ದು ತಗೊಂಡು ಹೋಗ್ತಾ ಇದ್ದೀಯಲ್ಲ, ಅದನ್ನು ಬಿಸಾಡು ಮೊದಲು." ಅವನ ಸೊಂಟಕ್ಕೆ ಕೈಹಾಕಿ ಎಳೆದ ಬಟ್ಟೆಯನ್ನು.

ಆದರೆ ಮುದುಕನ ಮೈಯಲ್ಲಿ ಎಳೆಯುನಿಗಿಂತ ಹೆಚ್ಚಿನ ಕಸುವು. ಅವನನ್ನು ಹಿಡಿದು ನೂಕಿದ ಅಷ್ಟು ದೂರಕ್ಕೆ. "ನಿನ್ನೆ ಮೊನ್ನೆ ಹುಟ್ಟಿದ ಪೋರ! ನನ್ನ ಮೇಲೆ ಜಬರದಸ್ತು ಮಾಡ್ತಿಯಾ? ಹೊ ಹೋ!....ನಾನು ಹದಿನೈದು ವರ್ಷಗಳಿಂದಲೂ ಹೀಗೇ ತಕ್ಕೊಂಡು ಹೋಗ್ತಾ ಇದ್ದೀನಿ—ಯಾರೂ ತಡೀಲಿಲ್ಲ ನನ್ನನ್ನು. ಇಕಾ" ಅವನು ನಕ್ಕು ಹೇಳಿದ: "ಸುಖವಾಗಿ ಜೀವನ ಮಾಡುವ ಗುಟ್ಟು ಇಲ್ಲೇ ಇದೆ! ನಿನಗೂ ಬೇಕಿದ್ದರೆ ನಾಕು ತಕೋ. ಕಾಫಿ ಖರ್ಚಿಗೆ ಪುಡಿಗಾಸು!"

"ನನ್ನನ್ನು ನಿನ್ನನ್ನು ತೋಟದ ಕಾವಲಿಗೆ ಮಲಗಿಸಿದ್ದಾರೆ, ಅಡಿಕೆ ಕದಿಯುವದಕ್ಕಲ್ಲ. ನೀನು ಕದ್ದುದನ್ನು ಅಯ್ಯನವರ ಹತ್ರ ಹೇಳದೆ ಇರಲಾರೆ, ನೋಡು."

"ಹಾಗೆ ಮಾಡಬೇಡವೋ."—ದುಗ್ಗಪ್ಪ ತುಟಿ ಓರೆಮಾಡಿ ನೋಡಿದ ಹುಡುಗನನ್ನು. ಇತ್ತೀಚೆಗೆ ನರಸಿಂಹಭಟ್ಟರ ವಿಶ್ವಾಸ, ಆತ್ಮೀಯತೆಯನ್ನು ಗಳಿಸಿಕೊಂಡ ಹುಡುಗನಲ್ಲಿ ಮೋಸ, ವಂಚನೆಗಳಿಲ್ಲ. ಬೆಳಗ್ಗೆ ಇಲ್ಲಿಂದ ಹೋಗುವಾಗ ಮೈಗೆ ಅಂಟಿದ್ದ ಹುಲ್ಲನ್ನೂ ಎಸೆದು ಹೋಗುವವನು! ತಾನು ಕದ್ದುದನ್ನು ನೇರವಾಗಿ ಭಟ್ಟರ ಎದುರಿನಲ್ಲಿ ಹೇಳಿಬಿಟ್ಟರೆ ಆಮೇಲೆ ತನ್ನ

ಗತಿ....? ಸಂಸಾರದ ಪ್ರಶ್ನೆ? ಹೇಗಾದರೂ ಇವನನ್ನು ಒಲಿಸಿಕೊಳ್ಳಬೇಕು ಎಂದೆನಿಸಿತು.

"ಮೊದಲು ಆ ಅಡಿಕೆಯನ್ನು ಕೆಳಗೆ ಹಾಕು....ಆಮೇಲೆ ಮಾತು ಆಡೋಣ...."

"ಬುದ್ಧಿಯಿಲ್ಲದ ಹುಡುಗ!"—ಅವನು ಗಣೇಶನ ಬೆನ್ನು ತಟ್ಟಿದ, "ಮೀಸೆ ಅಣ್ಣನ ಅಂಗಡಿಗೆ ಗುಟ್ಟಾಗಿ ಎಷ್ಟು ತಕ್ಕೊಂಡು ಹೋಗಿ ಕೊಟ್ಟರೂ ಅವನು ಬೇಡ ಅನ್ನಲಾರ. ನೀನೂ ಬೇಕಾದಷ್ಟು ತಗೋ. ಹೋಗಿ ಮಾರು. ತಿನ್ನು ಹೊಟ್ಟೆತುಂಬ. ನಾನಂತೂ ಯಾರಿಗೂ ಹೇಳುವದಿಲ್ಲ, ಹುಡುಗ....!"

"ಮುದುಕಪ್ಪ....ನಿನ್ನ ಈ ಬೋಧನೆ ನನಗೆ ಬೇಡ. ಕದಿಯುವದು ಪಾಪ ಅನ್ನುವದೂ ಗೊತ್ತಿಲ್ಲವೇ ನಿನಗೆ?"

"ಅದನ್ನು ನೀನು ನನಗೆ ಇನ್ನು ಕಲಿಸಿಕೊಡಬೇಕು." ವಿಕಟವಾಗಿ ನಕ್ಕ ದುಗ್ಗಪ್ಪ. "ವಾಮನಮೂರ್ತಿ, ಇವತ್ತೊಂದು ದಿನ ನನಗಾಗಿ ಅಯ್ಯನವರ ಹತ್ರ ಹೇಳ್ಬೇಡ. ರಾತ್ರಿ ತನಕ ಸುಮ್ಮನಿರು. ನನಗೂ ನಿನ್ನಂತವ್ರು ಐದಾರು ಮಕ್ಕಳಿದ್ದಾವೆ ಮನೇಲಿ. ಇಷ್ಟು ದೊಡ್ಡ ತೋಟದಿಂದ ಮುಷ್ಟಿ ಅಡಿಕೆ ಹೆಕ್ಕಿ ತಗೊಂಡರೆ ಅದು ಪಾಪವಲ್ಲ. ನಾವೂ ದಿನವೆಲ್ಲ ಇದೇ ತೋಟದಲ್ಲಿ ಬೆವರು ಸುರಿಸಿ ದುಡೀತೇವಲ್ಲ?"

"ಹೆಚ್ಚು ಸಂಬಳ ಕೇಳಿ ತೆಗೆದುಕೋ. ಅಥವಾ ಅಡಿಕೆ ತಗೊಂಡು ಹೋಗ್ತೀನೆ ಅಂತ ಪ್ರಾಮಾಣಿಕವಾಗಿ ಹೇಳು ಅಯ್ಯನವರ ಹತ್ರ."

"ಅಯ್ಯಪ್ಪೋ." ದುಗ್ಗಪ್ಪ ಅಲ್ಲಿಂದ ಹೊರಡುತ್ತ ಹೇಳಿದ, "ಸುಣ್ಣದ ಗೆರೆ ಎಳೆದ್ಹಾಗೆ ಅವರದು ಒಂದೇ ಲೆಕ್ಕ. ನಾನು ಕದ್ದು ತಗೊಂಡು ಹೋಗ್ತೀನೆ ಅಂತ ಗೊತ್ತಾದ್ರೆ ಜೋಕ್ಕೆವಾಯ್ತು ನನ್ನ ಕತೆ. ಗತಿಗೆಟ್ಟದ್ದಕ್ಕೆ, ಹೊಟ್ಟೆಗಿಲ್ಲದ್ದಕ್ಕೆ, ಹಾಳು ಬಡತನಕ್ಕೆ ಈ ತೋಟದ ಕಾವಲು, ಇಲ್ಲಿಯ ದುಡಿಮೆ. ಇಕಾ ಬೀಡಿ." ಅವನು ತನ್ನ ಅಂಗಿ ಜೇಬಿನಿಂದ ಮುಷ್ಟಿಯಾದ ಬೀಡಿ ತುಂಡನ್ನು ಗಣೇಶನ ಕೈಲಿರಿಸಿದ, "ಎರಡು ದಂ ಎಳಿ. ಎಷ್ಟು ಖುಷಿಯಾಗ್ತದೊ ನೋಡು. ನಮ್ಮ ಬಡತನದ ಬವಣೆ ಹೀಗೆ ಕದ್ದರೂ ತಪ್ಪಲಾರದು. ನೀನು ಅಯ್ಯನವರ ಹತ್ರ ಹೇಳಿದ್ರೆ ನನ್ನ ಗತಿ, ನನ್ನ ಮಕ್ಕಳ ಗತಿ ಏನಾದೀತು ನೋಡ್ಕೋಪ್ಪ."

ದುಗ್ಗಪ್ಪ ಕೆಳಗೆ ಬಗ್ಗಿ ಇನ್ನೂ ಒಂದೆರಡು ಅಡಿಕೆಗಳನ್ನು ಆರಿಸಿಕೊಂಡು

ಹಲ್ಕಿರಿದ, "ನಿನಗೂ ಮದುವೆಯಾಗಿ ನಾಲ್ಕು ಮಕ್ಕಳಾಗಲಿ, ಆಮೇಲೆ ನನ್ನ ದಾರಿಗೇ ಬರ್ತಿಯಾ. ಎಲ್ಲ ರಾತ್ರಿ ಮಾತನಾಡೋಣ. ಈಗ ಬಾಯಿಗೆ ಬೀಗ ಹಾಕ್ಕೊ!"

ಅವನು ಕಾಲೆಳೆದುಕೊಳ್ಳುತ್ತ ಹೊರಟುಹೋಗುವದನ್ನೇ ನೋಡುತ್ತ ಸುಮ್ಮನೆ ನಿಂತ ಗಣೇಶ. ಬಾಯಿಗೆ ಬೀಗ ಹಾಕಿಕೊಳ್ಳುವದು ಹೆಚ್ಚು ಕಷ್ಟವೇನಲ್ಲ. ಅವನು ಬಲಹೆಬ್ಬೆರಳನ್ನು ಬಾಯಲ್ಲಿ ಇರಿಸಿಕೊಂಡ. ಹೌದು, ಇದೇ ಹೆಬ್ಬೆರಳಿಗೆ ಅಲ್ಲವೇ ಅವನ ಅಮ್ಮ ಬೆಂಕಿಯನ್ನು ಇಟ್ಟದ್ದು? ಅಂದು ಅವನು ಶಾಲೆಯಿಂದ ಯಾರದೋ ಪೆನ್ನನ್ನು ಕದ್ದು ತಂದನೆಂದು ಕೆರಳಿದ ಅಕ್ಕ ಅವನ ಬೆರಳಿಗೆ ಬೆಂಕಿ ತಗಲಿಸಿ ಗದರಿಸಿದ್ದಳು:

"ಇನ್ಮೇಲೆ ಯಾರ ವಸ್ತುವನ್ನೂ ಕದಿಯುವದಿಲ್ಲವೆಂದು ನೂರು ಬಾರಿ ದೇವರ ಹತ್ರ ಕುಳಿತು ಪ್ರಮಾಣಮಾಡು!"

ಅವನು ಅಳುತ್ತ ಪ್ರಮಾಣಮಾಡಿದ್ದ ದೇವರ ಮುಂದೆ. ಅನಂತರ ಅಕ್ಕ ಸಮಾಧಾನವಾಗಿ ಅಂದಿದ್ದಳು: "ಕದಿಯುವದು ಮಹಾಪಾಪ—ಇನ್ನೊಬ್ಬರಿಗೆ ಸೇರಿದ ಏನನ್ನೂ ತೆಗೆಯಬೇಡ, ಮುಟ್ಟಬೇಡ. ಯಾರನ್ನೂ ಹಿಂಸಿಸಬೇಡ. ನಿನ್ನಿಂದ ಸಾಧ್ಯವಾದಷ್ಟು ಇನ್ನೊಬ್ಬರಿಗೆ ಉಪಕಾರ ಮಾಡಲು ಕಲಿತುಕೋ!"

ಬೆರಳು ಚೀಪುತ್ತ ಅಳು ಬಂದುಬಿಟ್ಟಿತು ಗಣೇಶನಿಗೆ. ಕದಿಯುವದನ್ನು ನೋಡಿಯೂ ತಾನು ಮೌನವಾಗಿರಬೇಕು. ನರಸಿಂಹಭಟ್ಟರಿಗೆ ಅನ್ಯಾಯವಾದರೂ ತಾನು ತೆಪ್ಪಗಿರಬೇಕು. ಇನ್ನೇನು ನಾಲ್ಕು ದಿನಗಳಲ್ಲಿ ಕೊನೆಯ ಅಡಿಕೆಯ ಕೊಯ್ಲು. ಆಮೇಲೆ ತೋಟದ ಕಾವಲು ಇಲ್ಲ. ಇನ್ನು ಇದೇ ಕೊನೆಯದು. ಮುಂದಿನ ವರ್ಷ ಬಾರೋ ಎಂದು ಕರೆದರೆ ಸಾಧ್ಯವಿಲ್ಲ ಎನ್ನುತ್ತೇನೆ.

ಅಲ್ಲಿಂದ ಹಿಂದಿರುಗಿ ಬರುತ್ತಿದ್ದಂತೆ ಗೋಪಣ್ಣ ಗೆಲ್ಲು, ಸೊಪ್ಪುಗಳಿಂದ ತುಂಬಿದ್ದ ದೊಡ್ಡ ಮಾವಿನಮರದ ರೆಂಬೆಯನ್ನು ಎರಡೂ ಕೈಗಳಿಂದ ಎಳೆದುಕೊಂಡು ಹೋಗುತ್ತ ಇರುವದು ಕಾಣಿಸಿತು. ಅವನು ಉಟ್ಟಿದ್ದು ಪಂಜೆ ಮಾತ್ರ. ಬೆಳಗಿನ ಹೊತ್ತಿನ ಕೆಲಸವಾದರೂ ಮೈಯಿಂದ ಇಳಿಯುತ್ತಿದೆ ಧಾರೆಯಂತೆ ಬೆವರಿನ ನೀರು. ಕತ್ತಿಯನ್ನು ಸಿಕ್ಕಿಸಿದ್ದಾನೆ ಸೊಂಟಕ್ಕೆ. ಅವನಿಂದ

ಎಳೆಯಲು ಕಷ್ಟವಾಗುತ್ತಿದ್ದರೂ ಛಲದಿಂದ ಎಳೆಯುತ್ತ ಇದ್ದಾನೆ ಒಬ್ಬನೇ. ಗಣೇಶ ಅರೆಗಳಿಗೆ ನಿಂತು ಅನಂತರ ಹತ್ತಿರ ಬಂದು ತಾನೂ ಕೈಹಚ್ಚಿದ. ಮೈ ಬಗ್ಗಿಸಿಕೊಂಡು ಎಳೆಯುತ್ತಿದ್ದ ಗೋಪಣ್ಣನ ಮುಖದಲ್ಲಿ ಅಸಮಾಧಾನ ಮೂಡಿದರೂ ಕೆಲಸ ಸುಲಭವಾಯಿತು. ಕ್ಷಣಮಾತ್ರದಲ್ಲಿ ಮನೆಯ ಬದಿಗೆ ಬಂದು ಬಿದ್ದಿತು ಮರದ ರೆಂಬೆ.

"ಉಸ್ಸಪ್ಪಾ...." ಎಂದು ಉಸಿರ್ಗರೆದ ಗೋಪಣ್ಣ ಕೃತಜ್ಞತೆಯಿಂದ ನೋಡಿದ ಗಣೇಶನನ್ನು. "ನೀನು ಬಂದದ್ದು ಉಪಕಾರವಾಯ್ತು. ಬಾ ಮನೆಗೆ. ಹಾಲೋ, ನೀರೋ ಕುಡಿದು ಹೋಗಬಹುದು."

ಎರಡು ವರ್ಷಗಳ ಹಿಂದೆ ಕಟ್ಟಿಸಿದ ಹೊಸ ಮಣ್ಣಿನ ಮನೆ, ಮುಳಿ ಹುಲ್ಲಿನ ಹೊದಿಕೆ. ಹೊರಗಿನ ಮಣ್ಣಿನ ಜಗಲಿಯಲ್ಲಿ ಗೋಪಣ್ಣನ ಕಿರಿಯ ಮಕ್ಕಳಿಬ್ಬರು ಆಡಿಕೊಳ್ಳುತ್ತಾ ಇದ್ದರು. ಗಣೇಶ ಜಗಲಿಯ ತುದಿಯಲ್ಲಿ ಕುಳಿತುಕೊಳ್ಳುತ್ತಿದ್ದಂತೆ ಒಳಕಿಟಕಿಬಾಗಿಲುಗಳಿಂದ ಯಶೋದೆ ಮತ್ತು ಅವಳ ತಾಯಿ ಹಣಕಿ ನೋಡಿ ಕಿಸಕ್ಕನೆ ನಕ್ಕು ಇನ್ನೇನೋ ಗೊಣಗಿಕೊಳ್ಳುವದು ಕೇಳಿಸಿತು. ಸ್ವಲ್ಪಹೊತ್ತಿಗೆಲ್ಲ ಗೋಪಣ್ಣ ಒಂದು ಎಲೆಯ ತುಂಬ ದೋಸೆ, ಗೊಜ್ಜು, ಬೆಲ್ಲ ಹಾಕಿ ತಂದು ಅವನ ಎದುರು ಇಟ್ಟಾಗ ಗಣೇಶನಿಗೆ ಬೇಡ ಎನ್ನಲಾಗಲಿಲ್ಲ.

"ಮರದಿಂದ ಬಿದ್ದವನ ಮೈಕೈ ನೋವು ಎಲ್ಲ ಗುಣವಾಯ್ತೇ?" ಅವನ ಹತ್ತಿರವೇ ಕುಳಿತು ಸ್ನೇಹ ತುಂಬಿದ ಸ್ವರದಲ್ಲಿ ಕೇಳಿದ ಗೋಪಣ್ಣ.

"ಸ್ವಲ್ಪ ಎಡಗೈ ಮೊಣಗಂಟು ನೋವಿದೆ....ಅಷ್ಟೆ...."

ಅವನೊಂದಿಗೆ ಮಾತನಾಡುತ್ತ ಗಣೇಶನನ್ನು ಏಕೋ ಹೊಗಳಿದ. ಕೃಷ್ಣಯ್ಯನನ್ನು ಮೆಚ್ಚಿಕೊಂಡ, "ನಿನ್ನ ಅಪ್ಪನ ಹಾಗೆ ನನಗೂ, ತೀರಿಹೋದ ಸುಮಿತ್ರಳ ಗಂಡನಿಗೂ ಕೃಷಿಯಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಈಗ ನೋಡಿದರೆ ನಾವೂ ಬೇರೆಯವರಿಂದ ಕಲಿಯುವದೂ, ತಿಳಿಯುವದೂ ಬೇಕಾದಷ್ಟಿದೆ. ನಿನ್ನ ಚಿಕ್ಕಮ್ಮ ಬುದ್ಧಿವಂತೆ, ಕಾರ್ಯಜಾಣೆ! ಕೃಷ್ಣಯ್ಯನಿಂದ ಅಡಿಕೆ ತೋಟ ಮಾಡಿಸಿದಳು. ಈಗ ಹೊಸ ಮನೆ ಬೇರೆ ತಯಾರಾಗುತ್ತ ಇದೆ!"

ಅಷ್ಟರಲ್ಲಿ ಮೂಲೆಯಿಂದ ಸುಮಿತ್ರಳ ತಂಪಿನ ಸ್ವರ ಕೇಳಿಸಿತು.

"ಆಯೋಗ್ಯಳ ಹೆಸರನ್ನು ಎತ್ತಬೇಡ ಇಲ್ಲಿ! ಆ ಹುಡುಗ ಯಾಕೆ ಬಂದ? ನನ್ನ ಪೊರೆ ಬಂದ ಕಣ್ಣುಗಳಿಗೆ ಯಾರನ್ನೂ ಸರಿಯಾಗಿ ಕಾಣಿಸುವುದೇ ಇಲ್ಲ ....ಅವನನ್ನು ಹೊರಗೆ ಅಟ್ಟು!"

"ಅವನಿಗೆ ಪ್ರಾಯವಾಯ್ತು. ಹೀಗೇ ಸಿಸಿಸಿರಿ."—ಗೋಪಣ್ಣ ಬಿಸಿ ಹಾಲು ತಂದಿರಿಸಿದ, "ನಾವೆಲ್ಲ ಜೇರಿ ಮನೆ ಮಾಡಿದ ಲಾಗಾಯ್ತು ಅವರ ಬುದ್ಧಿ ಸ್ಥಿಮಿತದಲ್ಲಿ ಇಲ್ಲ. ಹಾಲು ಕುಡಿ, ಆಗಾಗ ಮನೆಗೆ ಬರ್ತಾ ಇರು.... ಯಾಕೋ ಖುಷಿಯಾಗ್ತದೆ."

## 14

ಕೃಷ್ಣಯ್ಯ ಅನೇಕ ಬಾರಿ ಸೂಚ್ಯವಾಗಿ ಮಕ್ಕಳನ್ನು ತೋಟ್ಟಿಯಿಂದ ಕರೆಯಿಸಿ ಕೊಳ್ಳುತ್ತೇನೆ ಎಂದಿದ್ದ. ಆದರೆ ಸುಮಿತ್ರಳದು ನೇರ ನುಡಿ. ನೆರೆಯಲ್ಲಿರುವ ಅಕ್ಕ ಮೊದಲೇ ಕಣ್ಣು ಕೆಕ್ಕರಿಸಿದ್ದಾಳೆ. ಇನ್ನು ಆ ಮಕ್ಕಳೂ ಬಂದರೆ ಕುಚೇಷ್ಟೆ ಮಾಡಲು ಇನ್ನೊಂದು ದಾರಿ. ತನಗೆ ಕೃಷ್ಣಯ್ಯ ಬೇಕು, ಮಕ್ಕಳು ಬೇಡ! ನಿಜವಾಗಿಯೂ ಕೃಷ್ಣಯ್ಯನ ಕುಟುಂಬಕ್ಕೆ ಸೇರಿದ ಅವಳು ಅವನ ಮಕ್ಕಳನ್ನು ನೋಡಿಕೊಳ್ಳಬೇಕಾದದ್ದು ಅನಿವಾರ್ಯ. ಆದರೆ ಇಲ್ಲಿ ಕೃಷ್ಣಯ್ಯನೇ ಕಾಲು ಮುರಿದುಕೊಂಡವನಂತೆ ಅವಳ ಆಸ್ತಿಯಲ್ಲಿ ಉಳಿದು ಬಿಟ್ಟಿದ್ದಾನೆ. ತಿಳಿದು ತಿಳಿದು ಸುಡುವ ಬೆಂಕಿಗೆ ಕೈಯಿರಿಸಿದಂತಾಗಿದೆ. ನೆಮ್ಮದಿ ಆಗೊಮ್ಮೆ ಈಗೊಮ್ಮೆ ಕವಡಿದಂತೆ ತೋರಿದರೂ ಅವನಿಗೆ ತಾಳ್ಮೆ ಹೆಚ್ಚು. ಸುಮಿತ್ರ ಒಂದಲ್ಲ ಒಂದು ದಿನ ಮಕ್ಕಳನ್ನು ಇಲ್ಲಿಗೇ ಕರೆಯಿಸಿ ಕೊಳ್ಳುತ್ತಾಳೆಂಬ ಭರವಸೆ. ಆಗಾಗ ನೆನಪಾಗುತ್ತದೆ ಮಕ್ಕಳನ್ನು. ನಿಟ್ಟುಸಿರು ತೆಗೆಯುತ್ತಾನೆ ತನ್ನಲ್ಲೇ.

ಈ ಮಧ್ಯೆ ಸಿದ್ಧವಾಗುತ್ತ ಇದೆ ಹೊಸ ಮನೆ. ಗಣೇಶನಿಗೋ ಎಲ್ಲಿಲ್ಲದ ಸಂಭ್ರಮ. ಗೋಡೆಯ ಕೆಲಸ ಮುಗಿದು ಮರದ ಅಡ್ಡಗಳನ್ನೂ ಇಟ್ಟು ಮಾಡಿನ ಕೆಲಸ ಪ್ರಾರಂಭ. ತಲೆಯ ಮೇಲೆ ಸಾಗಿಸಬೇಕು ದೊಡ್ಡ ದೊಡ್ಡ ಮರದ ತುಂಡುಗಳನ್ನು. ಒಂದು ದಿನ ಕುತ್ತಿಗೆಯಲ್ಲಿ ಉಳುಕು. ಇನ್ನೊಂದು ದಿನ ಕಾಲಿಗೆ ಜಜ್ಜಿ ಗಾಯ. ಸುಮನ, ಯಮುನ ಉಸುರನ್ನು ನೀರಿಗೆ ಅದ್ದಲಾರರು.

ಸುಮಿತ್ರ ಗದರಿಸಿಕೊಂಡರೂ ರಾತ್ರಿ ಓದುವ ಬಯಕೆ ಅವನಿಗೆ. ಎಲ್ಲೆಲ್ಲಿಂದಲೋ ಬೇಡಿ ತರುತ್ತಾನೆ ಪುಸ್ತಕಗಳನ್ನು. ಅಡಿಕೆ ತೋಟದ ಕಾವಲಿಲ್ಲದೆ ಈಗ ರಾತ್ರಿ ಮನೆಯಲ್ಲಿಯೇ. ತೋಟದ ಸೊಳ್ಳೆಗಳ ಕಾಟದಿಂದ ಮುಕ್ತಿ ಸಿಕ್ಕಿದೆ. ಸಣ್ಣ ಬಾಟಲಿಗೆ ಬಟ್ಟೆಯ ಬತ್ತಿಯನ್ನು ಮಾಡಿ ಚಿಮಣಿ ದೀಪದ ಎಣ್ಣೆಯನ್ನು ಉರಿಸಿ ಅದರ ಮಬ್ಬು ಬೆಳಕಿನಲ್ಲಿ ಓದುವ ಸಾಹಸ. ಕಾದಂಬರಿಗಳಿಗಿಂತ ಐತಿಹಾಸಿಕ ಪುಸ್ತಕಗಳ ಮೇಲೆ ಒಲವು. ಟಿಪ್ಪುಸುಲ್ತಾನ, ಚಾಂದಬೀಬಿ, ಶಿವಾಜಿಯ ಕಥೆಗಳನ್ನು ಓದುತ್ತ ಅದರಲ್ಲೇ ಮೈಮರೆಯುವ. ಅವರ ಕಲ್ಪನೆಯಲ್ಲೇ ವಿಹರಿಸುವ. ಕಣ್ಣು ಉರಿದರೂ ಮನ ತಣಿಯದು. ತಾನು ಓದಿರುವುದನ್ನು ಯಮುನಳೊಂದಿಗೂ ಹೇಳಿಕೊಳ್ಳುವ. ಶಂಕರ, ಸುನಂದೆಗೆ ಕಾಗದದಲ್ಲಿಯೂ ಬರೆಯುತ್ತಾನೆ. ಶಾಲೆಗೆ ಹೋಗದಿದ್ದರೇನಂತೆ. ಪುಸ್ತಕಗಳನ್ನು ಓದಲು ಯಾರ ಅಡ್ಡಿ ಆತಂಕಗಳಿಲ್ಲ, ತುಂಬ ಓದಬೇಕು ಎನ್ನುವ ಛಲ.

ಈ ನಡುವೆ ಊರಿನಲ್ಲಿ ಅವನದೇ ಪ್ರಾಯದ ಅನೇಕ ಹುಡುಗರೊಂದಿಗೆ ಬೆಳೆಯುತ್ತ ಸ್ನೇಹ. ಅಂಚೆಪೆಟ್ಟಿಗೆಯ ಹತ್ತಿರದ ಮರದ ನೆರಳಿನಲ್ಲಿ ಎಲ್ಲ ವಿಧದ ಹಣ್ಣುಗಳನ್ನು ಇಟ್ಟುಕೊಂಡು ಮಾರುತ್ತಿದ್ದ ಹಣ್ಣಿನ ವ್ಯಾಪಾರಿ ಮೈದು ಕುಂಞಿ ಅವನಿಗಿಂತ ನಾಲ್ಕಾರು ವರ್ಷಗಳಿಗೆ ಹಿರಿಯವನು. ಅವನೆಂದರೆ ಬಹಳ ಅಚ್ಚುಮೆಚ್ಚು. ಎಷ್ಟು ಹರಟೆ ಹೊಡೆದರೂ ಸಾಲದು. ಊರ ಹೊರಗಿನ ಸುದ್ದಿಗಳನ್ನು ರಮ್ಯವಾಗಿ ಹೇಳುತ್ತಿದ್ದರೆ. ಕೇಳುವುದಕ್ಕೆ ಇಷ್ಟ ಗಣೇಶನಿಗೆ. ಕಟ್ಟಾ ಮುಸ್ಲಿಂನಾದ ಮೈದು ಕುಂಞಿ ನಮಾಜಿನ ವೇಳೆ ಯಾಯಿತೆಂದರೆ ವ್ಯಾಪಾರವನ್ನೂ ನಿಲ್ಲಿಸಿ ಎರಡು ನಿಮಿಷ ನೆಲದ ಮೇಲೆ ಕುಳಿತು ಕಣ್ಣು ಮುಚ್ಚಿ ಪ್ರಾರ್ಥನೆ ಮಾಡುತ್ತಾನೆ. ಗಣೇಶ ವಿಸ್ಮಯ ಭರಿತ ನೇತ್ರಗಳಿಂದ ಅವನನ್ನೇ ನೋಡುತ್ತ, "ಏನು ಮಾಡುತ್ತಿ?" ಎಂದು ಕೇಳುತ್ತಾನೆ.

"ಅಲ್ಲಾಗೆ ಪ್ರಾರ್ಥನೆ ಸಲ್ಲಿಸುತ್ತಿದ್ದೇನೆ" ಎನ್ನುತ್ತಾನೆ ಮೈದುಕುಂಞಿ.

"ಎಲ್ಲಿದ್ದಾನೆ ನಿನ್ನ ಅಲ್ಲಾ?"

"ಮಕ್ಕಾದಲ್ಲಿ!"

"ನೀನು ಹೋಗಿದ್ದೀಯಾ ಮಕ್ಕಾಕ್ಕೆ?" ಎಂದು ಗಣೇಶ ಮುಗ್ಧನಾಗಿ

ಕೇಳುವಾಗ ಅವನು ಮನದಲ್ಲೇ ನಗುತ್ತಾ ಹೌದು ಎಂಬಂತೆ ತಲೆಯಲ್ಲಾಡಿ ಸುತ್ತಾನೆ. ಗಣೇಶನಿಗೂ ತನಗೂ ಮಕ್ಕಾಗೆ ಹೋಗುವ ಆಸೆ. "ನನ್ನನ್ನೂ ಅಲ್ಲಿಗೆ ಕರೆದುಕೊಂಡು ಹೋಗುತ್ತೀಯಾ?" ಎಂದೂ ಕೇಳುತ್ತಾನೆ. ಮೈದು ಕುಂಞಗೆ ಮತ್ತೆ ನಗು.

"ಓಹೋ, ಅಬ್ಬಾಗೆ ಹೇಳಿ ಕರ್ಕೊಂಡು ಹೋಗ್ತೇನೆ. ನನ್ನ ಅಬ್ಬಾ ಬಹಳ ಒಳ್ಳೆಯವರು. ಇಬ್ಬರೂ ಒಟ್ಟಿಗೇ ಹೋಗೋಣ."

ಆಮೇಲೆ ಮೈದುಕುಂಞ ಹೇಳುವ ಬಣ್ಣಕಟ್ಟಿದ ಸುಳ್ಳು ಪ್ರಯಾಣದ ಕಥೆಯನ್ನು ಕೇಳುತ್ತ ಕೇಳುತ್ತ ಗಣೇಶನ ಮನಸ್ಸು ಕನಸುಗಳನ್ನು ಹೆಣೆಯುತ್ತದೆ. ಬಹಳ ದೂರದಲ್ಲಿರುವ ಮಕ್ಕಾ ಅತಿ ಸಮೀಪವಿದೆ ಎಂದೆನಿಸುತ್ತದೆ. ತಾನೂ ಮಕ್ಕಾಗೆ ಹೋಗಲಿರುವ ವಿಷಯವನ್ನು ಸುಮನಳೊಂದಿಗೆ ಹೇಳಿದಾಗ ಅವಳು ಬಿದ್ದು ಬಿದ್ದು ನಕ್ಕಳು.

"ಇಲ್ಲಿಂದ ನಾಲ್ಕು ಮಾರು ದೂರ ನಡೆಯುವ ತಾಕತ್ತು ಇಲ್ಲದವನು ಮಕ್ಕಾಗೆ ಹೋಗ್ತೀಯೇನೋ! ಮೈದುಕುಂಞಗೆ ಬೇರೆ ಕೆಲಸವಿಲ್ಲ, ನಿಂಗೆ ಬೇರೆ ಯೋಚನೆಯಿಲ್ಲ!"

ಸಾಯಂಕಾಲ ಜೋಮು, ತನಿಯ, ಹನುಮ ಎಲ್ಲರೂ ಊರ ಅರಳೀ ಕಟ್ಟೆಯೆದುರು ಹಾಜರು. ಜಾತಿಯಲ್ಲಿ ಹೊಲೆಯನಾದ ಜೋಮು, ಕೊಂಕ ಹನುಮ, ಜೀತದಾಳು ತನಿಯ ಇವರೊಂದಿಗೇ ಗಣೇಶನ ಸ್ನೇಹ. ಜೊತೆಯಲ್ಲಿ ಅವನ ಆತ್ಮೀಯ ಮಿತ್ರ ಕರಿನಾಯಿ ಬಾಲ ಅಲ್ಲಾಡಿಸುತ್ತ ಬರುತ್ತದೆ. ಮೀಸೆ ಅಣ್ಣನ ಅಂಗಡಿಯಲ್ಲಿ ಆಗಾಗ ಏನಾದರೂ ತಿನ್ನುತ್ತಾರೆ, ಹರಟುತ್ತಾರೆ. ಬೆಳದಿಂಗಳು ಇರುವ ದಿನ ಕೇಕೆ ಹಾಕುತ್ತ ಆಡುತ್ತಾರೆ. ಜಾತಿಯ ಪ್ರಜ್ಞೆ ಅವರಿಗೆ ಇರಲಿಲ್ಲ.

ಮನೆಯ ಒಂಟಿತನದಲ್ಲಿ ಹೊರಗೆ ಅರಸಿಕೊಂಡ ಸ್ನೇಹ ಗಣೇಶನ ಮನಕ್ಕೆ ಚೇತೋಹಾರಿಯಾಗಿತ್ತು. ಅನೇಕ ಬಾರಿ ಅವನು ಮೀಸೆ ಅಣ್ಣನ ಅಂಗಡಿಯಲ್ಲಿ, ಅರಳಿಕಟ್ಟೆಯಲ್ಲಿ ನಾಲ್ವಾರು ಗೆಳೆಯರೊಡನೆ ಕುಳಿತಿರುತ್ತಾನೆಂದೂ ಕೃಷ್ಣಯ್ಯನಿಗೆ ತಿಳಿದಾಗ ಮೊದಲು ಹೆಚ್ಚು ಗಮನಕ್ಕೆ ತಂದುಕೊಳ್ಳಲಿಲ್ಲ. ಆದರೆ ಗಣೇಶ ಹೆಂಡದಂಗಡಿಗೂ ಹೋಗುತ್ತಾನೆ ಎಂದು ಕೇಳಿದಾಗ ನಿಗಿನಿಗಿ ಕೆಂಡವಾಗಿಹೋದ. ತನ್ನ ಅಂಕೆಯಲ್ಲಿರುವ ಹುಡುಗ

ಜೇಡದ ಮಕ್ಕಳೊಡನೆ ಸ್ನೇಹ ಬೆಳೆಸಿದ್ದಲ್ಲದೆ ತನ್ನಂತೆ ಕುಡಿಯುವವಕ್ಕೂ ಪ್ರಾರಂಭ ಮಾಡಿಬಿಟ್ಟನೇ?

ನಿಗಿನಿಗಿಯುತ್ತಿರುವ ಕೆಂಡಕ್ಕೆ ತಣ್ಣೀರು ಬಿದ್ದರೆ ಹಾಗೇ ಆರಿ ಹೋಗುತ್ತದೆ. ಇನ್ನಷ್ಟು ಗಾಳಿ ಊದುವಂತಿದ್ದರೆ ಕಿಡಿ ಹಾರುತ್ತಲೇ ಹೋಗುತ್ತದೆ ಕೆಂಡದಿಂದ. ಸಮಯಸಾಧಿಸಿ ಸುಮಿತ್ರ ಅವನ ಕೋಪಕ್ಕೆ ಗಾಳಿ ಊದಿದಳು. ಕೃಷ್ಣಯ್ಯ ಎಚ್ಚರಿಕೆ ಕೊಟ್ಟ: "ಬೀದಿ ತಿರುಗಲು ಪ್ರಾರಂಭ ಮಾಡಿಬಿಟ್ಟೆ ನೀನೀಗ. ಇನ್ಮೇಲೆ ಆ ಕೆಳಜಾತಿಯವರ ಜೊತೆ ಒಂದಕ್ಷರ ಮಾತನಾಡಿದರೆ ನಿನ್ನ ನಾಲಿಗೆ ಸೀಳಿಬಿಡ್ತೇನೆ!"

ಅವನ ಎಚ್ಚರಿಕೆಯ ನುಡಿ ತಟ್ಟಲಿಲ್ಲ ಹುಡುಗನನ್ನು. ಮರುದಿನ ಸಾಯಂಕಾಲ ಎಂದಿನಂತೆ ಅರಳಿಕಟ್ಟೆಯತ್ತ ಹೊರಡಲು ಸಿದ್ಧನಾದಾಗ ಎದುರಾದ ಕೃಷ್ಣಯ್ಯ, "ನಿನ್ನೆ ನಾನು ಹೇಳಿದ್ದು ಕೇಳಿಸಲಿಲ್ಲವೇನೊ ನಿನಗೆ?"

"ಸ್ವಲ್ಪ ಹೊತ್ತು ತಿರುಗಾಡಿ ಬರ್ತೇನೆ...."

"ಇನ್ನೂ ಮೀಸೆ ಹುಟ್ಟದ ಪೋರ....ಈಗಲೇ ನಾಯಿಯಂತೆ ತಿರುಗುವ ಹುಚ್ಚು ನಿನಗೆ. ಅವ್ರ ಮೂರಕ್ಕೆ ಮೂರ್ಕಾಸಿನ ಬುದ್ಧಿಯಿಲ್ಲ. ಅವ್ರುಗಳ ಜೊತೆಯಲ್ಲಿ ನೀನೂ ಕುಡಿಯೋದಕ್ಕೆ ಪ್ರಾರಂಭಿಸಿಬಿಟ್ಟದ್ದಿಯೇನು? ಗಣಪಿಯ ಅಪ್ಪ ಹೀಗೆ....ಹೀಗೇ ಇದ್ದ ನಿನ್ನಂತೆ. ಥೇಟ್ ಅವನ ಬುದ್ಧಿಯೇ ಬಂದಿದೆ ನಿನಗೂ!"

"ನಾನು ಕುಡಿಯಲು ಹೋಗುತ್ತ ಇಲ್ಲ...."

"ನನಗೇ ಎದುರು ಮಾತನಾಡ್ತಿಯಾ...." ಕೃಷ್ಣಯ್ಯ ಮುಷ್ಟಿಯಿಂದ ನೆತ್ತಿಯ ಮೇಲೆ ಗುದ್ದಿ ಮೂಲೆಗೆ ದಬ್ಬಿದ, "ಮೊನ್ನೆ ಹೆಂಡದಂಗಡಿಯಲ್ಲಿ ಇದ್ದದ್ದು ನೋಡಿದ್ದೇನೆ. ಈಗಲೇ ಹೇಳಿದ್ದೇನೆ, ಇನ್ಮೇಲೆ ಆ ಹುಡುಗರ ಜೊತೇಲಿ ನೀನು ಹೋದರೆ ಹೆಂಡದಂಗಡಿಯಲ್ಲಿ ನೀನು ಕಾಣಿಸಿಕೊಂಡರೆ ಹೊಂಡ ತೋಡಿ ಹಾಕಿಬಿಡ್ತೇನೆ ನಿನ್ನ! ಸೈ, ಮುಗೀತು ಅಲ್ಲಿಗೆ ನನ್ನ-ನಿನ್ನ ಋಣ!"

ಗಣೇಶ ತತ್ತರಿಸಿಹೋದ ಈ ಮಾತಿನಿಂದ. ಓ!....ಅಪ್ಪನ ಬಾಯಿ ಯಿಂದ ಇಂತಹ ಮಾತುಗಳೇ? ತಾನಂತೂ ಹೆಂಡದಂಗಡಿಯತ್ತ ತಲೆಹಾಕಿ ದವನೇ ಅಲ್ಲ. 'ನಮ್ಮ ಜೊತೆ ಗುಟುಕು ಕುಡಿದು ನೋಡು' ಎಂದು ಎಷ್ಟು

ಒತ್ತಾಯಿಸಿದ್ದ ತನಿಯು. ಬೀಡಿಯನ್ನು ಹೊತ್ತಿಸಿ ತುಟಿಯ ವರೆಗೂ ತಂದಿದ್ದ ಜೋಮು. ಆದರೆ ಅವರೆಡನ್ನೂ ನೋಡಿದರೆ ಓಕರಿಕೆ ಬರುತ್ತದೆ. ‘ಹೆಂಡ ಮನುಷ್ಯನನ್ನು ಮೃಗವನ್ನಾಗಿ ಮಾಡುತ್ತದೆ’ ಎಂದು ಅಮ್ಮ ಹೇಳಿದ್ದು ಇನ್ನೂ ಮರೆತಿಲ್ಲ ತಾನು. ಈ ಅಪ್ಪನಿಗೆ ಬೀಡಿಕಟ್ಟುಗಳು ಎಷ್ಟಿದ್ದರೂ ಸಾಲದು, ಹೆಂಡ ಕಂಠಪೂರ್ತಿ ಕುಡಿದರೂ ತೃಪ್ತಿಯಿಲ್ಲ. ಈಗ ತನಗೆ ಬುದ್ಧಿ ಹೇಳಲು ಬಂದಿದ್ದಾನೆ. ಗಣಪಿಯ ಅಪ್ಪನಂತೆ ಇದ್ದೇನಂತೆ ತಾನು. ಅವನು ಯಾರೋ ತನಗೆ ತಿಳಿಯದು. ತಥ್! ಈ ಅಪ್ಪ ಮೊದಲಿನ ಅಪ್ಪ ಅಲ್ಲವೇ ಅಲ್ಲ. ಹೌದು, ಅವನು ತನ್ನ ಬುದ್ಧಿಯ ಕೀಲಿಕೈಯನ್ನು ಇನ್ಯಾರದೋ ವಶಕ್ಕೆ ಕೊಟ್ಟು ಬಿಟ್ಟಿದ್ದಾನೆ. ಕೀಲಿ ತಿರುಗಿಸಿದತ್ತ ಇವನು ತಿರುಗುತ್ತ ಇದ್ದಾನೆ.

“ಎರಡು ಪಿಕಾಸುಗಳ ಹಿಡಿಕೆ ಹೋಗಿದೆ. ಕೊಟ್ಟಿಗೆ ಮೂಲೆಯಲ್ಲಿ ಮರದತುಂಡು, ಕತ್ತಿಯೂ ಇದೆ. ಎರಡು ಹಿಡಿಕೆ ಮಾಡಿ ಹಾಕು.” ಕೃಷ್ಣಯ್ಯ ಅಪ್ಪಣೆ ಕೊಟ್ಟು ತಲೆಗೊಂದು ಬಟ್ಟೆಯನ್ನು ಸುತ್ತಿಕೊಂಡು ಹೊರಟುಬಿಟ್ಟ.

ಗಣೇಶ ಕಟಕಟನೆ ಹಲ್ಲು ಕಡಿದು ಅವನು ಹೋದ ದಿಕ್ಕಿಗೇ ತೂರಿದ ಕಲ್ಲುಗಳನ್ನು. ಬಾಲ ಅಲ್ಲಾಡಿಸುತ್ತ ಬಂದ ಮಿತ್ರನನ್ನು ಎತ್ತಿಕೊಂಡು ಲೊಚಲೊಚನೆ ಮುದ್ದಿಟ್ಟ. ಅಪ್ಪ ಈಗ ಎಲ್ಲಿಗೆ ಹೋದ ಎನ್ನುವದು ತನಗೆ ತಿಳಿಯದೇ....ಅವನನ್ನು ತಾನು ಸುತ್ತ ಸುತ್ತ ತಿರುಗಿಸಬೇಕು. ನನ್ನಿಂದ ಇನ್ನು ಸಾಕಪ್ಪ ಸಾಕು ಎನ್ನಿಸುವಂತೆ ಮಾಡಬೇಕು. ಅವನನ್ನು ಜೋರಾಗಿ ಕೂಗಾಡಿಸಬೇಕು. ಅವನು ಏದುಸಿರು ಬಿಡುತ್ತ ಒದರಿಕೊಳ್ಳಬೇಕು, ತನ್ನ ಹಣೆಯ ಬೆವರನ್ನು. ನನ್ನ ತಂಟೆಗೆ ಬಾರದಂತೆ ಹೆದರಿಸಬೇಕು. ದೊಡ್ಡನ್ನು ‘ಇನ್ನು ಸಾಕಪ್ಪ ಸಾಕು, ಎಂದು ಭಯದಲ್ಲಿ ಅರಚಿಕೊಳ್ಳುವಂತೆ ಮಾಡಬೇಕು. ಹೇಗೆ? ನಿಷ್ಕರುಣಿ ಅಪ್ಪ. ತನ್ನನ್ನು ಬಂದಿಷ್ಟೂ ಅರಿತುಕೊಂಡಿಲ್ಲ. ತಾನು ಗಣಪಿಯ ಅಪ್ಪನಂತೆ. ಥೇಟ್ ಅವನ ಬುದ್ಧಿಯನ್ನು ಪಡೆದುಕೊಂಡು ಬಂದಿದ್ದೇನಂತೆ. ಅರೆ! ಗಣಪಿಯನ್ನಾಗಲೀ, ಅವನ ಅಪ್ಪನನ್ನಾಗಲೀ ತಾನು ಈವರೆಗೂ ನೋಡಿದವನಲ್ಲ. ತನಗೂ ಅವರಿಗೂ ಯಾವ ಸಂಬಂಧವೂ ಇಲ್ಲ. ಆದರೂ ಅಪ್ಪ ಯಾಕೆ ಹಾಗೆ ಹೇಳಿದ?

ಅವನ ನೆನಪಿನ ಗುಳ್ಳೆ, ಮೇಲೆದ್ದಿತು ನೊರೆಯನ್ನೆಬ್ಬಿಸುತ್ತ. ಗಣಪಿಯ ತಂದೆ ಹೊನ್ನಪ್ಪ ತೋನ್ಸೆಯ ನಿವಾಸಿಯಾಗಿದ್ದರೂ ಗಣೇಶ ಹುಟ್ಟುವ

ಮೊದಲೇ ಶೋಣ್ಣಿಯನ್ನು ತ್ಯಜಿಸಿ ತನ್ನ ಸಂಸಾರದೊಂದಿಗೆ ಎತ್ತಲೋ ಹೊರಟುಹೋಗಿದ್ದಾನೆ. ಗಂಗಯ್ಯನ ಮನೆಯ ಹತ್ತಿರವೇ ಇದ್ದ ಅವನ ಸಂಸಾರದ ಕುರುಹು ಕೂಡ ಅಲ್ಲಿಲ್ಲ. ಅಲ್ಲಿಯ ಜನರೂ ಇತ್ತೀಚಿನ ವರ್ಷಗಳಲ್ಲಿ ಅವನನ್ನು ಸಂಪೂರ್ಣ ಮರೆತುಬಿಟ್ಟಿದ್ದಾರೆ. ಕದಿಯುವವರಲ್ಲಿ ನಿಸ್ಸೀಮನಾದ ಪೊನ್ನಪ್ಪ ಕುಡಿಯುವದರಲ್ಲಿಯೂ ಗಟ್ಟಿಗನಾಗಿದ್ದನೆಂದು ಆಗಾಗ ಅಲ್ಲಲ್ಲಿ ಕೇಳಿಬರುತ್ತಿದ್ದ ಸುದ್ದಿ. ಅವನ ಎರಡನೆಯ ಮಗಳು ಅಕ್ಕುವಿನ ಸ್ನೇಹಿತೆಯಾದ ಗಣಪಿ. ಅವಳ ವಿಷಯವನ್ನು ಆಗಾಗ ಅಕ್ಕು ಹೇಳಿಕೊಳ್ಳುತ್ತಿದ್ದಳು, ಜ್ಞಾಪಿಸಿಕೊಳ್ಳುತ್ತಿದ್ದಳು. ಆದರೆ ಗಣೇಶನಿಗೆ ನೆನಪಿದ್ದಂತೆ ಗೆಳತಿಯರು ಪರಸ್ಪರ ಯಾವಾಗಲೂ ಭೇಟಿಯಾದವರೇ ಅಲ್ಲ. ಹಾಗೆ ನೋಡಿದರೆ ಗಣಪಿ ಎಲ್ಲಿದ್ದಾಳೆ ಎನ್ನುವದೂ ತಿಳಿದಿರಲಿಲ್ಲ ಅಕ್ಕುವಿಗೆ. ಶೋಣ್ಣಿಗೆ ಹೋದಾಗ ಅಪರೂಪಕ್ಕೊಮ್ಮೆ, ಅಜ್ಜ, ಮಾವಂದಿರು, ಅಮ್ಮ, ಎಲ್ಲರೂ ಗಣಪಿಯ ವಿಷಯವನ್ನು, ಪೊನ್ನಪ್ಪನನ್ನು ಕುರಿತು ಮಾತನಾಡಿಕೊಳ್ಳುವದನ್ನು ಕೇಳಿಸಿಕೊಳ್ಳುತ್ತಿದ್ದ ಅವನು. ಆ ಮಾತುಗಳೊಂದೂ ಅವನ ಮನದ ಆಳವನ್ನು ಪ್ರವೇಶಿಸಿರಲೇ ಇಲ್ಲ. ಯಾರೋ ಏನೋ ಅವರ ಬಗ್ಗೆ ತಿಳಿದುಕೊಳ್ಳುವ, ಕೇಳಿಕೊಳ್ಳುವ ಕುತೂಹಲ, ಅತೀವ ಆಸಕ್ತಿಯಿರಲಿಲ್ಲ ಎಳೆಯನಲ್ಲಿ. ಹಿರಿಯರ ಮಾತಿನ ಮಧ್ಯೆ ಅನಗತ್ಯವಾಗಿ ಪ್ರವೇಶಿಸುವ ವಯಸ್ಸು ಅವನದಾಗಿರಲಿಲ್ಲ.

ಈ ದಿನ ಇದ್ದಕ್ಕಿದ್ದಂತೆ ಕೋಪದಲ್ಲಿ ಉರಿಯುತ್ತಿದ್ದ ಕೃಷ್ಣಯ್ಯ, “ನೀನು ಗಣಪಿಯ ಅಪ್ಪನಂತೆ!” ಎಂದಾಗ ಗಣೇಶನಿಗೆ ಮುಖ ಸಿಂಡರಿಸಿಕೊಳ್ಳುವಂತಾಯಿತು. ತನ್ನನ್ನು ಯಾರ್ಯಾರಿಗೋ ಹೋಲಿಸುತ್ತಿದ್ದಾನೆ ಅಪ್ಪ. ‘ಥೇಟ್ ನನ್ನಂತೆ ನೀನು ಆಗ್ತಾ ಇದ್ದೀಯಲ್ಲೋ’ ಎಂದಿದ್ದರೆ ತನಗೆ ಯಾವ ಬೇಸರವೂ ಇರುತ್ತಿರಲಿಲ್ಲ. ಪಾಪ....ಹೇಗೆ ಹೇಳುತ್ತಾನೆ? ತನ್ನ ಬುದ್ಧಿ ಡೊಂಕು. ಅದನ್ನು ತಿದ್ದಿಕೊಳ್ಳುವದಕ್ಕಾಗದೆ ನನಗೆ ಹೇಳುತ್ತಾನೆ ಬುದ್ಧಿಯನ್ನು.

ಮುಷ್ಟಿ ಬಿಗಿದುಕೊಂಡ. ದಿನವೆಲ್ಲ ‘ಹಾಂ ಹೂಂ’ ಎನ್ನದೆ ಮಡಿಯುತ್ತೇನೆ ಕತ್ತೆಯಂತೆ. ಸಂಜೆಯ ಹೊತ್ತು ಅರೆಗಳಿಗೆ ತಿರುಗಾಡಿಕೊಂಡು ಬರುವ ಸ್ವಾತಂತ್ರ್ಯವೂ ತನಗಿಲ್ಲ. ಒಳಗೆ ಮಬ್ಬುಗತ್ತಲೆಯನ್ನು ಬೆಳಗಿಸಿತು ಚಿಮಣಿ

ದೀಪ. ವಿಷುಸಂಕ್ರಮಣದ ದಿನ ತೋಟದ ಕಾವಲಿನ ಹಣವನ್ನು ನರಸಿಂಹ ಭಟ್ಟರು ತನ್ನ ಕೈಗಿತ್ತಾಗ ಹರ್ಷವದನನಾದ ತಾನು ಎಲ್ಲ ಹಣವನ್ನೂ ದೊಡ್ಡಮ್ಮನಿಗೆ ಕೊಟ್ಟುಬಿಟ್ಟೆ. 'ನೋಡು ನಾನೆಷ್ಟು ಗಳಿಸಿದೆ' ಎಂದು ಹೆಮ್ಮೆ ಮೂಡಿತ್ತು ತನಗೆ. ದೊಡ್ಡಮ್ಮ ನೋಟು ಎಣಿಸಿದಳು, ಸೊಟ್ಟ ಮುಖ ಮಾಡಿದ್ದಳು. ಉಪ್ಪಿನಂಗಡಿ ಜಾತ್ರೆ, ದೇವಸ್ಥಾನದಲ್ಲಿ ಪೂಜೆ, ಅಲ್ಲಿ ನಡೆದ ಯಕ್ಷಗಾನ ಬಯಲಾಟ ನೋಡುವುದಕ್ಕೂ ಬಿಡಲಿಲ್ಲ ತನ್ನನ್ನು. ವೃಥಾ ಹಣ ಪೋಲುಮಾಡುವುದು ಬೇಡ ಎಂದಳು ದೊಡ್ಡಮ್ಮ. ಅಸ್ತು ಎಂದ ಅಪ್ಪ! ಈಗ ಸಾಯಂಕಾಲ ತಿರುಗಾಡಿಕೊಂಡು ಬರುವುದೂ ತನ್ನ ಪಾಲಿಗೆ ನಿಷೇಧ. ಇವರು ಹೇಳಿದಂತೆ ಕೇಳುವ ಆಳು ತಾನು? ತನಗಿಲ್ಲಿ ಬೆಲೆಯಿಲ್ಲ. ಜೋರಾಗಿ ಕೂಗಾಡಿ, ರೇಗಾಡಿ ಎಲ್ಲಿಯಾದರೂ ಹೊರಟುಹೋಗಿಬಿಡಬೇಕು. ಶಂಕರ, ಸುನಂದೆಯರಂತೆ ಅಜ್ಜಿಯ ವಾತ್ಸಲ್ಯದ ನೆರಳಲ್ಲಿ ತನಗೂ ಇಂಬುಸಿಕ್ಕಿದ್ದರೆ....?

ಗಣೇಶನ ತುಂಬುಗಲ್ಲದ ಮೇಲೆ ಉರುಳಿತು ಹನಿನೀರು. ನಾಯಿ ಅವನ ಮುಖವನ್ನು ನೋಡಿತು. ಏನೋ ಅರ್ಥವಾಯಿತು ಎಂಬಂತೆ. ಅಷ್ಟರಲ್ಲಿ ಹೊರಗೆ ಆಡಲು ಹೋಗಿದ್ದ ಸುಮನ, ಮುಮುನ ಕೇಕೆಹಾಕುತ್ತ ಓಡಿ ಓಡಿ ಬಂದರು ಮನೆಗೆ. ಮಕ್ಕಳ ಸ್ವರ ಕೇಳಿ ಹೊರಗೆ ಬಂದ ತಾಯಿ—"ಓ....ಆಡಿ ಬಂದಿರಾ? ಈ ವಯಸ್ಸಿನಲ್ಲಿ ಚೆನ್ನಾಗಿ ಆಡ್ಬೇಕು. ಬನ್ನಿ, ಸ್ನಾನ ಮಾಡಿಸ್ತೇನೆ. ಆಮೇಲೆ ಬಿಸಿಹಾಲು ಕುಡಿದು ಓದಿಕೊಳ್ಳಿ" ಎಂದಳು ಮೃದುವಾಗಿ ಸವಿಜೇನಿನಂತಹ ಧ್ವನಿಯಲ್ಲಿ.

ರಾತ್ರಿರಾಣಿ ಹೂವುಗಳ ಕಂಪಿನೊಂದಿಗೆ ಸಂಜೆಯ ದುಂಡುಮಲ್ಲಿಗೆ ಪರಿಮಳವೂ ಬೆರೆತಿತ್ತು. ತಾಯಗೂಡನ್ನು ಸೇರಲು ಸನ್ನದ್ಧವಾದ ಅಸಂಖ್ಯ ಹಕ್ಕಿಪಕ್ಕಿಗಳ ಚಿಲಿಪಿಲಿ ಸದ್ದಿನೊಂದಿಗೆ ನಿಧಾನವಾಗಿ ಆವರಿಸಿತು ಸಂಜೆ ಗತ್ತಲು. ಕಪ್ಪಿಟ್ಟಿತು ಸುತ್ತಲೂ.

ಇದೇ ಸಮಯದಲ್ಲಿ ನರಸಿಂಹಭಟ್ಟರ ಮನೆಯಿಂದ ಅವರ ಅಡಿಗೆಯ ಕೆಲಸಗಳ ಸಹಾಯಕ್ಕೆ ಒಬ್ಬ ಹುಡುಗನ ಆವಶ್ಯಕತೆಯಿದೆಯೆಂದೂ ಸಾಧ್ಯವಾದರೆ ಗಣೇಶ ತಮ್ಮಲ್ಲಿಗೆ ಬರಲಿ ಎಂದೂ ಹೇಳಿಕಳುಹಿಸಿದರು. ದೊಡ್ಡವರ ಮನೆಯಿಂದ ಹಾಗೆ ಆಹ್ವಾನ ಬರುವುದೇ ಅಪರೂಪ. ಬಂದಾಗ ತಿರಸ್ಕರಿಸುವದುಂಟೇ? ಅಡಿಗೆಕೆಲಸಗಳ ಸಹಾಯವೆಂದರೆ ಕಾಯಿ ಬೀಸುವುದೋ, ಮೊಸರು

ಕಡೆಯುವದೋ ಇನ್ನೇನಾದರೂ ಸಣ್ಣಪುಟ್ಟ ಕೆಲಸಗಳಾದೀತು. ಅವೇನು ಮಹಾ! ಗದ್ದೆ ಉಳುವಷ್ಟು ಕಷ್ಟವಲ್ಲ. ಮಣ್ಣು ಅಗೆದುಹಾಕುವಷ್ಟು ಶ್ರಮವಿಲ್ಲ. ದೊಡ್ಡವರ ಮನೆಯೊಳಗೆ ಶ್ರೀಮಂತಿಕೆಯ ನೆರಳಿನಲ್ಲಿ ಮಾಡುವ ಕೆಲಸ. ತುದಿಗಾಲಿನಲ್ಲಿ ಸಿದ್ಧನಾದ ಗಣೇಶ. ಆದರೆ ಸುಮಿತ್ರ ಈ ಬಾರಿ ಅವನನ್ನು ಭಟ್ಟರ ಮನೆಗೆ ಕಳುಹಿಸಲು ತೀವ್ರವಾಗಿ ವಿರೋಧಿಸಿದಳು. ಇನ್ನೂ ಐದು ಅಡಿ ಬೆಳೆಯದ ಮೆಣಸಿನಕಾಯಿಯಷ್ಟು ಉದ್ದದ ಪೋರ. ಅವರ ಮನೇಲಿ ಏನು ಕೆಲಸ ಮಾಡ್ತಾನಂತೆ. ಒಂದು ಗ್ಲಾಸನ್ನು ಆಚೀಚೆ ಇಡಲು ತಿಳಿಯದವ. ಅನ್ನ ಬೆಂದಿತೇ, ಅಕ್ಕಿಯಾಗಿ ಉಳಿಯಿತೇ ಎಂದೂ ಅರಿಯದವನು ಅಡಿಗೆಯಲ್ಲಿ ಸಹಾಯ ಮಾಡುತ್ತಾನಂತೆ. ತೋಟದ ಕಾವಲು ಮಾಡಿದಷ್ಟು ಸುಲಭವೇ ಆ ಕೆಲಸ? ಆದರೂ ಹುಡುಗ ಯಾವ ಕೆಲಸಗಳಿಗೂ ಹಿಂಜರಿಯದವನು. ಮಾಡಲೂ ಸಶಕ್ತನು. ಅಡಿಗೆ ಸಹಾಯ ಕೇವಲ ಒಂದೇ ಒಂದು ದಿನಕ್ಕಲ್ಲ. ಇನ್ನು ಅಲ್ಲಿಯೇ ಖಾಯಂ ಆಗಿ ಕೆಲಸ ಆಗಿಹೋದರೆ?

ಈ ಯೋಜನೆಯಿಂದ ಹಿತವೆನಿಸಲಿಲ್ಲ ಸುಮಿತ್ರಳಿಗೆ. ಸ್ವಾರ್ಥ ತುಂಬಿದ ಮುಸುಕಿನಲ್ಲಿ ಅವಳು ತನ್ನೊಳಗೆ ಮಾತ್ರ ನೋಡುವವಳು. ಬೆಳಗ್ಗೆ ಕಾಗೆ ಕೂಗದೆ ಬೆಳಗಾಗುವದೇ ಇಲ್ಲವೇ? ಗಣೇಶ ಈ ಮನೆಯ ಸಣ್ಣಪುಟ್ಟ ಕೆಲಸಗಳಿಂದ ಎಲ್ಲ ಕಡೆಗೆ ಹಾಸುಹೊಕ್ಕಾಗಿಹೋಗಿದ್ದಾನೆ. ಅವನಿಲ್ಲದೆ ಆಗಲಾರದು ಒಂದು ಕೆಲಸಗಳೂ. ಹೊಸ ಮನೆಯ ಕೆಲಸ ಅರ್ಧವಾಗಿಹೋಗಿದೆ. ಹಳೆ ಮನೆಯ ಹಿಂಬಾಗದ ಮಾಡನ್ನು ಮುರಿದು ಅಲ್ಲಿದ್ದ ಕೆಲವು ತಾಳಿಅಡ್ಡೆಗಳನ್ನು ಹೊಸ ಮನೆಗೆ ಇಡಲಾಗಿತ್ತು. ಅಕ್ಕಿಮುಡಿಗಳು, ಬೆಲ್ಲದ ಮುಂಡೆ, ಬತ್ತದ ಗೋಣಿ, ಉಪ್ಪಿನಕಾಯಿ ಭರಣಿಗಳು ಹೀಗೆ ಎಷ್ಟೋ ಸಾಮಾನುಗಳು ಹಳೆ ಮನೆ ಅಟ್ಟದ ಮೇಲೆ ಮಾಡಿನ ಹೊದಿಕೆಯಿಲ್ಲದೆ ಹಾಗೇ ಇದೆ. ಅದನ್ನು ಆದಷ್ಟು ಬೇಗ ಕೆಳಗಿಳಿಸಿ ಬೆಚ್ಚಗೆ ಇಡಬೇಕು. ಇವತ್ತೋ ನಾಳೆಯೋ ಮಳೆ ಬಂದರೆ ಇನ್ನೂ ಕಷ್ಟ. ಸಾಧ್ಯವಾದಷ್ಟು ಬೇಗ ಹೊಸ ಮನೆಗೆ ಹಂಚು ಹೊದಿಯಿಸಬೇಕು. ಹಳೆಮನೆ ಸಾಮಾನುಗಳನ್ನು ಅಲ್ಲಿಗೆ ಸಾಗಿಸಿ ಮನೆ ಗೃಹಪ್ರವೇಶವನ್ನೂ ಮಾಡಿಬಿಡಬೇಕು. ಈ ಎಲ್ಲ ತಾಪತ್ರಯಗಳ, ಕೆಲಸಗಳ ಹೊರೆಯಲ್ಲಿ ಗಣೇಶ ಇಲ್ಲಿಂದ ಅಡಿಗೆಕೆಲಸಕ್ಕೆ ಹೊರಟುಹೋದರೆ ತನಗೇ ಕಷ್ಟ.

“ಅವನು ಹೋಗಿಬರಲಿ. ಅಷ್ಟಿಷ್ಟು ಕಾಸಾದರೂ ಸಿಕ್ಕೀತು” ಎಂದ ಕೃಷ್ಣಯ್ಯ.

"ಆ ಕಾಸನ್ನಷ್ಟು ಎಸೀರಿ ಮಣ್ಣಿಗೆ. ಮನೆಗೆಲಸ ಮುಗಿಸ್ಕೋಳ್ರೆ ಎಲ್ಲಿಗೆ ಬೇಕಾದರೂ ಹೋಗಲಿ ಅವನು. ಈಗ ಬೇಡ. ನಿಮಗೂ ಈಗೀಗ ನೀವ್ಹೇಳಿ ದಂತೆ ಕೇಳ್ಬೇಕು ಅನ್ನುವ ಹಟ ಜೋರಿ ಬಂದಿದೆ. ಯಾರು ಮಾಡ್ತಾರೆ ಇಲ್ಲಿ ಕೆಲಸ?"

"ಅವರ ಚಿಂತೆ ನಿನಗೆ ಬೇಡ. ನಿನಗೂ ನನ್ನ ಮಾತೆಲ್ಲ ಕಾಲಕಸಕ್ಕಿಂತ ಕಡೆ. ಅವರು ಖಾಯಂ ಕೆಲಸಕ್ಕೆ ಕರೆಯಲಿಲ್ಲ. ಭಟ್ಟರ ಹೆಂಡತಿಗೆ ಅಸೌಖ್ಯ. ಮಲಗಿದ್ದಲ್ಲೇ ಇದ್ದಾರೆ. ಎದ್ದು ಸುಧಾರಿಸಿಕೊಳ್ಳುವ ತನಕ ಬದಲಿ ಅಂದಿದ್ದಾರೆ. ನೆರೆಯಲ್ಲಿದ್ದು ಒಂದು ಸಣ್ಣ ಉಪಕಾರವನ್ನು ಮಾಡದೆ ಹೋದರೆ ಹೇಗೆ?"

ಅವರಿಬ್ಬರ ವಾದವಿವಾದಗಳ ಮಧ್ಯೆ ಗಣೇಶ ಹೋಗಲಾರಂಭಿಸಿದ ನರಸಿಂಹಭಟ್ಟರ ಮನೆಗೆ. ನಸುಕಿನಲ್ಲಿ ಅವಸರದಲ್ಲಿ ಕೊಟ್ಟಿಗೆಯ ಕೆಲಸ ಗಳನ್ನು ಮುಗಿಸಿ ಸುಮಿತ್ರಳಿಂದ ಹಿಡಿಶಾಪ, ಬೈಗಳನ್ನು ಸ್ವೀಕರಿಸಿ ಹೊರಟು ಹೋದರೆ ಹಿಂದಿರುಗುವುದು ಸಾಯಂಕಾಲ. ಹೊಸ ಕೆಲಸ, ಇಮ್ಮಡಿ ಉತ್ಸಾಹ. ದೊಡ್ಡ ಮನೆಯಲ್ಲಿ ಮೊದಲ ದಿನ ಕಾಲಿರಿಸಿದಾಗ ಅತೀವ ವಿಸ್ಮಯ. ವಿಶಾಲವಾದ ಕೋಣೆಗಳು, ಗಾಜಿನ ಕಿಟಕಿಗಳು, ಕೆಂಪು ಸಾರಣೆ ಮಾಡಿದ ನೆಲ. ಒಳಗೆಲ್ಲ ಶ್ರೀಮಂತಿಕೆಯ ವೈಭವವನ್ನು ಎತ್ತಿತೋರಿಸುವ ಗೃಹ ಅಲಂಕಾರದ ಸಾಮಾನುಗಳು....ಓಹೋ, ಇದು ಅರಮನೆಯೇ! ನರಸಿಂಹ ಭಟ್ಟರ ನಾಲ್ಕು ಮೊಮ್ಮಕ್ಕಳೂ ಒಬ್ಬರಿಗಿಂತ ಒಬ್ಬರು ತುಂಟಪೋರರು. ಹಿರಿಯವನಿಗೆ ಗಣೇಶನಷ್ಟೇ ಪ್ರಾಯ. ಬಂದ ದಿನದಿಂದಲೇ ಗಣೇಶನ ಮೇಲೆ ತನ್ನ ಅಧಿಕಾರವನ್ನು ಚಲಾಯಿಸುವ ಗತ್ತು. ಹಿರಿಯ ಮುತ್ತೈದೆಗೆ ತೀವ್ರ ಅಸೌಖ್ಯ. ಮಲಗಿದಲ್ಲಿಯೇ ಸೇವೆ. ಭಟ್ಟರ ಮಗನಿಗೆ ಹೊತ್ತಿಗೆ ಸರಿಯಾಗಿ ಊಟ ತಿಂಡಿ ಆಗಲೇಬೇಕೆಂಬ ಕರಾರು. ಸೊಸೆಗೆ ಒಳಹೊರಗಿನವರಿಗೆಲ್ಲ ಮಾಡಿ ಬಡಿಸಬೇಕು ಕ್ಲುಪ್ತ ಸಮಯದಲ್ಲಿ.

ದಿನೇ ದಿನೇ ಅಲ್ಲಿಯ ಎಲ್ಲ ಕೆಲಸಗಳಲ್ಲಿಯೂ ಪಳಗಿದ ಗಣೇಶ. ತನ್ನ ಹಸನ್ಮುಖ, ಕೆಲಸಕಾರ್ಯಗಳಿಂದ ಬಹಳ ಬೇಗನೆ ಪ್ರಿಯನಾದ ಎಲ್ಲರಿಗೂ. ಬೀಸುವ ಕಲ್ಲು, ಅರೆಯುವ ಕಲ್ಲು ಹಳೆಯವಾದವು ಅವನ ಪಾಲಿಗೆ. ಬಡಿಸುವುದು, ಎಂಜಲು ತೆಗೆಯುವುದು ಹೀನ ಕೆಲಸ ಎಂದೆನಿಸಲಿಲ್ಲ. ತನಗಿಂತ

ಕಿರಿಯ ಮಕ್ಕಳೂ ದರ್ಪದಲ್ಲಿ ಗದರಿಕೊಳ್ಳುವಾಗ, ಅವನಿಂದ ಕೆಲಸ ಮಾಡಿಸಿಕೊಳ್ಳುವಾಗ ಅವರಿಗೆ ಎದುರುತ್ತರ ಕೊಡದೆ ನಗುವನ್ನು ಕಲಿತುಕೊಂಡ. ಅವನ ಎಳೆ ಹೃದಯದ ಮೇಲೆ ಬೀಳುವ ಒಂದೊಂದು ಪೆಟ್ಟೂ ಅವನನ್ನು ಬೇರೆಯೇ ಮನುಷ್ಯನನ್ನಾಗಿ ಪರಿವರ್ತಿಸುತ್ತಿತ್ತು. ಪರಿವರ್ತನೆಯಾದದ್ದು ಅವನಿಗೆ ಅರಿವಾಗುತ್ತಿರಲಿಲ್ಲ. ಸಮೃದ್ಧಿಯಾದ ಹಾಲು-ಮೊಸರು, ಬಗೆಬಗೆಯ ವ್ಯಂಜನಗಳು, ಭಕ್ಷ್ಯಗಳನ್ನು ಅವನು ಕನಸಿನಲ್ಲಿ ನೋಡಿರದಿದ್ದರೂ ಜೊಲ್ಲು ಸ್ರವಿಸಿ ಅವನನ್ನು ತಿನಪಾಂಡಿಯಂತೆ ಮಾಡಿದರೂ ಬಹಳ ದೊಡ್ಡವರಂತೆ ಬಿಗುಮಾನದಿಂದ ತುಟಿಕಚ್ಚಿ ಹೊಟ್ಟೆಯ ಬೇಡಿಕೆಯನ್ನು ನಿರ್ಲಕ್ಷಿಸಲು ಕಲಿತುಕೊಳ್ಳಬೇಕಾದರೆ ಅವನಿಗೇ ಸುಸ್ತು. ತಿಂದುಂಡು ಏನಾದರೂ ಮಿಕ್ಕಿದ್ದರೆ ಕೊಂಡೊಯ್ಯಲು ಸಿಗುತ್ತಿತ್ತು ಮನೆಗೆ. ಆಗ ಅದರಲ್ಲಿ ಒಂದು ಪಾಲು ಅವನ ಮಿತ್ರನಿಗೆ. ಉಳಿದದ್ದು ದಾರಿಯಲ್ಲಿ ಅವನ ಉದರಕ್ಕೆ!

ಗಣೇಶನನ್ನು ನೋಡುವಾಗಲೆಲ್ಲ ನರಸಿಂಹಭಟ್ಟರಿಗೆ ತಮ್ಮ ಬಂಧುಗಳಲ್ಲಿ ಯಾರೋ ಒಬ್ಬನನ್ನು ನೋಡಿದಂತೆ ಆಗುತ್ತಿತ್ತಂತೆ. ಆ ಕಾರಣದಿಂದಲೋ ಅಥವಾ ಅವನು ನಿಷ್ಠೆಯಿಂದ ಮಾಡುವ ಕೆಲಸಗಳಿಂದಲೋ ಅವರಿಗೆ ಅವನನ್ನು ತಮ್ಮಲ್ಲಿಯೇ ಅಡಿಗೆಗಾಗಿ ಉಳಿಸಿಕೊಳ್ಳುವ ಆಸೆ. ಆದರೆ ಅವರ ಹೆಂಡತಿ ಸರಿಯಾಗಿ ಚೇತರಿಸಿಕೊಂಡಮೇಲೆ ಗಣೇಶನೇ ಹೇಳಿದ:

"ನಾನಿಲ್ಲದೇಯಿದ್ದರೆ ಮನೆಯಲ್ಲಿ ಅಪ್ಪನಿಗೆ ತುಂಬ ಕಷ್ಟ. ಏನಾದರೂ ವಿಶೇಷಗಳಿದ್ದ ದಿನಗಳಲ್ಲಿ ಅಗತ್ಯವಿದ್ದರೆ ಹೇಳಿಕಳುಹಿಸಿ, ಬಂದು ಸಹಾಯ ಮಾಡ್ತೇನೆ."

## 15

ಮನೆ ಪೂರ್ಣವಾಗಿ ಹಂಚು ಹೊದೆಯಿಸುವ ಕೆಲಸಗಳೂ ಮುಗಿದವು. ಒಂದು ಉದ್ದವಾದ ಜಗಲಿ, ಅದರ ಒಂದು ಪಾರ್ಶ್ವದಲ್ಲಿ ಒಂದು ಕೋಣೆ, ಒಳಗೆ ದೇವರ ಕೋಣೆ, ಬದಿಯಲ್ಲಿ ಒಂದು ಸಣ್ಣ ಕೋಣೆ ಹಾಗೂ ಅಡಿಗೆಮನೆ, ಹಿಂಭಾಗ ಮಾಡನ್ನು ಇಳಿಸಿ ಕಟ್ಟಿದ ಜಗಲಿ. ನೋಡುವದಕ್ಕೆ ಭವ್ಯ ಬಂಗಲೆ ಅಲ್ಲದಿದ್ದರೂ ಕೆಂಪು ಹಂಚನ್ನು ಹೊದೆಯಿಸಿದ ಆ ಪುಟ್ಟ ಮನೆ ಬಹಳ ಮೆಚ್ಚಿಗೆ

ಯಾಗುವಂತಿತ್ತು. ಗಣೇಶನ ಸಂಭ್ರಮ, ಎಳೆ ಹೃದಯದ ಸಂತೋಷ —ಯಾರೊಂದಿಗೆ ಹೇಳಿಕೊಳ್ಳಲಿ, ಯಾರೊಂದಿಗೆ ಹೇಳಿಕೊಳ್ಳದಿರಲಿ ಎನ್ನುವಂತಾಗಿಬಿಟ್ಟಿತು. ಒಳಹೊರಗೆ ಎಷ್ಟು ಓಡಾಡಿದರೂ ಸಾಲದು, ಕಿಟಕಿ ಬಾಗಿಲುಗಳನ್ನು ಹೇಗೆ ನೋಡಿದರೂ ಮನ ತಣಿಯದು. ಜೋಮ, ಹನುಮರನ್ನು ಕರೆದುಕೊಂಡು ಬಂದು ದೂರದಿಂದಲೇ ತೋರಿಸಿದ ಮನೆಯನ್ನು. ತನ್ನ ಒಡೆದ ಕಾಲು, ಪಾದ, ಕೈಬೆರಳುಗಳನ್ನು ಅವರಿಗೆ ತೋರಿಸುತ್ತ ತನ್ನ ರಟ್ಟೆಯನ್ನು ಬಿಗಿಗೊಳಿಸಿ "ನನ್ನ ಪರಿಶ್ರಮದ ಫಲ ನೋಡಿದ್ರೇನೋ" ಎಂದ ಹೆಮ್ಮೆಯಲ್ಲಿ.

ಇನ್ನು ಹದಿನೈದೇ ದಿನಗಳಲ್ಲಿ ಮನೆ ಗೃಹಪ್ರವೇಶ. ಅದಕ್ಕೆಂದು ನಡೆದಿದೆ ತಯಾರಿ. ಜಗಲಿಗೆ ಹೊಂದಿಕೊಂಡಿದ್ದ ಕೋಣೆ ತನಗೆ ಎಂದು ಮನೆ ಅರ್ಧ ಕಟ್ಟಿದಾಗಲೇ ಹೇಳಿದ್ದ ಗಣೇಶ. ಅದು ತನ್ನದೇ ಕೋಣೆಯೆಂಬ ಮೋಹದಲ್ಲಿ ಬಹಳ ಮುತುವರ್ಜಿಯಿಂದ ಇಷ್ಟು ದಿನವೂ ನೋಡುತ್ತಲೇ ಬಂದಿದ್ದಾನೆ. ಹಂಚು ಹೊದೆಯಿಸಿದಮೇಲೆ ಇನ್ನಷ್ಟು ಹೆಚ್ಚಿದೆ ಕೋಣೆಯ ಅಂದ. ಶಂಕರ, ಸುನಂದೆ ಇಲ್ಲಿಯೇ ಬಂದಿಳಿಯುವಂತಿದ್ದರೆ ಈ ಕೋಣೆ ತಮಗೆ ಮೂವರಿಗೆ ಸಾಕು. ಎಷ್ಟು ಖುಷಿಯಲ್ಲಿರಬಹುದು. ಗೃಹಪ್ರವೇಶದ ಹೊತ್ತಿಗೆ ಅವರಿಗೂ ಮುಗಿದಿರುತ್ತದೆ ಶಾಲೆಯ ಪರೀಕ್ಷೆ. ಇಲ್ಲಿಗೆ ಬಂದು ಹೊಸ ಮನೆಯಲ್ಲಿ ಒಂದು ತಿಂಗಳಾದರೂ ಉಳಿದುಹೋಗುವಂತೆ ಹೇಳಬೇಕು ಅಪ್ಪನ ಹತ್ತಿರ. ತಾನೂ ಅಜ್ಜನ ಮನೆಗೆ ಹೋಗಲಿಲ್ಲ ಎನ್ನುವುದು ನೆನಪಾಯಿತು. ಈಗ ಅಮ್ಮ ಇದ್ದಿದ್ದರೆ....

ಈ ನಡುವೆ ಎರಡು ಬಾರಿ ನರಸಿಂಹಭಟ್ಟರ ಮನೆಗೆ ಅತಿಥಿಗಳು ಬಂದಿದ್ದಾರೆಂದು ಹೋಗಿಬಂದ ಅಡಿಗೆಗೆ. ಸುಮಿತ್ರ ಹೇಳಿರದೇಯಿದ್ದರೂ ತಾನೇ ಅವರ ಮನೆಯವರನ್ನೆಲ್ಲ ಆಹ್ವಾನಿಸಿದ ಗೃಹಪ್ರವೇಶಕ್ಕೆ. "ಊರಿಗೆಲ್ಲ ಔತಣವನ್ನೀಯಲು ಇಲ್ಲಿ ನಿನ್ನ ಅಪ್ಪ ಕೊಪ್ಪರಿಗೆ ಹೊನ್ನು ಮಾಡಿಟ್ಟಿಲ್ಲ" ಎಂದು ಸುಮಿತ್ರ ಹುಬ್ಬೇರಿಸಿ ಗದರಿಕೊಂಡಾಗ ಅವನಿಗಾಗಲಿಲ್ಲ ಹೆದರಿಕೆ.

ಗೋಪಣ್ಣನಿಗೆ ಹೊಟ್ಟೆಯಲ್ಲಿ ಹುಣಿಸೇಹಣ್ಣು ಕಿವುಚಿದ ಅನುಭವ. ಹಂಚುಗಳು ಎಲ್ಲಿಂದ? ಕೆರೆ ಮತ್ತು ಮನೆಕೆಲಸಗಳಿಗೆ ಹಣ ಎಲ್ಲಿಂದ? ಎಂದು ಎಲ್ಲವನ್ನೂ ಕೇಳಿದ ಗಣೇಶನನ್ನು. ತನಗೆ ತೋಚಿದ್ದನ್ನು ಹೇಳಿದ ಗಣೇಶ.

ಹೆಂಡತಿಯ ನಗಗಳನ್ನು ಒತ್ತೆಯಿರಿಸಿ, ಅಥವಾ ನೂರಿ ತಾನೂ ಇಂತಹದೇ ಹಂಚಿನ ಮನೆ ಕಟ್ಟಿಸಬೇಕು ಎಂದೂ ಹೇಳಿಕೊಂಡ.

"ಬೇವರ್ಸಿ ಒಬ್ಬನಿದ್ದಾನಲ್ಲ ಅವಳ ತಾಳಕ್ಕೆ ತಕ್ಕಂತೆ ಕುಣಿಯಲು! ಎಷ್ಟು ಸಾಲಮಾಡಿ ಮನೆ ಕಟ್ಟಿಸಿದ್ದಾನೋ?"—ಯಶೋದೆ ಗುರುಗುಟ್ಟಿದಳು ಬೆಕ್ಕಿನಂತೆ.

"ನಿಜ....ಆ ಬೇವರ್ಸಿ ಹೆಂಡಕುಡುಕನಾಗಿ ಇವಳನ್ನು ಹಾಕ್ಕೊಂಡು ಬಡೀಬೇಕಿತ್ತು....ಆಗ ತಿಳೀತಿತ್ತು ಇವಳಿಗೆ....ಪಾಪ, ತನ್ನ ಮಕ್ಕಳನ್ನು ಇನ್ಯಾರದೋ ಮನೇಲಿರಿಸಿ ಅವನು ಇಲ್ಲಿದ್ದಾನೆ ಇವಳ ಚಾಕರಿ ಮಾಡ್ತಾ!" ನಂಜು ಕಾರಿಕೊಂಡ ಗೋಪಣ್ಣ.

ಮೀಸೆ ಅಣ್ಣ ತನ್ನ ಹುರಿಮೀಸೆಯನ್ನು ಇನ್ನಷ್ಟು ಹುರಿಗೊಳಿಸುತ್ತ ಗಣೇಶನೊಂದಿಗೆ ಬಂದ ಮನೆ ನೋಡಲೆಂದು. ಹಳೆ ಮನೆಯಿಂದ ಸಾಮಾನು ಗಳನ್ನು ಅತ್ತಿತ್ತ ಸಾಗಿಸುತ್ತಿದ್ದ ಸುಮಿತ್ರಳ ಮುಖ ಕಠಿಣವಾಯಿತು. ಈ ಹುಡುಗನ ಬುದ್ಧಿಗೇನಾಗಿದೆ? ದಿನಕ್ಕೊಬ್ಬರಂತೆ ಯಾರನ್ನಾದರೂ ಮನೆಗೆ ಕರೆದುಕೊಂಡು ಬರುತ್ತಲೇ ಇದ್ದಾನೆ. ಮನೆಗೆ ಎಲ್ಲಿಯಾದರೂ ದೃಷ್ಟಿ ತಾಗಿ ಹೋದರೆ!

ಮೀಸೆ ಅಣ್ಣ ಎಲ್ಲ ಕೋಣೆಗಳನ್ನೂ ನೋಡಿ ವ್ಯಕ್ತಪಡಿಸಿದ ತನ್ನ ಹರ್ಷವನ್ನು. ಉದ್ದದ ಜಗಲಿಯ ತುದಿಯ ಕೋಣೆ ಕಂಡು ಇನ್ನಷ್ಟು ಮೆಚ್ಚಿಕೊಂಡ.

"ಮಠದ ಆಚಾರಿ ಬಂದಾಗ" ಗಣೇಶ ನಯವಾದ ಮಣ್ಣುಗೋಡೆಯ ಮೇಲೆ ಕೈಯಾಡಿಸಿ ಹೇಳಿದ: "ನನಗೊಂದು ಮಂಚ ಮಾಡಿಕೊಡೋ ಎಂದಿದ್ದೆ. ಪುರುಸೊತ್ತು ಆಗಲೇ ಇಲ್ಲ ಅವನಿಗೆ. ಆಹ್....ನೆಲ ನೋಡು ಎಷ್ಟು ನಯವಾಗಿದೆ! ಪೊಳಿಮಣೆಯಿಂದ (ಪೆಟ್ಟುಮಣೆ) ನೆಲವನ್ನು ಗುದ್ದಿ ಗುದ್ದಿ ನಾನೇ ಸರಿಮಾಡಿದ್ದು. ಇಲ್ಲಿ ಬಾ....ಇಲ್ಲಿ ಬಾ...." ಅವನನ್ನು ಕಿಟಕಿಯ ಬದಿಗೆ ಕರೆದೊಯ್ದು ತನ್ನ ದೇಹವನ್ನು ಅರ್ಧ ಓರೆಮಾಡಿ ಹೇಳಿದ: "ನೋಡು, ಆ ದೂರದ ಕಾಡನ್ನು. ಬೇಸಿಗೆಯಲ್ಲಿ ವ್ಹಾಹ್....ಎಷ್ಟು ಗಾಳಿ ಅಂತಿ. ಭಟ್ಟರ ಮನೆ ಫ್ಯಾನ್ ಇದರ ಮುಂದೆ ಯಾವ ಲೆಕ್ಕಕ್ಕೆ? ಇಲ್ಲೇ ನೆಲದ ತಂಪಿಗೆ ತಲೆ ಒರಗಿಸಿ ಮಲಗಿದರೆ ಸುಪ್ಪತ್ತಿಗೆಯೂ ಬೇಡ."

ಮೀಸೆ ಅಣ್ಣ ಅತ್ತಿತ್ತ ನೋಡಿದ. "ಒಟ್ಟು ಎಷ್ಟಾಯ್ತಂತೆ ಖರ್ಚು?"

"ನನಗೆ ತಿಳಿದಿಲ್ಲ. ದೊಡ್ಡಮ್ಮ ಎಲ್ಲಿ ಹೇಳ್ತಾಳೆ? ನಿಂಗೊತ್ತಿಲ್ಲ, ಮೀಸೆ ಅಣ್ಣ, ದೊಡ್ಡಮ್ಮನ ಕೋಣೆಯಲ್ಲಿ ಒಂದು ಮರದ ಪೆಟಾರಿ ತುಂಬಾ (ತನ್ನ ತಲೆಯನ್ನು ಅಲ್ಲಾಡಿಸಿ ಕೈ ಅಗಲಿಸುತ್ತ) ನೋಟಿನ ಕಟ್ಟುಗಳ ರಾಶಿರಾಶಿ ಇದೆ. ಹೊರಗೆ ಬಾ. ಹಳೆಮನೆ ಅಗೆದುತೆಗೆದು ಅಂಗಳ ಮಾಡಬೇಕಂತೆ. ದನದ ಕೊಟ್ಟಿಗೆಗೆ ಹೋಗೋಣವಾ. ಮುಂದಿನ ವರ್ಷ ಈ ಕೊಟ್ಟಿಗೆಯನ್ನೂ ಅಳಿದು ಹೊಸದು ಕಟ್ಟಬೇಕಂತೆ." ಗಣೇಶ ದನದ ಕೊಟ್ಟಿಗೆಗೆ ಅವನನ್ನು ಕರೆದೊಯ್ದು ತಾನು ಜೈಪಣೆಯ ಮೇಲೆ ಹಾರಿ ಕೋಣಗಳ ಕೋಡು ಸವರಿದ.

"ಹೆದರಬೇಡ. ಹತ್ತಿರ ಬಾ. ಒಂದಿಷ್ಟು ಹಾಯದ ಪಾಪದ ಕೋಣಗಳು."

ಮೀಸೆ ಅಣ್ಣ ಹತ್ತಿರ ಹೋಗಲು ಹೆದರಿಹೋದ ಎತ್ತರದ ಕೋಣಗಳನ್ನು ನೋಡಿ. "ಹ್ಯಾಗೆ ಗದ್ದೆಯನ್ನು ಹೂಟೆಮಾಡುತ್ತಿ ಇವುಗಳಿಂದ?"

"ಹಸುಗಳಿಗಿಂತ ಕಡೆ ಈ ಎರಡೂ ಕೋಣಗಳು."

"ನಿಜವಪ್ಪಾ. ನೀನು ಹಸುಮಗುವಿಗಿಂತಲೂ ಕಡೆ! ಸುಮಿತ್ರಕ್ಕನ ಮಗನೇ ನೀನಾಗಿದ್ದರೆ ಇಷ್ಟು ಕಷ್ಟದ ಕೆಲಸ ಎಲ್ಲಿರ್ತಿತ್ತು ನಿನಗೆ? ನೀನೋ ಕಂಡವರ ಮಗ. ನಿನ್ನಪ್ಪನೋ ಇಲ್ಲಿ ನಾಲಿಗೆ ಸತ್ತವ. ಪ್ರಾರಬ್ಧವಪ್ಪ ಪ್ರಾರಬ್ಧ!"

ಗಣೇಶನ ಮುಖ ಚಿಕ್ಕದಾಯಿತು. ಇದ್ದಕ್ಕಿದ್ದಂತೆ ಮರುಕಳಿಸಿತು ಅಮ್ಮನ ನೆನಪು. ಮೀಸೆ ಅಣ್ಣ ಅವನ ಬದಲಾದ ಮುಖವನ್ನು ಓದದೆ ಹೇಳಿದ:

"ಅದೇನೇ ಇರಲಿ, ನನ್ನ ಅಂಗಡಿಯಲ್ಲಿ ನಿನ್ನ ಸಾಲದ ಬಾಲ ಬೆಳೀತಾ ಇದೆ. ಮೊದ್ಲು ತೀರಿಸು ಅದನ್ನು. ಹಾಂ, ನಾನೇ ಸುಮಿತ್ರಕ್ಕನನ್ನು...."

"ಬೇಡ ಮಹರಾಯ!" ಅಂಗಲಾಚಿದ ಗಣೇಶ. ಎಲ್ಲಿ ತನ್ನ ಗುಟ್ಟು ಹೊರಬೀಳುತ್ತದೆಯೋ ಎಂದು, "ಖಂಡಿತಾ ತೀರಿಸ್ತೇನೆ. ಭಟ್ಟರ ಮನೆಯಲ್ಲಿ ಖಾಯಂ ಅಡಿಗೆಕೆಲಸ ಸಿಗುತ್ತದೆ ನನಗೆ....ನಾನೇ ಹೋಗಿಲ್ಲ ಅಲ್ಲಿಗೆ."

"ಹೋ ಹೋ! ಇಲ್ಲಿ ಹೆಣವಾಗಿ ದುಡಿಯುವುದಕ್ಕಿಂತ ಅಲ್ಲಿ ಕೆಲಸ ಒಪ್ಪಿಕೋ. ಶ್ರೀಮಂತರ ಮನೆ ನೆರಳು ಸಿಕ್ಕಿದರೆ ಬೇಸಿಗೆಯಲ್ಲಿ ನೀರು

ಸಿಕ್ಕಂತೆ!"

ಮೀಸೆ ಅಣ್ಣ ಮತ್ತೆ ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ಹೊರಟು ಹೋದಮೇಲೆ ಗಣೇಶ ಅರೆಗಳಿಗೆ ನಿಂತಿದ್ದ ಅಲ್ಲಿಯೇ. ಅಷ್ಟರಲ್ಲಿ ಯಾರದೋ ಕೈಗಳು ಬಿಗಿಯಾಗಿ ಅವನ ಅಂಗಿಯ ಕಾಲರನ್ನು ಹಿಡಿದವು. ಹೊರಳಿ ನೋಡುವ ಮೊದಲೇ ಬಿದ್ದಿತ್ತು ಕೆನ್ನೆಯ ಮೇಲೆ ಒಂದೇಟು.

"ಕೊಬ್ಬಿದ ಗೂಳಿ! ಆ ಮೂರ್ಖನ ಹತ್ರ ಏನೇನು ಜೊಗಳೆಕೊಂಡೆ?"

ಸುಮಿತ್ರಳ ಸ್ವರದಿಂದ ಹೌಹಾರಿದ ಗಣೇಶ ಅವಳ ಕೈಯನ್ನು ನೂಕಿ ಸರಿದ ಹಿಂದಕ್ಕೆ. ಅವಳ ಮುಖದಲ್ಲಿ ಕ್ರೋಧ. ಹುಬ್ಬುಗಳು ಕೂಡಿವೆ. ಕೈಯಲ್ಲಿ ಗಡಿಗೆಯ ಮುಖ, ಹರಕುಬಟ್ಟೆಯನ್ನು ತೊಡಿಸಿದ ಉದ್ದ ಕೋಲಿನ ಬೆರ್ಚಪ್ಪ. ಅವಳು ಅದನ್ನು ಮನೆಯ ಮಾಡಿಗೆ ಒರಗಿಸಿಟ್ಟು ಗುಡುಗಿದಳು ಜೋರಾಗಿ:

"ಊರವರ ಮುಂದೆ ಕಹಳೆ ಹಿಡ್ಕೊಂಡು ಮನೆ ಸುದ್ದಿಯನ್ನೆಲ್ಲ ಹೇಳಿ ನನ್ನ ಮರ್ಯಾದೆ ಮೂರ್ಕಾಸು ಮಾಡ್ತ ಇದ್ದೀಯಾ? ನಿನ್ನನ್ನು ನಾನೀಗ ಒಲೆಗೆ ತುರುಕಿಸಿ ಕೋಡಲೆಯಿಂದ ಎಳೀತ ಇದ್ದೇನೆಂತ ಕಾಣುತ್ತೆ. ಹಾಗೆ ಹೇಳು."

"ನಿನ್ನನ್ನು ಯಾರ ಹತ್ತಿರವೂ ದೂರಲಿಲ್ಲ ನಾನು."

"ಕಿವಿಯಾರೆ ನಾನೇ ಕೇಳಿಸಿಕೊಂಡೆನಲ್ಲೋ. ಬೀದಿನಾಯಿಗಿರುವಷ್ಟೇ ಯೋಗ್ಯತೆಯಿರುವ ನಿನ್ನನ್ನು ಅಕ್ಕುವಿನಂತೆ ನಾನೂ ನೋಡಿಕೊಂಡದ್ದು ಹೆಚ್ಚಾಯ್ತು! ಈಗಲೇ ಹೇಳಿದ್ದೇನೆ, ಎರಡನೇ ಬಾರಿ ಎಚ್ಚರಿಸಿದ್ದೇನೆ. ಇಲ್ಲಿ ವಿಷಯ ಚಾ, ಚೂ ಅಂದರೆ ನಾನೇನು ಸುಮ್ಮನಿರುವವಳಲ್ಲ, ಒದ್ದು ಓಡಿಸಿ ಬಿಡ್ತೇನೆ, ನೋಡ್ಕೋ!".

ಗಣೇಶ ಬಾಯಿ ಮುಚ್ಚಿಕೊಂಡು ತೆಪ್ಪಗೆ ಸರಿದ ಅಲ್ಲಿಂದ. ಅವನನ್ನು ಇರಿಯುವಂತೆ ನೋಡಿತು ಗಡಿಗೆಮುಖದ ಬೆರ್ಚಪ್ಪ. ಅಷ್ಟರಲ್ಲಿ ಗೋರಟೆಯ ಗಿಡಗಳ ಬದಿಯಿಂದ ಸುಮನಳ ಸ್ವರ ಕೇಳಿಸಿತು: "ಬಾರೋ ಇಲ್ಲಿ.... ಇಲ್ನೋಡು, ಹೋ!...."

ಅತ್ತ ತಿರುಗದ ಗಣೇಶ. ಅವಳ ಕೈಯಲ್ಲಿ ಒಂದು ಉದ್ದದ ದಾರ. ಅದರ ತುದಿಗೆ ಪತಂಗವನ್ನು ಕಟ್ಟಿ ಗಾಳಿಯಲ್ಲಿ ಹಾರಿಸುತ್ತಿದ್ದಾಳೆ ಅತ್ತ ಇತ್ತ. ಅದು ನೂಲಿನಿಂದ ತಪ್ಪಿಸಿಕೊಳ್ಳಲು ಮತ್ತು ಆ ಬಂಧನದಿಂದ ಹಾರಿ

ಹೋಗಲು ರೆಕ್ಕೆಯನ್ನು ಪಟಪಟನೆ ಹೊಡೆದುಕೊಳ್ಳುತ್ತ ಗಿಂಯ್‌....ಗಿಂಯ್‌ ಸದ್ದು ಮಾಡುತ್ತ ಇದೆ.

"ಎಲ್ಲಿಂದ ಹಿಡಿದಿದ್ದಿಯೋ ಇದನ್ನು? ನಂಗೆ ಕೊಡು." ಹತ್ತಿರ ಬಂದ.

"ಮಾವಿನ ಮರದ ಮೇಲಿತ್ತು, ಹೇಗೋ ಕಷ್ಟಪಟ್ಟು ಹಿಡ್ಕೊಂಡೆ. ನಿಂಗೆ ಬೇಕ? ಬೇಕಿದ್ದರೆ ನೀನೂ ಹಿಡ್ಕೊ ಇನ್ನೊಂದನ್ನು, ಇದು ನನ್ನದು...." ಸುಮನ ಅದನ್ನು ನೂಲಿನಿಂದ ಅತ್ತಿತ್ತ ಎಳೆಯುತ್ತ ರೆಕ್ಕೆ ಹೊಡೆಯುವದನ್ನೇ ನೋಡಿ ನಕ್ಕಳು.

"ಗಣೇಶ, ಮೇಯೋದಕ್ಕೆ ಎಮ್ಮೆ ಕರುವನ್ನು ಬಿಟ್ಟಿದ್ದೇನೆ— ಗುಂಡಿಗೆತ್ಲಾಗಾದರೂ ಹೋಗಿ ಬಿದ್ದರೆ ಸಂಜೆ ಎಮ್ಮೆ ಹಾಲು ಸೊರಿಸದು. ಹೋಗಿ ನೋಡಿ ಅದನ್ನು ಕಟ್ಟಿಹಾಕು." ಎಲ್ಲಿಂದಲೋ ಹೇಳಿದಳು ಸುಮಿತ್ರ.

ಅವನು ಸ್ವರ ಬಂದ ದಿಕ್ಕಿಗೆ ತಿರುಗಿದ, ಯಾರೂ ಕಾಣಿಸಲಿಲ್ಲ. ಆದರೂ ಆಜ್ಞೆಯಾಗಿದೆ, ಎಮ್ಮೆ ಕರುವನ್ನು ಹುಡುಕಿ ತಂದು ಕೊಟ್ಟಿಗೆಯಲ್ಲಿ ಕಟ್ಟಲೇ ಬೇಕು. ಅವನ ದೃಷ್ಟಿ ಸುಮನ ಹಾರಿಸುತ್ತಿದ್ದ ಪತಂಗದತ್ತ ಹರಿಯಿತು. ಸ್ವತಂತ್ರವನ್ನು ಬಯಸುವ ಜೀವಿ....ಸಹಿಸುತ್ತಿದೆ ಮೂಕವೇದನೆಯನ್ನು. ಅವನ ಕಿವಿಗಳಿಗೆ ಕೇಳಿಸಿದಂತಾಯಿತು, ಯಾವದೋ ಭಾರವಾದ ಕಾಲ ಸರಪಳಿಗಳ ಝಣ ಝಣ ಸದ್ದು. ನೂಲಿನಂತೆ ಕಾಲಿನ ಸರಪಳಿಗಳೂ ತನ್ನನ್ನು ಇಲ್ಲಿ ಬಿಗಿಯಾಗಿ ಕಟ್ಟಿಹಾಕಿಬಿಟ್ಟಿವೆ. ಅತ್ತಿತ್ತ ಸ್ವತಂತ್ರವಾಗಿ ಚಲಿಸುವದೂ ಸಾಧ್ಯವಿಲ್ಲ ತನಗೆ. ಅವನು ಚಂಗನೆ ನೆಗೆದ ಸುಮನಳತ್ತ, "ಯಾಕೆ ಅದನ್ನು ಹಿಂಸಿಸುತ್ತಿದ್ದಿ. ಬಿಡು, ಹಾರಿಹೋಗ್ಲಿ."

"ಬಿಡ್ತೀನೆ, ಲೊಟ್ಟೆ." ಮೂಗಿನ ಹೊಳ್ಳೆಗಳನ್ನು ಅರಳಿಸಿ, ನಾಲಗೆ ಹೊರಚಾಚಿ ಹುಡುಗಿ ಅಣಕವಾಡಿದಾಗ ರೊಚ್ಚಿಗೆದ್ದ ಅವನು ಕೈಯಲ್ಲಿದ್ದ ದಾರವನ್ನು ಕಿತ್ತೆಳೆದು ತುಂಡುಮಾಡಿ ಪತಂಗವನ್ನು ಮುಕ್ತಗೊಳಿಸಿದ.

"ಹೋ!...." ಅರಚಿದಳು ಸುಮನ. "ನಂಗೆ ಅದು ಬೇಕೇಬೇಕು."

"ಯಾರಿಗೂ ಹಿಂಸೆ ಕೊಡಬಾರದು ಅನ್ನುವದೂ ತಿಳಿಯದೆ ನಿನಗೆ?"

ಸುಮನ ಅವನ ಶರ್ಟನ್ನು ಹಿಡಿದು ದಬದಬನೆ ಗುದ್ದಲಾರಂಭಿಸಿದಳು. ಅವನೂ ಜೋರಾಗಿ ನೂಕಿದ ಅವಳನ್ನು. ಹೊಡೆದಾಡಿಕೊಂಡರು ಇಬ್ಬರೂ. ಅವಳಿಗೆ ದುಃಖವೇ ದುಃಖ. ಕಷ್ಟಪಟ್ಟು ಹಿಡಿದು ಕಟ್ಟಿಕೊಂಡಿದ್ದು ಬಿಡಿಸಿ

ಕೊಂಡು ಹಾರಿಹೋಗಿದೆ. ಜೀರುಂಡೆ, ಪಾತರಗಿತ್ತಿ, ಗುಬ್ಬಚ್ಚಿಮರಿಗಳನ್ನು ಹಿಡಿಯುವದೆಂದರೆ ಅವಳಿಗೆ ಎಲ್ಲಿಲ್ಲದ ಖುಷಿ. ಯಾವುದನ್ನು ಹಿಡಿದರೂ ಕೆಲ ಸಮಯ ಅದರೊಡನೆ ಆಟ. ಅನಂತರ ಮುಕ್ತಗೊಳಿಸುತ್ತಾಳೆ. ಅಥವಾ ತನ್ನ ಕೋಣೆಯಲ್ಲಿ, ಹೊರಗಿನ ಕೊಟ್ಟಿಗೆಯಲ್ಲಿ ಅದನ್ನು ಇಟ್ಟುಕೊಂಡು ಅದು ಪಡುವ ಕಷ್ಟವನ್ನು, ಅಂದವನ್ನು ನೋಡಿ ಹಿಗ್ಗುತ್ತಾಳೆ. ಅವಳ ಹತ್ತಿರವಿದೆ ಒಂದು ಪೆಟ್ಟಿಗೆ. ಅದರ ತುಂಬ ನವಿಲುಗರಿ, ಗುಬ್ಬಚ್ಚಿಯ ರೆಕ್ಕೆಪುಕ್ಕ, ಕೋಳೀ ಗರಿ, ಕಾಗೇಗರಿ ಇನ್ನು ಏನೇನೋ ಪಕ್ಷಿಗಳದ್ದೇ ಸಾಮ್ರಾಜ್ಯವಿದೆ. ಬಣ್ಣದ ಹಕ್ಕಿಮರಿಗಳು ಸಿಕ್ಕಿದರೆ ಅವನ್ನು ಸಾಕಷ್ಟು ಸತಾಯಿಸಿ ಅವು ಸತ್ತಮೇಲೆ ರೆಕ್ಕೆಪುಕ್ಕ ಕೂಡಿಡುವದು ಅವಳ ಅಭ್ಯಾಸ. ಮಳೆಗಾಲದಲ್ಲಿ ಸೂಳೆಹುಳುಗಳನ್ನು ರಾಶಿಗಟ್ಟಲೆ ಹಿಡಿದು ಒಂದು ದಿನ ಮನೆಯೊಳಗೆ ತಂದಾಗ ತಲೆತಲೆ ಜಜ್ಜಿ ಕೊಂಡಿದ್ದಳು ಅವಳ ಅಮ್ಮ. ಅವನ್ನೆಲ್ಲ ಹೊರಗೆ ಸಾಗಿಸಬೇಕಾದರೆ ಸಾಕೋ ಸಾಕಾಗಿ ಹೋಗಿತ್ತು. ಇಂತಹ ಕೆಲಸಗಳಿಗೆ ಗಣೇಶನಿಂದಲೂ ಸಹಕಾರ! ಆದರೆ ಈ ದಿನ ಮಾತ್ರ ಅವನಿಂದ ಬಂಧನಕ್ಕೊಳಗಾದ ಆ ಜೀವಿಯನ್ನು ನೋಡಲಾಗಲಿಲ್ಲ.

"ನನ್ನ ಪತಂಗವನ್ನು ಈಗಲೇ ಹಿಡಿದುಕೊಡು." ಅವನನ್ನು ಗುದ್ದುತ್ತ ಅರಚಿಕೊಂಡಳು ಸುಮನ, ಅವಳ ಸ್ವರ ತಾರಕಕ್ಕೇರಿತು, "ಅಮ್ಮಾ...."

"ನಿನ್ನನ್ನೂ ಹೀಗೆ ಕಟ್ಟಿಹಾಕಿ ಗೋಳಾಡಿಸುತ್ತೇನೆ ನೋಡು. ನಿನ್ನ ಅಮ್ಮನಿಂದ ಅಗಲಿಸಿ ಕುಣಿಸ್ತೇನೆ ಹಿಂದೆಮುಂದೆ. ನೀನು ಬೊಬ್ಬೆ ಹೊಡಿಯು ವಂತೆ ಮಾಡ್ತೇನೆ...." ಅವಳ ಮೊಣಗಂಟನ್ನು ನೂಕಿ ಹಿಡಿದೆಳೆದ ಕೂದಲನ್ನು.

"ನೋಡಮ್ಮಾ ಇಲ್ಲಿs....s...." ಗಂಟಲಿನಾಳದಿಂದ ಹೊರಬಂದ ಅವಳ ಸ್ವರವನ್ನು ಕೇಳಿ ಓಡಿಬಂದಳು ಅವಳ ಅಮ್ಮ. ಗಣೇಶ ಭೂತದರ್ಶನ ವಾದವನಂತೆ ಅವಳ ಕೂದಲನ್ನು ಬಿಟ್ಟು ಹಿಂದೆ ಸರಿದು ಮೂಗಿನ ಹೊರಳೆ ಗಳನ್ನು ಅರಳಿಸಿ ಹೆಬ್ಬೆರಳನ್ನು ಕುಣಿಸಿ "ಮಮ್ಮಾs...." ಎಂದು ತಾನೂ ಅಣಕನನ್ನಾಡಿ ಓಡಿದ, ಎಮ್ಮೆಕರುವನ್ನು ಹುಡುಕಿಕೊಂಡು ಬರಲು.

## 16

ಕೃಷ್ಣಯ್ಯನನ್ನು ಮದುವೆಯಾಗುವ ಮೊದಲು ತನ್ನ ತವರುಮನೆಯಿಂದ ಸಾಕಷ್ಟು ಹೇಳಿಸಿಕೊಂಡು ಅನಂತರ ಅವರಿಂದ ದೂರ ಸರಿದಿದ್ದ ಸುಮಿತ್ರೆ ಹಳೆಯ ಕಹಿಯನ್ನು ಮರೆತು ಅವರಿಗೆಲ್ಲ ಗೃಹಪ್ರವೇಶದ ಕರೆಯೋಲೆಯನ್ನು ಕಳುಹಿಸಿದಳು. ಬೇರೆ ಮನೆ ಮಾಡಿದಂದಿನಿಂದ ಅಕ್ಕ, ತಾಯಿ, ತಂದೆ— ಯಾರೊಬ್ಬರೂ ಅವಳ ಮನೆ ಹೊಸ್ತಿಲನ್ನು ತುಳಿದಿರಲಿಲ್ಲ. ಹೊರಗೆ ಮುಖ ಕಾಣಿಸಿದರೂ 'ಹೇಗಿದ್ದಿ ?' ಎಂದು ವಿಚಾರಿಸಿದವರಲ್ಲ. ಇನ್ನೂ ಅವರ ಸಿಟ್ಟು ಇಳಿದಿಲ್ಲ. ಬಹಳ ಬೇಗನೆ ಮೇಲೆದ್ದ ಮನೆಯನ್ನು ನೋಡಿದರೂ ನೋಡದವ ರಂತೆ ಇದ್ದಾರೆ. ನನಗೇನಾಗಿದೆ? ವಿನಾಕಾರಣ ವೈರತ್ವವನ್ನು ಬೆಳೆಸಬಾರದು. ಕರೆಯೋಲೆ ಕಳುಹಿಸಿದರೆ ಬಂದಾರು ಎಂದೆನ್ನಿಸಿತು. ತಾನೇ ತಂದೆತಾಯಿಗೆ ಹೇಳಿಬರುತ್ತೇನೆ ಎಂದು ಮನೆಯಿಂದ ಹೊರಟವಳಿಗೆ ಅಕ್ಕನ ನೆನಪಾಗಿ ಅವಳ ಬಾಯಿಗೆ ಹೆದರಿ ಹಿಂಜರಿದಳು. ತನ್ನ ಮೊದಲಿನ ಮಾವನವರಿಗೂ ಬಳಗದವ ರಿಗೂ ತಲುಪಿಸಿದಳು ಸುದ್ದಿಯನ್ನು.

ಆದರೆ ಕೃಷ್ಣಯ್ಯ ತನ್ನ ಬಳಗದವರನ್ನು ಆಹ್ವಾನಿಸುತ್ತೇನೆ ಎಂದಾಗ ಪ್ರಾರಂಭವಾಯಿತು ಪ್ರತಿಭಟನೆ. ಅವನ ಎಲ್ಲ ಬಳಗದವರಿಂದ ದೂರವೇ ಉಳಿದಿದ್ದ ಅವಳಿಗೆ ಯಾರೊಡನೆಯೂ ಬಾಂಧವ್ಯ ಇಲ್ಲ. ಗಣೇಶ ಹೇಗೆ ಪರಕೀಯನೋ ಅದೇ ರೀತಿಯಲ್ಲಿ ಕೃಷ್ಣಯ್ಯನ ಬಳಗದಲ್ಲಿ ಅವಳ ದೃಷ್ಟಿ ಯಲ್ಲಿ ಪರಕೀಯರು! ಧರ್ಮ ಪ್ರಕಾರ ಅವಳು ಕೃಷ್ಣಯ್ಯನ ಕುಟುಂಬಕ್ಕೆ ಸೇರಿದವಳು. ಆದರೆ ಅವನು ಅವಳ ಆಸ್ತಿಯನ್ನು ನೆಚ್ಚಿಕೊಂಡು ಇಲ್ಲೇ ಕುಳಿತದ್ದರಿಂದ ಅವನ ಕುಟುಂಬದವರು ಬೇರೆಯಾಗಿದ್ದರು ಅಷ್ಟೇ! ಒಂದು ಬಾರಿ ಅವನ ಮಾವ, ಚಿಕ್ಕತಂದೆ ಬಂದಾಗ ಅವರೊಡನೆ ಮೂಕಿಯಂತೆ ವರ್ತಿಸಿದ್ದಳು. ಈಗ ಕೃಷ್ಣಯ್ಯ ಅಪ್ಪುವಿನ ತವರುಮನೆಯವರನ್ನು ಕರೆಯು ತ್ತೇನೆ ಎನ್ನುತ್ತಿದ್ದಾನೆ. ಮುರಿದ ಸಂಬಂಧ ಬೆಳೆಸಬಾರದು. ಅವಳ ಮಕ್ಕಳೂ ಇಲ್ಲಿಗೆ ಬರಬಾರದು....ಅದಕ್ಕೆ ಅವಕಾಶ ಕೊಟ್ಟರೆ ತನಗೇ ಕಷ್ಟ.

ಇಬ್ಬರಲ್ಲಿಯೂ ಏರಿತು ಮಾತಿನ ಬಿಸಿ. ಕೃಷ್ಣಯ್ಯ ಈತನಕ ಅವಳ ಯಾವ ಮಾತಿಗೂ ಪ್ರತಿಭಟನೆ ತೋರಿಸಿರಲಿಲ್ಲ. ಈಗ ಮಾತ್ರ ತಡೆಯಾಗಲಿಲ್ಲ.

"ಇಷ್ಟು ಚೆಂದದ ಮನೆಯನ್ನು ನಿನ್ನ ಮನಸ್ಸಿಗೆ ಒಪ್ಪುವಂತೆ ಕಟ್ಟಲು ನಾನು-ಗಣೇಶ ನಮ್ಮ ಎಲುಬುಗಳನ್ನು ಪುಡಿಪುಡಿ ಮಾಡಿದ್ದೇವೆ. ಈ ಮಣ್ಣಿನಲ್ಲಿ ಬೆರೆತಿವೆ ನಮ್ಮ ಜೀವರು. ತೋನ್ನೆಯಿಂದ ಬಂದು ಎಲ್ಲರೂ ನೋಡಲಿ" ಎಂದ ಕ್ರೋಧದಲ್ಲಿ.

"ಕೆಲಸ ಮಾಡಿದ್ದರಲ್ಲಿ ಯಾವ ತಪ್ಪೂ ಇಲ್ಲ. ಮನೆ ಕಟ್ಟಬೇಕಾದ್ದು ಹೆರವರಿಗಲ್ಲ. ನಮಗಾಗಿ....ಅದೇನು ಮಹಾ."

"ಹಾಗಾದರೆ ನೀನೂ ನಿನ್ನ ಬಳಗದವರನ್ನು ಆಹ್ವಾನಿಸಬೇಡ. ಒಳಗೆ ಹಾಲು ಉಕ್ಕಿಸಿ ಗೃಹಪ್ರವೇಶ ಮುಗಿಸೋಣ. ಆಗ ಇಬ್ಬರಿಗೂ ಇಲ್ಲ ಜಗಳ."

"ಅದಾಗದು....!"

"ಅಂದಮೇಲೆ ನಮ್ಮ ನಮ್ಮ ಸಂತೋಷಕ್ಕೆ ನನ್ನವರೂ ನಿನ್ನವರೂ ನಾಲ್ಕು ಜನ ಬರಲಿ ಇಲ್ಲಿಗೆ....ಯಾಕೆ ಹೆದರಿಕೆಯೇ?"

ಸುಮಿತ್ರ ತನ್ನ ಹಟವನ್ನು ಬಿಡಲಿಲ್ಲ. ಈರ್ವರ ಚರ್ಚೆಯೂ ಏರಿತು. ಮೂಕಪ್ರೇಕ್ಷಕನಾದ ಗಣೇಶ. ಕೊನೆಗೊಮ್ಮೆ ಕೃಷ್ಣಯ್ಯ ಸೋತು ನುಡಿದ:

"ಮನಸ್ಸಿಗೆ ಹೇಗೆ ತೋಚುತ್ತದೋ ಹಾಗೆ ಮಾಡು. ಆದರೆ ನಾನೂ ಒಬ್ಬ ಮನುಷ್ಯ. ನಿನ್ನ ಗೌಜುಗದ್ದಲಗಳು ಮುಗಿಯುವ ತನಕ ಗಣೇಶ ನನ್ನು ಕರ್ಕೊಂಡು ಬೇರೆಲ್ಲಿಯಾದರೂ ಹೋಗ್ತೇನೆ....ಅಜ್ಞಾತವಾಸಕ್ಕೆ!"

ಆದರೆ ಗಣೇಶ ಕಾದ ಎಣ್ಣೆಗೆ ಬಿದ್ದ ಸಾಸಿವೆಯಂತೆ ಸಿಡಿದೆದ್ದ, "ದೊಡ್ಡಮ್ಮ, ನಾನಿರಲೇಬೇಕು ಗೃಹಪ್ರವೇಶಕ್ಕೆ. ಹೋಮ, ಮಂತ್ರ, ಎಲ್ಲ ಕೇಳಬೇಕು. ನೋಡಬೇಕು. ನೀನು ಹೆಡೆಮುರಿಗೆ ಕಟ್ಟಿ ದೂರ ಎಲ್ಲಾದರೂ ದೊತ್ತು ಹಾಕಿದರೂ ತೆವಳಿಕೊಂಡುಬಂದು ಇಲ್ಲೆ ಬಿದ್ದುಕೊಳ್ತೇನೆ ಆ ದಿನ."

'ಭಲೆ!' ಎಂದುಕೊಂಡ ಕೃಷ್ಣಯ್ಯ. ಸಮಾಜದ ಪ್ರಗತಿಯಲ್ಲಿ ಹೊಸ ಹೆಜ್ಜೆಯನ್ನು ಇರಿಸಿದಮೇಲೆ ಹೆಜ್ಜೆಹೆಜ್ಜೆಗೂ ಹೆದರಿಕೊಂಡು ಬಾಳ್ವೆಯನ್ನು ನಡೆಸಬೇಕೇ ತಾನು? ಮನೆ ಕಟ್ಟುವಾಗ ತಾನು ಬೇಕು....ಇವಳು ನಡೆಸುವ ಸಮಾರಂಭದಲ್ಲಿ ಎಲ್ಲೋ ದೂರ ಅಡಗಿರಬೇಕು ಹೇಡಿಯಂತೆ. ಅದ್ಹೇಗೆ ಸಾಧ್ಯ?

"ನಮ್ಮ ಸಂತೋಷದ ಬದುಕನ್ನು ನೋಡಿ ಬೇರೆಯವರೂ ಪಾಠ ಕಲಿಯಲಿ." ಅವನು ಹೇಳಿದ ಮೃದುವಾಗಿ, "ನೀನು ನಿನಗೆ ಇಷ್ಟಬಂದವರನ್ನು ಆಹ್ವಾನಿಸು. ನಾನು ನನಗೆ ಬೇಕಾದವರನ್ನೆಲ್ಲ ಕರೆಯುತ್ತೇನೆ. ಎಲ್ಲರೂ

ಬಂದು ನೋಡಲಿ ನಮ್ಮನ್ನು, ನಮ್ಮ ಮನೆಯನ್ನು, ಕೆಲಸವನ್ನು...."

ಅವಳ ಒಪ್ಪಿಗೆಯನ್ನು ಮತ್ತೊಮ್ಮೆ ಕೇಳಲು ಇಚ್ಛಿಸದ ಕೃಷ್ಣಯ್ಯ ದಿಟ್ಟಮನದಿಂದ ತನ್ನ ಬಂಧುಗಳಿಗೆಲ್ಲ ಕರೆಯೋಲೆಯನ್ನು ತಲುಪಿಸಿದ. ತೋನ್ಸೆಗೆ ತಾನೇ ಹೋಗಿ ಹೇಳಿಬಂದ. ಜೊತೆಯಲ್ಲಿ ಮಕ್ಕಳನ್ನು ಕರೆತರುವ ಇಚ್ಛೆಯಾದರೂ ಹಳೆಮನೆಯ ಅನಾನುಕೂಲಗಳನ್ನು ಯೋಚಿಸಿ ಸುಮ್ಮನೆ ಹೊರಟುಬಂದ.

ಮುಂದೆ ಹತ್ತು ದಿನಗಳಲ್ಲಿ ಸರಳ ರೀತಿಯಲ್ಲಿ ನಡೆಯಿತು ಗೃಹಪ್ರವೇಶ. ಮನೆತುಂಬ ತನ್ನ ಕಡೆಯ ನೆಂಟರಿಷ್ಟರು ಬರಬಹುದು ಎಂದು ನಿರೀಕ್ಷಿಸಿದ್ದ ಸುಮಿತ್ರಳಿಗೆ ಕಾದಿತ್ತು ನಿರಾಶೆ. ಅವಳ ಕಡೆಯವರು ಬರಲಿಲ್ಲ ಯಾರೂ. ಮಾವನವರಿಂದ ಎರಡು ಗೆರೆ ಶುಭಾಶಯದ ಒಕ್ಕಣೆ ಮಾತ್ರ ಬಂದು ತಲುಪಿತು. ನೆರೆಯಲ್ಲೇ ಇರುವ ಗೋಪಣ್ಣ, ಯಶೋದೆ, ತಂದೆ-ತಾಯಿ ಒಬ್ಬರೂ ಇತ್ತ ಸುಳಿಯಲಿಲ್ಲ. ಸುಮಿತ್ರಳಿಗೆ ಎಲ್ಲಿಲ್ಲದ ಅಚ್ಚರಿ. ಅದರೊಂದಿಗೆ ಮುಖಭಂಗವಾದಂತೆ ಒಳಗೊಳಗೇ ವ್ಯಗ್ರಳಾದಳು. ಹಳಹಳಿಸಿದಳು. ಅವಳ ಉತ್ಸಾಹವೆಲ್ಲ ಅಡಗಿ ಕೂಡುಹುಬ್ಬುಗಳು ಒಂದನ್ನೊಂದು ಬೆಸೆದುಕೊಂಡವು.

ಕೃಷ್ಣಯ್ಯನ ಚಿಕ್ಕತಂದೆ, ಮಾವ, ಸೋದರಳಿಯ, ತಂಗಿ-ಅವಳ ಗಂಡ, ತೋನ್ಸೆಯಿಂದ ಗಂಗಯ್ಯ ಮತ್ತು ಶಂಕರ-ಸುನಂದೆಯರು ಬಂದದ್ದರಿಂದ ಹೊಸ ಮನೆ ತುಂಬ ಅವನ ಕಡೆಯ ಜನರೇ ಜನರು. ಹಳೆಯ ಸ್ನೇಹಿತರೂ ಒಂದಿಬ್ಬರು ಬಂದರು. ಊರಿನಲ್ಲಿರುವ ಅನೇಕಾನೇಕ ಗಣ್ಯ ಮಹನೀಯರು, ನರಸಿಂಹಭಟ್ಟರು ಮತ್ತು ಅವರ ಮಗ ಸೊಸೆಯೂ ಬಂದರು ಮಧ್ಯಾಹ್ನದ ಊಟಕ್ಕೆ. ಮನೆ ತುಂಬಿತ್ತು ಸದ್ದುಗದ್ದಲದಲ್ಲಿ. ಸುಮಿತ್ರಳ ಮುಖದತ್ತ ನೋಡುವ ಪುರುಸೊತ್ತು ಇರಲಿಲ್ಲ ಒಬ್ಬರಿಗೂ.

ತಮ್ಮ ಅಜ್ಜನನ್ನೇ ಅಂಟಿಕೊಂಡಿದ್ದ ಶಂಕರ-ಸುನಂದೆಯರಿಗೆ ಗಣೇಶ ಬಹಳ ಆಸಕ್ತಿಯಿಂದ ತೋರಿಸಿದ ಮನೆಯನ್ನು. ಸುತ್ತಲೂ ತಿರುಗಾಡಿಸಿದ. ತಾನು ಮಾಡಿದ ಕೆಲಸವನ್ನು ಎಷ್ಟು ಹೊಗಳಿಕೊಂಡರೂ ಸಾಲದು. ಏಕೋ ಸುನಂದೆ ಬಹಳ ಸಪ್ಪೆಯಾಗಿಬಿಟ್ಟಿದ್ದಳು. ಕೃಷ್ಣಯ್ಯ ಮಗಳನ್ನು ಹತ್ತಿರ ಕರೆದರೂ ಹೋಗಲಿಲ್ಲ ಅವಳು. ಶಂಕರನೂ ಅರೆಗಳಿಗೆ ಮಾತನಾಡಿದ ತಂದೆಯೊಡನೆ. ಅನಂತರ ಅಜ್ಜನ ಮಗ್ಗಲಲ್ಲಿ. ಮಕ್ಕಳಿಬ್ಬರೂ ತನ್ನಿಂದ ದೂರ

ಸೇರಿಯುತ್ತಿದ್ದಾರೆ ಎಂದು ಆ ಅವಸರದಲ್ಲಿಯೂ ಅನಿಸಿತು ಕೃಷ್ಣಯ್ಯನಿಗೆ. ಅತ್ತಿತ್ತ ಓಡಾಡುವ ಸುಮಿತ್ರಳನ್ನು ವಿಚಿತ್ರವಾಗಿ ನೋಡುತ್ತಿದ್ದರು ಇಬ್ಬರೂ. ನಿಜ, ಇದೇ ಮೊದಲ ಬಾರಿಗೆ ನೋಡುತ್ತಿದ್ದಾರೆ. ತಮ್ಮ ತಂದೆಯಿರುವ ಮನೆಯಾದರೂ ಚೆಲ್ಲುಚೆಲ್ಲಾಗಿ ವರ್ತಿಸುವದು ಅವರಿಂದಾಗಲಿಲ್ಲ. ಯಮುನ ಜೊತೆ ಮಾತನಾಡಿಸಿದಳು ಅವರಿಬ್ಬರನ್ನು. ಆದರೆ ಸುಮನಳಿಗೆ ಒಂದು ಬಾರಿ ಮುಗುಳ್ನಗೆ ನಗುವದಕ್ಕೂ ಅಭಿಮಾನ ಬಿಡಲಿಲ್ಲ. ಸುಮಿತ್ರಳೂ ಆ ಮಕ್ಕಳನ್ನು ತನ್ನ ಹತ್ತಿರ ಕರೆಯಲಿಲ್ಲ.

ಗಂಗಯ್ಯನ ದೃಷ್ಟಿಯೆಲ್ಲ ಗಣೇಶನ ಮೇಲೆ. ಮನಸ್ಸು ಆಳವಾಗಿ ಏನೇನೋ ಚಿಂತಿಸುತ್ತ ಇದೆ. ಮೈಯಲ್ಲಿ ತುಂಬ ಇಳಿದುಹೋಗಿದ್ದರೂ ಮಗುವಿನಂತಹ ಮುದ್ದು ಮುಖದಲ್ಲಿ, ಕಣ್ಣುಗಳಲ್ಲಿ ಚಿಮ್ಮುತ್ತಿದೆ ಉತ್ಸಾಹ. ಹಾರುತ್ತಿದ್ದಾನೆ ಹಕ್ಕಿಯಂತೆ. ಒಳಹೊರಗೆಲ್ಲ ಅವನ ಸಂಭ್ರಮದ ಓಡಾಟ. ಸುಮಿತ್ರ ಹೇಳಿದ ಕೆಲಸಗಳನ್ನು ಅದೆಷ್ಟು ಚುರುಕಾಗಿ ಮುಗಿಸುತ್ತಿದ್ದಾನೆ. "ಅಜ್ಜ, ದೊಡ್ಡಮ್ಮ ನನಗಾಗಿ ಈ ಹೊಸ ಬಟ್ಟೆ ತೆಗೆದಿದ್ದಾಳೆ!" ಎಂದು ತಾನು ಹಾಕಿಕೊಂಡ ಹಸಿರು ಬಣ್ಣದ ಅಂಗಿಚಡ್ಡಿಯನ್ನು ಗಂಗಯ್ಯನಿಗೆ ತೋರಿಸಿದ್ದ. ಆ ಬಟ್ಟೆಯನ್ನು ನೋಡಿ ಅವನ ಮನಸ್ಸು ಅಂದಿತು, 'ಅಯ್ಯೋ ಪಾಪ, ಎಳೆ ಹೃದಯವನ್ನು ಅವಳು ಕೇವಲ ಅಗ್ಗದ ಬಟ್ಟೆಗಳಿಂದ ಗೆದ್ದು ಕೊಂಡಿದ್ದಾಳೆ!'

ಮಧ್ಯಾಹ್ನ ಊಟ ಮುಗಿದಾಕ್ಷಣ ಹೊರಟುನಿಂತ ಗಂಗಯ್ಯ. 'ಜೊತೆಯಲ್ಲಿ ಮೊಮ್ಮಕ್ಕಳೂ! ಕೃಷ್ಣಯ್ಯ ಇಬ್ಬರ ತಲೆ ನೇವರಿಸಿ, "ಹೇಗೂ ರಜೆಯಿದೆ, ನಾಲ್ಕು ದಿನ ಉಳಿದು ಹೋಗಿ" ಎಂದ. ಆದರೆ ಇಬ್ಬರೂ ತಂದೆಯನ್ನು ಅಪರಿಚಿತನಂತೆ ನೋಡುತ್ತ, "ನೀನೇ ನಮ್ಮ ಜೊತೆ ಅಜ್ಜನ ಮನೆಗೆ ಬಂದುಳಿ!" ಎಂದರು.

ಕೃಷ್ಣಯ್ಯ ಕಿಸೆಯಿಂದ ಹಣ ತೆಗೆದು ಗಂಗಯ್ಯನ ಕೈಯಲ್ಲಿರಿಸಿದ, "ಗಣೇಶನಿಗೂ ತೋನ್ಸೆಗೆ ಬರುವ ಆಸೆಯಾಗಿದೆ. ಮನೆ ಗೃಹಪ್ರವೇಶ ಮುಗಿದ ಮೇಲೆ ಹೋಗು ಎಂದಿದ್ದೆ. ಈಗ ಬೇಕಿದ್ದರೆ ನಿಮ್ಮ ಜೊತೆಯಲ್ಲಿ ಕರ್ಕೊಂಡು ಹೋಗಿ."

ಕರೆದೊಯ್ಯಬಹುದಿತ್ತು. ಆದರೆ ಮನೆಯಿಂದ ಹೊರಡುವಾಗಲೇ

ಸಣ್ಣಮ್ಮ ಎಚ್ಚರಿಸಿದ್ದಳು: "ಅವನು ಮತ್ತೆ ಹಳೇ ರಾಗವನ್ನು ಹಾಡಿ ಗಣೇಶ ನನ್ನ ನಮ್ಮ ಕುತ್ತಿಗೆಗೆ ಕಟ್ಟಿ ಕೈತೊಳೆದುಕೊಂಡಾನು!...."

"ನಾನು ಬೆಪ್ಪ ಅಂದುಕೊಂಡಿದ್ದೀಯ? ನನಗೇನು ಬೇರೆ ಕಸುಬಿಲ್ಲವೆ? ಯಾವ ಗ್ರಹಚಾರಕ್ಕೆ ಆ ಹುಡುಗನನ್ನು ಇಲ್ಲಿಗೆ ಕರ್ಕೊಂಡು ಬರ್ತೀನೆ? ಸಾಧ್ಯವಾದರೆ ಈ ಎರಡು ಮಕ್ಕಳನ್ನೂ ಅವನಲ್ಲೇ ಬಿಟ್ಟುಬರ್ತೀನೆ."

ಈಗ ಇಲ್ಲಿ ಮಕ್ಕಳು ಉಳಿಯುವ ಮಾತು ಹಾಗಿರಲಿ, ತಂದೆಯ ಮುಖ ನೋಡಿ ಸರಿಯಾಗಿ ನಾಲ್ಕು ಮಾತನ್ನೂ ಆಡಲಿಲ್ಲ. ಅವನಿಗಿಂತ ಮೊದಲೇ ಹೊರಟು ಸಿದ್ಧರಾಗಿಬಿಟ್ಟಿದ್ದರು. ಅವರನ್ನು ಗದರಿಸಿ ಇಲ್ಲಿರಿಸಿ ಹೋಗುವುದೂ ಸಾಧ್ಯವಿರಲಿಲ್ಲ ಅವನಿಂದ. ಮಗಳ ನೆನಪಿನಿಂದ ಒದ್ದೆಯಾದ ಕಣ್ಣುಗಳನ್ನು ಒರಸಿಕೊಂಡು ಅವನೆಂದ:

"ಗಣೇಶ ಇಲ್ಲಿಯೇ ಇರಲಿ. ನಾನು ಶಾಂತೂ ಮನೆಗ್ಹೋಗಿ ನಾಲ್ಕು ದಿನ ಉಳಿದು ಅನಂತರ ತೋನ್ಸೆಗೆ ಹೋಗುವವನು."

ಹೆಚ್ಚಿನ ಮಾತನ್ನು ಬೆಳಸದೆ ಮೊಮ್ಮಕ್ಕಳನ್ನು ಕರೆದುಕೊಂಡು ಅವನು ಹೊರಟುಹೋದ. ಆಗ ಗಣೇಶ ಮನೆಯ ಹಿಂಬದಿ ತನ್ನ ಗೆಳೆಯರಿಗೆ ಅಡಿಕೆ ಹಾಳೆಗಳಲ್ಲಿ ಊಟವನ್ನು ಬಡಿಸುತ್ತ ಇದ್ದ. ಅವರು ಹೊರಟುಹೋದರೆಂದು ತಿಳಿದದ್ದು ಅರ್ಧಗಂಟೆಯನಂತರ! ತನಗೆ ತಿಳಿಸದೆ ಹೊರಟುಹೋದರಲ್ಲ ಎಂದು ತನ್ನಲ್ಲೇ ಯೋಚಿಸುತ್ತಿದ್ದಂತೆ ಯಾರೋ ಗಂಟಲಿನೊಳಗೆ ಅದುಮಿದಂತೆ ಆಯಿತು. ವಿಚಿತ್ರವಾದ ಮಾನಸಿಕ ಗೊಂದಲಕ್ಕೊಳಗಾದ ಅವನಿಗೆ, 'ಓ.... ತಾನೇಕೆ ಯಾರಿಗೂ ಬೇಡವಾಗಿದ್ದೇನೆ?' ಎಂದೆನಿಸಿತು. ಉತ್ತರ ಸಿಗಲಿಲ್ಲ.... ಸುಮಿತ್ರೆಯ ಮೇಲೆ ಉಕ್ಕೇರಿತು ಕ್ರೋಧ. ಅವಳು ಒಂದು ಮಾತು ಹೇಳಿದ್ದರೆ ಶಂಕರ, ಸುನಂದೆ ಉಳಿದುಕೊಳ್ಳುತ್ತಿದ್ದರು. ಆದರೆ ತನ್ನಂತೆ ಅವರೂ ಇಲ್ಲಿ ಗಾಣದೆತ್ತುಗಳಾಗಬಾರದೆಂದು ಅಪ್ಪ ಯೋಚಿಸಿ ಅವರನ್ನು ಅಷ್ಟು ಬೇಗ ಇಲ್ಲಿಂದ ಕಳುಹಿಸಿರಬೇಕು. ಮತ್ತೆ ತಾನೊಬ್ಬ ಇಲ್ಲಿ ಈ ರೀತಿ ಯಾಕೆ ಇದ್ದೇನೆ?—ಈ ಪ್ರಶ್ನೆಗೂ ಸಿಗಲಿಲ್ಲ ಉತ್ತರ.

ರಾತ್ರಿ ಹೊಸಮನೆಯ ಛಾವಣಿಯ ಕೆಳಗೆ ಸಣ್ಣ ಕೋಣೆಯ ಒಳಗೆ ಮಲಗಿದ್ದ ಕೃಷ್ಣಯ್ಯ ಸಂತೈಸಿದ ಹೆಂಡತಿಯನ್ನು: "ನಿನ್ನ ಕಡೆಯವರು ಯಾರೂ ಬರಲಿಲ್ಲವೆಂದು ಬೇಸರಿಸಬೇಡ. ಯಾರು ಎಷ್ಟೇ ಎದುರುಬೀಳಲಿ,

ಸಾಸಿರುವವರೆಗೆ ಯಾರ ಹೆದರಿಕೆಯೂ ನಿನಗಿಲ್ಲ. ನನ್ನ ಮೇಲೆ ಭರವಸೆಯನ್ನಿಡು!"

ಸುಮಿತ್ರ ಚಕಿತಳಾಗಿ ನೋಡಿದಳು ಅವನನ್ನು. ತನ್ನ ಕಡೆಯವರಾರೂ ಬರಲಿಲ್ಲವೆಂದೂ ಅವನು ನಗುತ್ತ ತನಗೆ ವ್ಯಂಗ್ಯೋಕ್ತಿಗಳನ್ನು ಆಡುವನೆಂದೂ ನಿರೀಕ್ಷಿಸಿಕೊಂಡಿದ್ದ ಅವಳಿಗೆ ಮತ್ತು ದುಗುಡ, ಅವಮಾನದಿಂದ ರೋಷಗೊಂಡ ಅವಳ ಮನಸ್ಸಿಗೆ ಅವನ ಸಂತೈಸುವ ಧ್ವನಿ ತಂಪುಗಾಳಿಯನ್ನು ಬೀಸಿತ್ತು! ಏನಾಶ್ಚರ್ಯ....ಇಂಥವರೂ ಇದ್ದಾರೆಯೇ? ತನ್ನ ಮಕ್ಕಳಿಬ್ಬರ ವಿಷಯದಲ್ಲಿ ಚಕಾರವೆನ್ನುತ್ತದೆ, ಕೇವಲ ತನ್ನನ್ನು ಒಲಿಸಿಕೊಳ್ಳುತ್ತ ಇದ್ದಾನೆ. ತನಗಾದ ನೋವು ಅವನಿಗೂ ಬಿಟ್ಟದಂತಿದೆ....ನಿಜವಾಗಿಯೂ ಈ ದಿನ ಆ ಮುಗ್ಧ ಮಕ್ಕಳನ್ನು ನೋಡಿದಾಗ ತನ್ನ ಮನಸ್ಸು ಏನೋ ಒಂದು ವಿಧವಾಗಿ ಹೋಗಿದೆ. ಆದರೂ 'ನಮ್ಮ ಮನೆಯಲ್ಲೇ ಇರಿ' ಎಂದು ಹೇಳಲಾರದೆ ಹೋದೆನಲ್ಲ.

ದೀಪದ ಬೆಳಕು ಹೊಸ ಗೋಡೆಯ ಮೇಲೆ ನೆರಳನ್ನೊಡ್ಡಿತು. ಸುಮಿತ್ರ ಹತ್ತಿರದಲ್ಲಿದ್ದ ಕೃಷ್ಣಯ್ಯನನ್ನೇ ನೋಡಿದಳು, ತನ್ನ ಮಕ್ಕಳಿಗೆ ಇವನು ಮಲತಂದೆ. ಎಷ್ಟು ಪ್ರೀತಿಯಿಂದ, ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದಾನೆ. ಇವನ ಮಕ್ಕಳಿಗೆ ತಾನು ಮಲತಾಯಿ. ಆದರೆ ಅವರಿಬ್ಬರನ್ನು ಇಲ್ಲಿರಿಸಿಕೊಂಡು ಪ್ರೀತಿವಾತ್ಸಲ್ಯದ ತುತ್ತನ್ನು ಉಣಿಸುವುದು ಸಾಧ್ಯವಿಲ್ಲ ತನಗೆ? ಯಾಕೆ? ಗಣೇಶನನ್ನು ಅಕ್ಕ ನೋಡಿಕೊಂಡಿರಲಿಲ್ಲವೇ? ಆ ನಿಸ್ಸ್ವಾರ್ಥ ಬುದ್ಧಿ ತನಗೇಕೆ ಇಲ್ಲ?

ಕೃಷ್ಣಯ್ಯ ಹಸನ್ಮುಖದಿಂದ ಏನೇನೋ ಹೇಳುತ್ತಿದ್ದರೂ ಅವಳಿಗೆ ಕೇಳಿಸಲೇ ಇಲ್ಲ. ಸುಮ್ಮನೆ ಚಿಂತಿಸಲಾರಂಭಿಸಿದಳು ತನ್ನಲ್ಲೇ.

## 17

ಹೊಸ ಮನೆಯಲ್ಲಿ ಮೂರನೆಯ ದಿನ. ಹೊರಜಗಲಿಯ ತುದಿಯಲ್ಲಿರುವ ಪುಟ್ಟದಾದ ಕೋಣೆಯನ್ನು ಈ ಮೂರು ದಿನಗಳಿಂದಲೂ ಗಣೇಶನೇ ಉಪಯೋಗಿಸುತ್ತಿದ್ದಾನೆ. ಅವನ ಹಾಸುಹೊದಿಕೆಗಳು, ತುಕ್ಕು ಹಿಡಿದ ಒಂದು

ಪೆಟ್ಟಿಗೆ, ಹರಕು ಚೀಲ, ಕೆಲವು ಪುಸ್ತಕಗಳನ್ನು ಅಲ್ಲಿಯೇ ತಂದಿಟ್ಟುಕೊಂಡಿದ್ದಾನೆ. ಸರಿಯಾದ ಕಪಾಟು ಇಟ್ಟುಕೊಂಡಿದ್ದರೆ ಎಲ್ಲವನ್ನೂ ವ್ಯವಸ್ಥಿತವಾಗಿ ಜೋಡಿಸಿಡಬಹುದಿತ್ತು. ಆಚಾರಿ ಬಂದಾಗ ಒಂದು ಮಂಚವನ್ನಾದರೂ ಮಾಡಲು ಹೇಳಬೇಕು ಎಂದೆನಿಸಿತು ಅವನಿಗೆ.

ಈವತ್ತು ಇದ್ದಕ್ಕಿದ್ದಂತೆ ಒಂದು ವಿಧದ ಅಪಸ್ವರ ಕೇಳಿಸಲಾರಂಭಿಸಿದೆ ಮನೆಯೊಳಗಿನಿಂದ. ಅದು ಅವನಿಗೆ ಸಂಬಂಧಿಸಿದ್ದಾದರೂ ಏನೆಂದು ಅರ್ಥವಾಗಲಿಲ್ಲ. ತಾಯಿ-ಮಗಳಿಬ್ಬರೂ ಅವನನ್ನು ನುಂಗುವಂತೆ ದಿಟ್ಟಿಸುತ್ತ ಗುಸು ಗುಸು ಮಾತಾಡುತ್ತಿದ್ದಾರೆ ತಮ್ಮೊಳಗೆ. ಇವೆಲ್ಲ ಅವನ ಪಾಲಿಗೆ ಮಾಮೂಲು. ಆದರೆ ರಾತ್ರೆ ಊಟದ ಬಟ್ಟಲಿನ ಮುಂದೆ ತೀಕ್ಷ್ಣ ಕಣ್ಣುಗಳ ಇರಿತ ಸೂಜಿ ಮೊನೆಯಂತೆ ಚುಚ್ಚಿತು ಅವನ ಎಳೆಯ ಹೃದಯವನ್ನು. 'ಹೇಳಿದ, ಮಾಡಿದ ಕೆಲಸಗಳಲ್ಲಿ ಏನೋ ತಪ್ಪಾಗಿರಬೇಕು. ಎಷ್ಟು ಮಾಡಿದರೂ ತಪ್ಪು ಹುಡುಕುವ ಸ್ವಭಾವ. ಒಪ್ಪವಾಗಿ ತನ್ನನ್ನು ನೋಡುವುದೇ ಇಲ್ಲ. ಇವರ ಸಿಟ್ಟಿಗಿಷ್ಟು ಬೆಂಕಿ ಬೀಳಲಿ!'—ಅವನ ಮನಸ್ಸು ಕಹಿಯಾಗಿ ಗಬಗಬನೆ ನಾಯಿಯಂತೆ ಉಂಡು ಅಲ್ಲಿಂದ ಎದ್ದು ಬಂದ ಹೊರಗೆ.

ಕೋಣೆಯಲ್ಲಿ ಗೋಣಿ ಬಿಡಿಸಿ, ಕಂಬಳಿಯನ್ನು ಸರಿಪಡಿಸಿ, ಅದರ ಮೇಲೆ ಪವಡಿಸುವಾಗ ಮತ್ತೊಮ್ಮೆ ಹೊರಗೆ ಗುಸುಗುಸು ಸದ್ದು. ಯಾರೋ ಬಾಗಿಲ ಮರೆಯಲ್ಲಿ ನಿಂತು ಹೋದಂತಾಯಿತು. ಇನ್ನಾರದೋ ನೆರಳು ಕಾಣಿಸಿತು. ಇದ್ದಕ್ಕಿದ್ದಂತೆ ಕೃಷ್ಣಯ್ಯನ ಏರಿದ ಸ್ವರ ನಡುಗಿಸಿತು ಮನೆಯನ್ನು. ಸುಮಿತ್ರಳ ರೋಷದ ನುಡಿ, ಅಬ್ಬರದ ಗಲಾಟೆಯ ತಲೆ-ಬಾಲ ಅರ್ಥವಾಗದೆ ಗಣೇಶ ಸುಮ್ಮನೆ ಮುಚ್ಚಿಕೊಂಡ ಕಣ್ಣುಗಳನ್ನು. ಇದು ಅವನ ಕೋಣೆ. ಇಲ್ಲಿ ಯಾರ ಹೆದರಿಕೆಯೂ ಅವನಿಗಿಲ್ಲ. ತನ್ನದೇ ಕೋಣೆಯಲ್ಲಿ ಸ್ವತಂತ್ರವಾಗಿ ಅವನು ಏನು ಬೇಕಾದರೂ ಮಾಡಬಹುದು. ಮನೆ ಕಟ್ಟಿದ್ದು ಸಾರ್ಥಕವಾಯಿತು. ರಾತ್ರೆರಾಣಿಯ ಕಂಪಿನಿಂದ ಅರಳಿತು ಅವನ ಮನಸ್ಸು. ನೆಲದ ತಂಪಿನಿಂದ ಉಲ್ಲಸಿತಗೊಂಡಿತು ದಣಿದ ದೇಹ.

ಯಾರೋ ಅವನ ತಲೆಯ ಹತ್ತಿರವೇ ಕುಳಿತು ಕತೆ ಹೇಳುತ್ತ ಮೃದುವಾಗಿ ತಲೆಯನ್ನು ಸವರುತ್ತಿದ್ದಾರೆ. ಬಳೆ ತುಂಬಿದ ಕೈಯನ್ನು ಹಿಡಿದುಕೊಂಡು ಕಥೆಯನ್ನು ಆಲಿಸುತ್ತ ಕಣ್ಮುಚ್ಚಿ ಮಲಗುವುದು ಅವನಿಗೂ ಇಷ್ಟ.

"ಇನ್ನೂ ಸ್ವಲ್ಪ ಹೊತ್ತು ಹೇಳಮ್ಮಾ" ಎಂದು ಅವನು ಗೋಗರೆಯುವಾಗ ನಸುಗೋಪಗೊಂಡ ಅಮ್ಮನ ಮುಖವನ್ನು ನೋಡುವುದೂ ಅವನಿಗೆ ಇಷ್ಟ. ಎಷ್ಟು ದಿನಗಳಾದವೋ....ವರ್ಷಗಳೇ ಕಳೆದುಹೋಗಿವೆ!....

ಕಿಟಕಿಯಿಂದ ತೂರಿಬಂದ ಚಂದ್ರನ ಪ್ರಕಾಶ ಮುಖದ ತುಂಬ ಹರಡಿದಾಗ ಕಣ್ತೆರೆದು ನೋಡಿದ. ನಿರಭ್ರವಾದ ಆಗಸ ಎಷ್ಟು ಚೆನ್ನಾಗಿ ಕಾಣಿಸುತ್ತಿದೆ. ಮನೆಯೊಳಗೆಲ್ಲ ತುಂಬಿದೆ ಶಾಂತತೆ. ಅಂದರೆ ಸದ್ಯಕ್ಕೆ ಮುಗಿದಿದೆ ಗಲಾಟೆ. ಇನ್ನು ಪ್ರಾರಂಭವಾಗುವದು ನಾಳೆ ಬೆಳಗ್ಗೆ. ತಾನಂತೂ ಎಲ್ಲರೂ ಏಳುವ ಮೊದಲೇ ನರಸಿಂಹಭಟ್ಟರ ಮನೆಯಲ್ಲಿರುತ್ತೇನೆ. ಸಾಯಂಕಾಲ ಹೇಳಿಕಳುಹಿಸಿದ್ದರು: "ಮೈಸೂರಿನಿಂದ ನೆಂಟರು ಬಂದಿದ್ದಾರೆ, ನಾಳೆ ಬೆಳಗ್ಗೆ ಬೇಗ ಅಡಿಗೆಗೆ ಬರಲಿ" ಎಂದು. ಮತ್ತೇನು ತನಗೆ?

ಅಷ್ಟರಲ್ಲಿ ಹೊರಗಿನಿಂದ ಆತ್ಮೀಯ ಸ್ವರ ಕೇಳಿಸಿದಂತಾಗಿ ಧಡಕ್ಕನೆ ಎದ್ದು ಹೊದಿಕೆಯನ್ನು ಒದ್ದು ಕಿಟಕಿಯಿಂದ ಹೊರಗೆ ಇಣುಕಿದ. ಅವನ ಮಿತ್ರ ಕುಂಯಿಗುಡುತ್ತ ಅತ್ತಿತ್ತ ತಿರುಗುತ್ತಿರುವದು ಕಾಣಿಸಿ, ಕೋಣೆಯಿಂದ ಹೊರಬಂದು ಅಂಗಳಕ್ಕಿಳಿದ. ಅವನ ಕಾಲುಸಪ್ಪಳಕ್ಕೆ ಓಡಿಬಂದ ಅದನ್ನು ಕರುಣೆಯಿಂದ ಬಗ್ಗಿ ತಬ್ಬಿ ಎದೆಗಾನಿಸಿಕೊಂಡು ಕೇಳಿದ: "ನಿನ್ನನ್ನು ಮರೆತು ಬಿಟ್ಟೆನಲ್ಲೋ....ಹೇಗಿದ್ದಿ ಈಗ....?"

ನಾಯಿ ಅವನ ಮೈಕೈ ನೆಕ್ಕಿತು, ಅಲ್ಲಾಡಿಸಿತು ಬಾಲವನ್ನು. ಮನೆ ಗೃಹಪ್ರವೇಶ, ಅನಂತರದ ಕೆಲಸಗಳ ಮಧ್ಯೆ ನಾಯಿಯ ಮೇಲೆ ಸರಿಯಾದ ಗಮನವಿರಿಸಲೂ ಸಾಧ್ಯವಾಗಿರಲಿಲ್ಲ. ಆದರೂ ಹೊತ್ತಿಗೆ ಸರಿಯಾಗಿ ಅನ್ನ ಕಲಿಸಿ ಅದನ್ನು ಹುಡುಕಿಕೊಂಡು ಹೋಗಿ ಹಾಕಿ ಬಂದಿದ್ದ. ಈವತ್ತು ಅವನ ಖಾಲಿ ಬಟ್ಟಲಿಗೆ ಅನ್ನ ಬಡಿಸಿದ್ದೇ ಸ್ವಲ್ಪ. ಉಳಿಸುವ ಅಥವಾ ಗುಟ್ಟಾಗಿ ತನ್ನ ಮಿತ್ರನಿಗೆ ಅದರಲ್ಲಿ ಪಾಲು ಕೊಡುವ ಪ್ರಶ್ನೆಯೂ ಇರಲಿಲ್ಲ. ತನ್ನಂತೆ ಹಸಿದು ಬಂದಿದೆ. ಈ ಹೊತ್ತಿಗೆ ಒಳಕೋಣೆಯ ಬಾಗಿಲನ್ನು ತೆರೆದು ಅನ್ನ ಹುಡುಕಿದರೆ ಮತ್ತೆ ಇನ್ನೊಂದು ಗಲಾಟೆಯೆದ್ದೀತು! ಅವನು ಅದನ್ನು ಎತ್ತಿಕೊಂಡು ತನ್ನ ಕೋಣೆಗೆ ಬಂದ.

"ನಿನಗೆ ಹೊಟ್ಟೆಗೆ ಹಾಕಲಿಲ್ಲವೆಂದು ಬೇಸರಿಸಬೇಡಪ್ಪ. ನನ್ನ ಹಾಸಿಗೆ ಬದಿಯಲ್ಲೇ ಮಲಕ್ಕೋ"—ಎನ್ನುತ್ತ ತಾನು ಅರ್ಧನ್ನೈಯನ್ನು ನೆಲಕ್ಕೆ

ಬಾಚಿ ತನ್ನ ಗೋಣಿಯಲ್ಲಿ ನಾಯಿಗೂ ಸ್ಥಳ ಮಾಡಿಕೊಟ್ಟ. ಅದರ ತಲೆ ಸವರಿದ.

ಮಾತು ಬಾರದ ನಾಯಿ ಅವನ ಹೊಟ್ಟೆಗೆ ಮುಖವನ್ನು ಇರಿಸಿ ಇನ್ನಷ್ಟು ಮುದುರಿಕೊಂಡು ಮಲಗಿತು. ಅನಾಥ ನಾಯಿ ತನ್ನನ್ನು ಎಷ್ಟು ಪ್ರೀತಿಸುತ್ತಿದೆ....ಈಗ ಇದು ಪುಟ್ಟ ಮರಿಯಲ್ಲ. ಬಹಳ ಬೇಗ ಬೆಳವಣಿಗೆಯಾಗಿದೆ. ಮನೆಯಲ್ಲಿ ಇದನ್ನು ಆಗದವರು ಹೊಡೆದರೂ ಹೊಡೆಯಿಸಿಕೊಂಡು ಅಪರಿಚಿತರು ಬಂದರೆ ಬೊಗಳುವಷ್ಟು ಬುದ್ಧಿ ಬಂದಿದೆ ಇದಕ್ಕೆ. ಭೇಷ್! ದೊಡ್ಡಮ್ಮನಿಗೂ ಒಂದಲ್ಲ ಒಂದು ದಿನ 'ಈ ನಾಯಿ ಇದ್ದದ್ದೇ ವಾಸಿ' ಎಂದೆನಿಸದೆ ಇರಲಾರದು. ಆ ಬುದ್ಧಿ ಅವಳಿಗೆ ಬರಲಿ ದೇವರೇ ಎಂದುಕೊಂಡ ಮನಸ್ಸಿನಲ್ಲಿ.

## 18

ಸೂರ್ಯನುದಯಿಸಿ ಆಗಲೇ ಕಳೆದಿತ್ತು ಒಂದು ತಾಸು. ಮೊಸರು ಕಡೆಯುವ ಭರಭರ ಸದ್ದಿನೊಂದಿಗೆ ನಾಲ್ಕಾರು ಬಾರಿ ಗಣೇಶನ ನಾಮಸ್ಮರಣೆ. ಇಷ್ಟು ಹೊತ್ತಿಗೆ ಹಾಲು ಕರೆದು ಮುಗಿಸಬೇಕಿತ್ತು. ಭೂಪ ಇನ್ನೂ ಹಾಸಿಗೆ ಬಿಟ್ಟು ಎದ್ದಿಲ್ಲ. ಅವನನ್ನು ಹೊಡೆದು ಎಬ್ಬಿಸುವಂತೆ ಮಗಳಿಗೆ ಕಣ್ಸನ್ನೆ ಮಾಡಿದಳು ಸುಮಿತ್ರ.

ತಡಮಾಡದೆ ಸುಮನ ಅವನು ಮಲಗಿದ್ದ ಕೋಣೆಯ ಬಾಗಿಲನ್ನು ಕಾಲಿನಿಂದ ಬಲವಾಗಿ ಒದ್ದಳು....ತೆರೆದುಕೊಂಡಿತು ಬಾಗಿಲು. "ಏಯ್ ಕುಂಭಕರ್ಣ. ಏಳೋ....ಮಹಾದೊಡ್ಡ ಮಹರಾಯನ್ಹಾಗೆ ಮಲಗಿದ್ದೀಯಲ್ಲ" ಎನ್ನುತ್ತ ಬಂದಳು ಒಳಗೆ. ಅವನ ಹಾಸಿಗೆಯ ಮೇಲೆ ಮಲಗಿದ್ದ ಕಪ್ಪು ಪ್ರಾಣಿಯನ್ನು ಕಂಡು ಅವಾಕ್ಕಾಗಿ ಹೊರಗೋಡಿದಳು, "ಇಲ್ನೋಡು ಅಮ್ಮಾ, ಗಣೇಶನ ಹಾಸಿಗೆ ಮೇಲೆ ಯಾರಿದ್ದಾರೆ ಅಂತ!"—ಕೂಗಿದಳು ಜೋರಾಗಿ. "ನಾನ್ಹೇಳಿಲ್ವೆ, ನನ್ನ ಕೋಣೆ ಅದು, ಯಾರಿಗೂ ಕೊಡಬೇಡ ಎಂದು. ನೀನು ಕೇಳ್ಲಿಲ್ಲ. ಬಾ....ಬಾ....ಅಲ್ಲೇನು ಮಲಗಿದೆ ನೋಡು. ಎಲ್ಲೆ ಹಿಡಿಸೂಡಿ, ಕೊಡು ಇತ್ಲಾಗೆ. ನಾಲ್ಕು ಬಾರಿಸಿಯೇಬಿಡ್ತೇನೆ."

ಮಗಳ ಬೊಬ್ಬೆಯನ್ನು ಕೇಳಿ ತಾಯಿ ಅವಳ ಹಿಂದಿನಿಂದಲೇ ಬಂದಳು ಕೋಣೆಗೆ. ನಿಶ್ಚಿಂತೆಯಲ್ಲಿ ಮಲಗಿದ್ದ ಕಪ್ಪು ನಾಯಿಯನ್ನು ನೋಡುತ್ತಿದ್ದಂತೆ ಮಗಳ ಕೈಯಿಂದ ಹಿಡಿಸೂಡಿಯನ್ನು ಕಸಿದುಕೊಂಡು ಅದರ ಹಿಡಿಕೆಯ ಭಾಗವನ್ನೆತ್ತಿ ಬೀಸಿದಳು ನಾಯಿಯ ಮೈಮೇಲೆ. ಮಲಗಿದ್ದ ನಾಯಿ ಕಣ್ತೆರೆದು ಕುಂಯ್ಯೋ ಮುಂಯ್ಯೋ ಎನ್ನುತ್ತಿದ್ದಂತೆ ಇನ್ನೂ ನಾಲ್ಕಾರು ಏಟುಗಳು. ಕೋಣೆ ತುಂಬಾ ಓಡಿತು ನಾಯಿ, ಹೆದರಿಕೆಯಲ್ಲಿ ಕಾಣಿಸಲಿಲ್ಲ ದಾರಿ. ಇನ್ನೆರಡು ಏಟು ತಲೆಯ ಮೇಲೆ ಬೀಳುತ್ತಿದ್ದಂತೆ ಅಲ್ಲಿಯೇ ಹೊಲಸು ಮಾಡಿ ಹೇಗೂ ಬಾಗಿಲು ದಾಟಿ ಓಡಿತು ಹೊರಗೆ. ಹಿಂದಿನಿಂದಲೇ ರಿಂವ್‌ನೆ ಬೀಸಿಬಂದ ಹಿಡಿಸೂಡಿ ಅದರ ಹಿಂಭಾಗಕ್ಕೆ ಬಡಿದು ಬಿದ್ದಿತು ಕೆಳಗೆ.

"ನಾನೆಷ್ಟು ಸಾರಿ ಹೇಳ್ದೆ ನಿನಗೆ, ಆ ನಾಯಿಗೆ ನನ್ನ ಕೋಣೆ ಕೊಡಬೇಡ ಎಂದು. ಅಯ್ಯೋ ಇಡೀ ಕೋಣೆಯೆಲ್ಲ ಹೊಲಸು ಮಾಡಿ ಹೋಯ್ತು. ನಂಗೊತ್ತಿಲ್ಲ...." ಸುಮನ ಮೂಗು ಮುಚ್ಚಿಕೊಂಡು ಗಣೇಶನ ಗೋಣಿ ಹಾಸಿಗೆಯನ್ನು ಒದ್ದಳು ಕಾಲಿನಿಂದ, "ನೀನೇ ತೆಗಿ ಈ ಹೊಲಸನ್ನು."

"ಅವನ ಬಟ್ಟೆಯನ್ನೆ ಹಾಕು ಹೊಲಸಿನ ಮೇಲೆ! ಎಲ್ಲಿ ಸತ್ತ ಅವನು?"

"ಬೆಳಗಾಮುಂಜೆಯೇ ಎದ್ದು ಹೋಗಿರಬೇಕು ಭಟ್ಟರ ಮನೆಗೆ.... ಈವತ್ತು ಮನೆಗೆ ಬರಲಿ. ಮಂಗಳಾರತಿ ಮಾಡ್ತೇನೆ ಅವನಿಗೆ!"

ತಾಯಿ-ಮಗಳು ಸೇರಿ ಸೆಗಣಿ–ನೀರು ತಂದು ಹೇಗೋ ಕಷ್ಟಪಟ್ಟು ಸ್ವಚ್ಛಮಾಡಿದರು ಕೋಣೆಯನ್ನು. ಗಣೇಶನ ಹಾಸುಹೊದಿಕೆಯೆಲ್ಲ ಹೋಗಿ ಬಿದ್ದಿತು ಅಂಗಳದಾಚೆ.

"ನಿಮ್ಮ ಮಗ ನಾಯಿಯನ್ನು ಮಲಗಿಸಿಕೊಂಡಿದ್ದ. ಬಟ್ಟೆಗಳನ್ನು ಬಿಸಾಡಿದ್ದೇನೆ. ಇರಲಿ ಹಾಗೇ. ರಾತ್ರಿ ಬಂದು ಅದರಲ್ಲೇ ಉರುಳಿಕೊಳ್ಳಲಿ!" —ಗುಡುಗಿದಳು ಸುಮಿತ್ರ ಕೃಷ್ಣಯ್ಯ ಎದುರಿಗೆ ಬಂದಾಗ.

ಬಟ್ಟೆಗಳು ಹಾಗೆ ಅಂಗಳದಲ್ಲಿದ್ದರೆ ರಾತ್ರಿ ಅವನು ಮಲಗುವದಾದರೂ ಹೇಗೆ? ತಾನೇ ಹೋಗಿ ಸರಿಪಡಿಸಿ ಒಳಗೆ ತಂದಿಡುತ್ತೇನೆ ಎಂದುಕೊಂಡು ಹೋಗಿ ಎತ್ತಿಕೊಂಡವನು ಹಾಗೇ ಕೆಳಗೆ ಚೆಲ್ಲಿ ಮುಚ್ಚಿಕೊಂಡ ಮೂಗನ್ನು. ಎಲ್ಲಿ ಹೋಯಿತು ಹಾಳುನಾಯಿ? ಈಗಲೇ ಅದನ್ನು ಕೊಂದು ತಿಪ್ಪೆಗೋ, ತೋಡಿಗೋ ಎಸೆದರೆ ಆಮೇಲೆ ಯಾರಿಗೂ ಅದರ ರಗಳೆಯಿಲ್ಲ ಎಂದು

ಕೊಳ್ಳುತ್ತ, ಕೈಗೆತ್ತಿಕೊಂಡ ದೊಣ್ಣೆಯನ್ನು.

ಗಣೇಶ ಭಟ್ಟರ ಮನೆಗೆಲಸ ಮುಗಿಸಿ ಮೀಸೆ ಅಣ್ಣನ ಅಂಗಡಿಯಲ್ಲಿ ಅರ್ಧಗಂಟೆ ಬಿರುಡೆ ಹೊಡೆದು ಮನೆಯತ್ತ ಹೆಜ್ಜೆ ಹಾಕಿದಾಗ ಸಾಯಂಕಾಲ. ಇವತ್ತು ಮನಸ್ಸು, ಹೃದಯದಲ್ಲೆಲ್ಲ ನವಚೇತನ, ಹರ್ಷದ ಹೊನಲು, ತನ್ನ ಮುಖ ಕೂದಲಲ್ಲಿ ಕೈಯಾಡಿಸಿಕೊಳ್ಳುವ ಬಯಕೆ. ಪದೇಪದೇ ಆ ಮಾತುಗಳ ಮೊರೆತ ಧ್ವನಿಗೈಯುತ್ತವೆ ಕಿವಿಗಳಲ್ಲಿ. ಅದನ್ನು ಯೋಚಿಸುತ್ತಿದ್ದಂತೆ ನಗು ಬರುತ್ತದೆ.

ಮೈಸೂರಿನಿಂದ ಆಗಮಿಸಿದ ಮಧ್ಯವಯಸ್ಸಿನ ದಂಪತಿಗಳು ನರಸಿಂಹ ಭಟ್ಟರಿಗೆ ಹತ್ತಿರದ ಸಂಬಂಧಿಕರು. ಮೈತುಂಬ ಆಭರಣಗಳನ್ನು ಧರಿಸಿದ ಶ್ರೀಮಂತ ದರ್ಜೆಯ ಹೆಂಗಸಿಗೆ ಗಣೇಶನ ಮೇಲೆ ಕಣ್ಣು. 'ಈ ಹುಡುಗ ನೋಡಲು ಎಷ್ಟು ಚೆನ್ನಾಗಿದ್ದಾನೆ!' ಎಂಬ ಉದ್ಗಾರ. ಎಲ್ಲಿಲ್ಲದ ಆಸಕ್ತಿಯಲ್ಲಿ ಅವನೊಡನೆ ಮಾತಿಗಾರಂಭಿಸಿದಾಗ ಅವನಿಗೆ ಒಳಗೊಳಗೇ ಅಳುಕು. ತಾಯಿಯಿಲ್ಲದ ಹುಡುಗ ಎಂದಾಕ್ಷಣ ಅವರಿಗೆ ಅನುಕಂಪ. ಅನಂತರ ಕೇಳಿದ ಮಾತು ನಗುವುಕ್ಕಿಸಿತು ಅವನಲ್ಲಿ.

"ಏನ್ರಿ...." ಅವರು ತಮ್ಮ ಪತಿಯನ್ನು ಕೇಳಿದ್ದರು, "ಈ ಹುಡುಗ ಥೇಟ್ ನಮ್ಮ ಶ್ರೀಹರಿಯ ಹಾಗೇ ಇದ್ದಾನಲ್ವೇ?"

"ಹೂಂ, ಹಾಗೇ ಸ್ವಲ್ಪ ಹೋಲಿಕೆ." ಗಂಭೀರ ಸ್ವರ ಉಚ್ಚರಿಸಿತ್ತು.

"ಹೋಲಿಕೆ ಏನ್ಬಂತು? ಥೇಟ್ ಅವನ ತರಹಾನೇ, ಅದೇ ಕಣ್ಣು. ಅದೇ ಮೂಗು. ಶ್ರೀಹರಿ ಚಿಕ್ಕವನಿದ್ದಾಗ ಇವನ ತರಹವೇ ಇದ್ದ. ಒಂದು ಫೋಟೋ ನಮ್ಮ ಆಲ್ಬಂನಲ್ಲಿ ಇದೆಯಲ್ಲ."

ಆಗ ನರಸಿಂಹಭಟ್ಟರು ಚಪ್ಪಾಳೆ ತಟ್ಟಿ ಧ್ವನಿಯೇರಿಸಿದರು: "ಈಗ ತಿಳಿಯಿತು, ಇವನನ್ನು ನೋಡುವಾಗಲೆಲ್ಲ ನನಗೆ ಯಾರನ್ನೋ ಜ್ಞಾಪಕ ಬರ್ತಿತ್ತು. ನಿಜ, ಈಗ ತಿಳಿಯಿತು. ಶ್ರೀಹರಿಯಂತೆ ಕಾಣಿಸುತ್ತಾನೆ ಇವನು! ಕೆಲವೊಮ್ಮೆ ರಕ್ತಸಂಬಂಧಿಗಳಲ್ಲಿ ಇರುವುದಕ್ಕಿಂತ ಹೆಚ್ಚಿನ ಹೋಲಿಕೆಗಳು ಬೇರೆಯವರಲ್ಲಿಯೂ ಇರುತ್ತವೆ ಅಲ್ವ....ಅಂದ್ಹಾಗೆ ಎಲ್ಲಿದ್ದಾನೆ ಶ್ರೀಹರಿ? ಹೇಗಿದ್ದಾನೆ ಈಗ?"

ಆಮೇಲೆ ಏನೇನೋ ಮಾತುಗಳು. ಗಣೇಶನಿಗೆ ವಿಸ್ಮಯ. ಓಡಿಹೋಗಿ

ಬಚ್ಚಲುಮನೆಯಲ್ಲಿ ತೂಗಿಹಾಕಿದ್ದ ಕನ್ನಡಿಯಲ್ಲಿ ಮುಖ ನೋಡಿ ನಕ್ಕ. 'ಹಾಗಾದರೆ ತಾನು ಬಹಳ ಚೆಂದವಾಗಿದ್ದೇನೆಯೋ?' ಅವನೊಳಗೇ ಪ್ರಶ್ನೆ. ದೊಡ್ಡಮ್ಮ ಮೂದಲಿಸುವಂತೆ ತನ್ನದು ಕೋತಿಮುಖವಲ್ಲ, ನಾಯಿಮುಖವಲ್ಲ. ಮನುಷ್ಯನದೇ ಮುಖ. ಥೇಟ್ ಶ್ರೀಹರಿಯಂತೆ, ಆಹಾ! ಶ್ರೀಹರಿ ಯಾರೋ? ಎಂತಹ ತಮಾಷೆಯಿದು! ಅವನ ಮುಖದ ತುಂಬಾ ಹರ್ಷದ ಅಲೆ. ಹೊಟ್ಟೆ ತುಂಬಾ ಉಂಡಷ್ಟು ತೃಪ್ತಿ. ತಾನು ಚೆಂದವಾಗಿದ್ದೇನೆ!

ಅದೇ ಗುಂಗಿನಲ್ಲಿ ಸಿಳ್ಳುಹಾಕುತ್ತ ಎಲ್ಲೆಲ್ಲೋ ತಿರುಗಿ ಮನೆಗೆ ಬಂದು ಕೈಕಾಲು ತೊಳೆದುಕೊಳ್ಳುವಾಗ ಚೆನ್ನಾಗಿ ಕತ್ತಲೆಯಾಗಿತ್ತು. ಎಂದಿನಂತೆ ಕಲ್ಲುಮರಿಗೆಯ ಬದಿಯಲ್ಲಿ ಅವನ ಮಿತ್ರ ಕಾಣಿಸಲಿಲ್ಲ. ಇರಬಹುದು ಇಲ್ಲಿಯೇ, ರಾತ್ರಿ ಬಂದೀತು ಎಂದುಕೊಳ್ಳುತ್ತಿದ್ದಂತೆ ಅಲ್ಲೇ ಮುಳ್ಳುಕಂಟಿಯ ಮೇಲೆ ಕಾಣಿಸಿತು ಅವನ ಬಟ್ಟೆಗಳು. ಅರೆ, ಇವು ಇಲ್ಲಿಗೆ ಹೇಗೆ ಬಂದವು? ಯಾರು ಎಸೆದಿದ್ದಾರೆ? ಛೀಛೀ!....ಹತ್ತಿರ ಬಂದಾಗ ಗಂ ಎಂದು ಮೂಗಿಗೆ ಬಡಿಯಿತು ವಾಸನೆ. ಹೇಗೋ ಅದನ್ನು ಎತ್ತಿ ಬಿಡಿಸಿ ನೋಡುತ್ತಾನೆ, ಹೇಸಿಗೆಯಾಗಿ ಹೋಗಿದೆ ಎಲ್ಲವೂ. ಇನ್ನು ಒಗೆಯುವುದೂ ಬಹಳ ಕಷ್ಟ. ತನ್ನ ಪಾಲಿಗೆ ರಾತ್ರಿ ನೆಲವೇ ಗತಿ.

ಮನೆಯಲ್ಲಿ ಇನ್ನೂ ಕತ್ತಲೆ. ಒಳಗೆಲ್ಲೋ ಬೆಳಗಿಕೊಂಡಿತ್ತು ಒಂದೇ ಒಂದು ಸಣ್ಣ ದೀಪ. ಅದರ ಮಂದಪ್ರಕಾಶ ಹೊರಗೆ ಬಂದಿರಲಿಲ್ಲ. ಜಗಲಿಯ ಮೂಲೆಯಲ್ಲಿರಬೇಕು ಅಪ್ಪ. ಬೀಡಿಯ ಬೆಳಕು ಮಾತ್ರ ಕಾಣಿಸುತ್ತಿದೆ. ಆದರೆ ಇದೇನು....ಈ ಕೋಣೆಗೆ ದೊಡ್ಡ ಬೀಗ ಹಾಕಿದ್ದಾರೆ?

"ದೊಡ್ಡಮ್ಮಾ...." ಕತ್ತಲೆಯಲ್ಲಿ ಹೊಸ್ತಿಲು ದಾಟಿ ದೀಪವಿರುವ ಕೋಣೆಗೆ ಬಂದ ಗಣೇಶ, "ನನ್ನ ಕೋಣೆಯ ಬಾಗಿಲಿಗೆ ಬೀಗ ಹಾಕಿದೆ. ಅದರ ಬೀಗದ ಕೈ ಎಲ್ಲಿದೆ?"

"ಓಹೊ, ಬಂದೆಯ? ಹೊತ್ತುಗೊತ್ತಿನ ಪರಿವೆ ನಿನಗಂತೂ ಇಲ್ಲವಲ್ಲ!" ಒಳಗಿನಿಂದಲೇ ಅಂದಳು ಸುಮಿತ್ರ, "ಕೋಣೆಯಲ್ಲಿದ್ದ ನಿನ್ನ ಸಾಮಾನುಗಳನ್ನೆಲ್ಲ ಪಿಂಡಿ ಮಾಡಿ ಜಗಲಿ ಮೂಲೆಯಲ್ಲಿ ಒತ್ತಿಟ್ಟಿದ್ದೇನೆ. ನಾಳೆ ದನದ ಕೊಟ್ಟಿಗೆ ಮೂಲೆಯಲ್ಲಿ ಇಟ್ಟುಕೊ."

"ಯಾಕೆ, ದೊಡ್ಡಮ್ಮ?"

"ಕೋಣೆ ಸುಮನಳಿಗೆ. ನೀನಾವರೆ ಹುಡುಗ. ಜಗಲಿ ಇಷ್ಟವಾಗವೇ ಹೋದರೆ ದನದ ಕೊಟ್ಟಿಗೆ ಬದಿಯಲ್ಲಿ ಜಾಗವಿದೆಯಲ್ಲ...."

ಗಣೇಶ ಅರ್ಥವಾಗದವನಂತೆ ನೋಡಿದ ಅವಳನ್ನು. ಕೋಣೆ ತನಗಲ್ಲ, ಸುಮನಳಿಗೆ. ಅವಳ ಮುದ್ದು ಮಗಳಿಗೆ! ತಾನು ಮನೆ ಕಟ್ಟಲು ಹಗಲುರಾತ್ರೆ ಮಣ್ಣು ಹೊತ್ತುಹೊತ್ತು ಒದ್ದಾಡಿದ್ದು ಇದಕ್ಕಾಗಿಯೇ? ನೀನೆಲ್ಲಿಯಾದರೂ ಮಲಗು ನನಗೇನಂತೆ ಎನ್ನುತ್ತಿದ್ದಾಳೆ ದೊಡ್ಡಮ್ಮ. ಎಲ್ಲೆಲ್ಲೋ ಮಲಗಲು ತಾನೇನು ಪರದೇಶಿಯೇ? ತನ್ನಮೇಲೆ ಇವಳಿಗೆ ಅನುಕಂಪವಿಲ್ಲ. ಆಳಿನಂತೆ ಬೇಕಾದಷ್ಟು ಕೆಲಸಮಾಡಿಸಿಕೊಳ್ಳುತ್ತಾಳೆ. ತನಗಿಲ್ಲಿ ಆಳಿಗೆ ಇರುವಷ್ಟೇ ಬೆಲೆ! ಕೆಲವೊಮ್ಮೆ ಆಳಿಗಿಂತಲೂ ನಿಕೃಷ್ಟ. ಅಪ್ಪ ಎನ್ನುವವನು ಇಲ್ಲಿ ನೆಪಮಾತ್ರಕ್ಕೆ. ಎಲ್ಲಾ ಕಾರುಭಾರ ಈ ತಾಟಕಿಯದು.

ಛತ್!....ಕಾಲನ್ನಪ್ಪಳಿಸುತ್ತ ಅವನು ಹೊರಗೆ ಬಂದು ಕೋಣೆಯ ಬಾಗಿಲನ್ನು ದಬದಬನೆ ಒದೆಯಲಾರಂಭಿಸಿದ. ಈವತ್ತು ಬಾಗಿಲು ಮುರಿದರೂ ಸರಿಯೆ, ತನಗೆ ಕೋಣೆ ಬೇಕೇಬೇಕು. ನೋಡೋಣ, ತಾನು ಯಾವುದಕ್ಕೂ ಮಾತನಾಡುವವನಲ್ಲವೆಂದು ತನಗಿಷ್ಟಬಂದಂತೆ ಚೆಂಡಿನಂತೆ ಕುಣಿಸುತ್ತಿದ್ದಾಳೆ. ತನ್ನನ್ನು. ಇನ್ನು ಇವಳು ಏನು ಹೇಳಿದರೂ ಕೇಳುವವನಲ್ಲ.

ದಬ್ ದಬ್....ದಬ್ ದಬ್....ಶಕ್ತಿ ಹಾಕಿ ಒದೆದ. ಬಾಗಿಲನ್ನು ನೂಕಿದ ಕೈಯಿಂದ. ಸುಮಿತ್ರ ದೀಪ ಹಿಡಿದುಕೊಂಡೇ ಬಂದಳು ಅವನ ಹತ್ತಿರ.

"ಇದೇನು ನಿನ್ನ ಗಲಾಟೆ?"

"ಬಾಗಿಲು ತೆಗೀ ಮತ್ತೆ. ನನ್ನ ಕೋಣೆ ನನಗೆ ಬೇಕೇಬೇಕು."

ಅವಳು ವಿಚಿತ್ರವಾಗಿ ನಕ್ಕಳು, "ಈ ಮನೆಗೆ ಹಕ್ಕುದಾರನೇನೋ ನೀನು? ಪರದೇಶಿ ಹುಡುಗ! ಹೆಚ್ಚು ಮಾತನಾಡಿದರೆ ಜಗಲಿ ತುದಿಯಲ್ಲಿಯೂ ನಿಂಗೆ ಜಾಗವಿಲ್ಲ."

ಒದೆಯುತ್ತಿದ್ದ ಅವನು ಸರ್ರನೆ ತಿರುಗಿ ಒರಗಿಕೊಂಡ ಬಾಗಿಲಿಗೆ, "ಇದು ಅನ್ಯಾಯ, ದೊಡ್ಡಮ್ಮಾ....ಅನ್ಯಾಯ!"

"ನ್ಯಾಯವನ್ನು ನಿನ್ನನ್ನು ಸಾಕಿದ ಅಪ್ಪನ ಹತ್ರ ಕೇಳು. ನಾನಿಲ್ಲಿ ನಿನ್ನನ್ನು ಇನ್ನೂ ಇಲ್ಲಿ ಉಳಿಸಿಕೊಂಡಿದ್ದು ಕೆಲಸಕ್ಕೊಂದು ಹುಡುಗ ಆಯ್ತು

ಎಂದು ಮನೆಯಲ್ಲಿ ಅಧಿಕಾರ ಕೊಡುವಷ್ಟು ಮೂರ್ಖಳಲ್ಲ ನಾನು, ತಿಳಿಯಿತೇನೋ...."

ಅವನ ಕಣ್ಣುಗೊಂಬೆಗಳಲ್ಲಿ ಬೆಳಗಿತ್ತು ಚಿಮಣಿ ದೀಪ. ನೀರುಕ್ಕಿ ಬಂದು ನೋಡಿದ ಸುತ್ತಲೂ ಅಸಹಾಯಕನಂತೆ. ಬೀಡಿ ಸೇದುತ್ತಿದ್ದ ಅಪ್ಪ ಮೌನವಾಗಿದ್ದಾನೆ! ನ್ಯಾಯ ಕೇಳುವ ಸೊಲ್ಲು ಇಲ್ಲ. ಮಾತನಾಡಿದರೆ ಅಪ್ಪ ಗೋಡೆಯ ಮೇಲೆ ದೀಪವಿಟ್ಟಂತೆ ಅವನ ಮಾತು. ಗಣೇಶ ಅಲ್ಲಿಯೇ ಕುಸಿದು ಕುಳಿತ. ಕೃಷ್ಣಯ್ಯ ಬೀಡಿ ತುಂಡನ್ನು ಹೊರಗೆಸೆದು ಒಳಗೆದ್ದು ಹೋದ. ಚಿಮಣಿ ದೀಪ ಹಿಡಿದವಳೂ ಸರಿದು ಹೋದಳು ಅಲ್ಲಿಂದ.

ಗಣೇಶನ ತಲೆ ತುಂಬಾ ಅದು ಏನೇನೋ ಆಲೋಚನೆಯ ತೆರೆಗಳು. ತನ್ನ ಅಪ್ಪ ಇಲ್ಲಿ ಯಾವ ವ್ಯಾಮೋಹಕ್ಕೊಳಗಾಗಿ ಉಳಿದುಕೊಂಡಿದ್ದಾನೆ? ನನಗಾದ ಅನ್ಯಾಯ, ನೋವನ್ನು ನೋಡಿದರೂ ಬಾಯಿಗೆ ಹಾಕಿಕೊಂಡಿದ್ದಾನೆ ಬೀಗ. ಹೌದು, ಅಮ್ಮ ತೀರಿಹೋದಮೇಲೆ ಅವನಿಗೂ ನನ್ನ ಮೇಲಿರುವ ಪ್ರೀತಿ ಬತ್ತಿಹೋಗಿದೆ, ಈಗೀಗ ಅವನೂ ನನ್ನನ್ನು ನಿಕೃಷ್ಟವಾಗಿ ನೋಡುತ್ತಿದ್ದಾನೆ. ಆದರೂ ಹಂಗಿನ ಅನ್ನವನ್ನುಂಡು, ಲಜ್ಜೆಗೇಡಿಯಾಗಿ, ಕೆಲಸದ ತೊತ್ತಾಗಿ, ಬೀದಿನಾಯಿಯಂತಾಗಿ ನಾನು ಇನ್ನೂ ಇಲ್ಲಿದ್ದೇನೆ ನಗು ನಗುತ್ತ....ಛೀ....ಅವನ ನರನರವೂ ರೋಷದಿಂದ ಸೆಟೆದು ನಿಂತವು. 'ಇಲ್ಲಿಂದ ಹೊರಟುಹೋಗುವ ಧೈರ್ಯ ನನಗಿಲ್ಲವೇ? ಹೇಗಿದ್ದರೂ ನರಸಿಂಹ ಭಟ್ಟರಲ್ಲಿ ಅಂಗಲಾಚಿದರೆ ಕೆಲಸ ಸಿಕ್ಕೀತು ಯಾವ ಕೆಲಸವಾದರೇನಂತೆ ಶಾಲೆ ಬಿಟ್ಟ ಈ ಕೋಣನಿಗೆ? ನರಸಿಂಹಭಟ್ಟರ ಮನೆ ಆಶ್ರಯ ಇದಕ್ಕಿಂತ ಎಷ್ಟೋ ಪಾಲು ವಾಸಿ.'

ಮರುದಿನ ನಸುಕಿನಲ್ಲಿಯೇ ನರಸಿಂಹಭಟ್ಟರ ಮನೆಗೆ ಹೊರಟು ಬಂದಾಗ ಗಣೇಶ ಯೋಚಿಸಿಕೊಂಡಷ್ಟು ಸುಲಭದಲ್ಲಿ ಅಲ್ಲಿ ಖಾಯಂ ಕೆಲಸ, ರಾತ್ರಿ ಆಶ್ರಯ ದೊರೆಯಿತು! ಕೃಷ್ಣಯ್ಯನಿಗೆ ಹೇಳಿಕಳುಹಿಸಿ, ಅವನನ್ನು ಕೇಳಿ ಗಣೇಶನಿಗೆ ತಮ್ಮಲ್ಲಿ ಕೆಲಸ ಕೊಡುವ ಏರ್ಪಾಟು ಮಾಡಿಕೊಂಡರು ನರಸಿಂಹ ಭಟ್ಟರು. ಆದರೆ ಅಲ್ಲಿ ಸರಿಯಾಗಿ ಎರಡು ದಿನ ಕೆಲಸ ಮಾಡಲು ಅಸಮರ್ಥನಾದ ಅವನು. ಗಳಿಗೆಗೊಂದು ಬಾರಿ ನಿಂತು, ಕುಳಿತು ತಿರುಗಿದ ಅತ್ತಿತ್ತ. ಬೆಳ್ಳಿಪಾಡಿಯ ದೊಡ್ಡ ರಸ್ತೆಯಲ್ಲಿ ಸಂಚರಿಸಿದ, ಶಾಲೆಯ ಕಟ್ಟಡದ ಬದಿಯಲ್ಲಿ

ಕುಳಿತು ಹೊತ್ತು ತಳ್ಳಿದ. ಖಿನ್ನಗೊಂಡಿತ್ತು ಅವನ ಮನಸ್ಸು. ಅವನ ಹಿಂದೆ ಮುಂದೆ ಜೊತೆಗೂಡಿತ್ತು ನಾಯಿ. ಅವನಿಗೆ ಅದರ ಕಡೆಗೂ ಗಮನವಿರಲಿಲ್ಲ. ಎಲ್ಲಿಯೋ ಯೋಚನೆ. ಅನಂತರ ಇದ್ದಕ್ಕಿದ್ದಂತೆ ಅವನಿಗೆ ತೋನ್ಸೆಯ ನೆನಪು ಬಹಳವಾಗಿ ಬಾಧಿಸಿತು. ಅಮ್ಮನ ತಾಯಿಯ ಮನೆ! ಶಂಕರ–ಸುನಂದೆಯರ ಜೊತೆಯಲ್ಲಿ ಉಳಿದವರಿಗೆಲ್ಲ ಕಷ್ಟವಾದರೂ ಸರಿಯೆ, ತಾನು ಉಳಿಯಬೇಕು. ತನ್ನನ್ನು ಶಾಲೆಗೆ ಸೇರಿಸದೆಹೋದರೆ ಬೇಡ; ಶೀನಪ್ಪಯ್ಯ, ನಾಗಪ್ಪಯ್ಯ ಹೇಳುವ ಕೆಲಸಗಳನ್ನು ಮಾಡಿಕೊಂಡು ಇದ್ದರಾಯಿತು. ತನ್ನನ್ನು ಈಗ ನೋಡಿದರೆ ಯಾರೂ ಬೇಡವೆನ್ನಲಾರರು.

ತೋನ್ಸೆಯ ನೆನಪು ಹೆಚ್ಚಿದಂತೆ ಅವನಿಗೆ ಅಲ್ಲಿಗೆ ಹೋಗುವ ಬಯಕೆ ಇಮ್ಮಡಿಯಾಗಿ ಮನಸ್ಸು ದುಂಬಿಯಂತೆ ಝೇಂಕರಿಸುತ್ತ ತೋನ್ಸೆಯ ಮನೆ, ಕಾಡು, ಬೆಟ್ಟ, ಗದ್ದೆಗಳಲ್ಲೆಲ್ಲ ವಿಹರಿಸಿತು. ಅಜ್ಜ-ಅಜ್ಜಿಯ ಪ್ರೀತಿಯ ಹೊದಿಕೆಗಾಗಿ ಹಾರೈಸಿತು ಅವನ ಪುಟ್ಟ ಹೃದಯ. ಅಪ್ಪನನ್ನು ಕೇಳಿದರೆ ಅಲ್ಲಿಗೆ ಹೋಗುವದೇ ಬೇಡ ಎನ್ನಬಹುದು. ಆಗ ಅವನಿಗೆ ತನ್ನ ಜೊತೆಯಲ್ಲಿರುವ ನಾಯಿಯನ್ನು ಚಿಂತೆಯಾಯಿತು. ತಾನಿಲ್ಲದೇಹೋದರೆ ಇದರ ಗತಿ? ಜೋಮ, ಹನುಮರ ಮನೆಯಲ್ಲಿ ಬಿಟ್ಟುಹೋದರೆ ಅಲ್ಲಿಯ ದೊಡ್ಡ ನಾಯಿಗಳು ಇದನ್ನು ಕಚ್ಚಿಕೊಂಡುಬಿಡಬಹುದು. ಒಂದು ತುತ್ತು ಅನ್ನ ಹಾಕುವವರೂ ಇಲ್ಲ. ಸರಿ, ತೋನ್ಸೆಗೆ ತನ್ನೊಡನೆ ಕರೆದೊಯ್ಯುವದು ಎಷ್ಟೋ ಲೇಸು. ತನ್ನನ್ನು ನಂಬಿದ ಅದಕ್ಕೆ ಮೋಸವಾಗಬಾರದು.

ತನ್ನ ಜೇಬನ್ನು ಮುಟ್ಟಿ ನೋಡಿಕೊಂಡ. ಹರಿದ ಜೇಬಿನಲ್ಲಿ ಒಡಕು ಕಾಸಿಗೂ ಗತಿಯಿರಲಿಲ್ಲ. ತತ್‌ಕ್ಷಣ ಸೀದಾ ಮೀಸೆ ಅಣ್ಣನ ಅಂಗಡಿಗೆ ಬಂದು ಇಪ್ಪತ್ತು ರೂಪಾಯಿ ಸಾಲ ತೆಗೆದುಕೊಂಡು ಯಾರಿಗೂ ತಿಳಿಸದೆ ಹೊರಟು ಬಿಟ್ಟ ತೋನ್ಸೆಗೆ.

## 19

ಅನಿರೀಕ್ಷಿತವಾಗಿ ಆಗಮಿಸಿದ ಗಣೇಶನನ್ನು ನೋಡಿ ಮನೆಯಲ್ಲಿ ಎಲ್ಲರಿಗೂ ಆಶ್ಚರ್ಯ. ಹರಿದ ಅಂಗಿಚಡ್ಡಿ, ಕೆದರಿದ ಕೂದಲು, ಬಿಸಿಲಿಗೆ ಕಪ್ಪಾದ ಅವನನ್ನು ಮೊದಲಿಗೆ ಯಾರಿಗೂ ಗುರುತು ಸಿಗಲಿಲ್ಲ. "ಹೇಗಿದ್ದಿಯೋ ಹುಡುಗ?" ಎಂದು ಸಣ್ಣಮ್ಮ ಹತ್ತಿರ ಬಂದು ಕೇಳಿದಳು ಹಲ್ಲಿಲ್ಲದ ಬಾಯನ್ನು ಅಗಲಿಸಿ.

ಶಂಕರ, ಸುನಂದೆ, ನಾಗಪ್ಪಯ್ಯ ಮತ್ತು ಶೀನಪ್ಪಯ್ಯನ ಮಕ್ಕಳಿಗೆ ಎಲ್ಲಿಲ್ಲದ ಹಿಗ್ಗು. ಅವನನ್ನು ಸುತ್ತುವರಿದುಬಿಟ್ಟರು. ನಾಗಪ್ಪಯ್ಯನ ಹೆಂಡತಿ ತನ್ನ ಮೂರನೆಯ ಮಗುವಿಗೆ ಜನ್ಮಕೊಟ್ಟು ಹತ್ತು ದಿನಗಳಾಗಿದ್ದವಷ್ಟೆ. ಎಳೆಗಂದನ ಅಳುವಿನಲ್ಲಿ ತುಂಬಿತ್ತು ಆ ಮನೆ. ಮಕ್ಕಳೆಲ್ಲ ಗಣೇಶನನ್ನು ಬಾಣಂತಿಕೋಣೆಗೆ ಕರೆದೊಯ್ದು ತೋರಿಸಿದರು ಮಗುವನ್ನು. ಅಲ್ಲಿಯೇ ಕುಕ್ಕುರುಗಾಲಿನಲ್ಲಿ ಕುಳಿತ ನಾಗಪ್ಪಯ್ಯ ಅವನನ್ನು ನೋಡಿದರೂ ತಲೆ ಎತ್ತಲಿಲ್ಲ. ಏನು? ಹೇಗಿದ್ದಿ? ಎಂದೂ ವಿಚಾರಿಸಲಿಲ್ಲ. ಗಂಗಯ್ಯ ಎಲ್ಲಿಗೋ ಹೋಗಿರಬೇಕು, ಮನೆಗೆ ಬರುವಾಗ ಸಾಯಂಕಾಲ. ಧಿಡೀರನೆ ಬಂದ ಗಣೇಶನನ್ನು ಕಂಡು, "ಏನು ವಿಶೇಷ?" ಎಂದು ಕೇಳಿದ. ವಿಶೇಷಗಳಿಲ್ಲದೆ ಹೀಗೆ ಸುಮ್ಮನೆ ಬಂದು ಹೋಗುವ ಅಗತ್ಯವೂ ಇಲ್ಲವೆಂಬಂತೆ ಮುಖ ಕಹಿ ಮಾಡಿದ ನಾಗಪ್ಪಯ್ಯ.

ಶೀನಪ್ಪಯ್ಯ ಇರಲಿಲ್ಲ ಊರಿನಲ್ಲಿ. ಬೆಂಗಳೂರಿನತ್ತ ಹೋಗಿ ಆಗಲೇ ಹದಿನೈದು ದಿನಗಳಾದವಂತೆ. ಇನ್ನುಮೇಲೆ ಅಲ್ಲಿಯೇ ಯಾವುದಾದರೂ ವ್ಯಾಪಾರ ಮಾಡುವ ಯೋಚನೆಯಲ್ಲಿದ್ದಾನೆಂದು ಮಕ್ಕಳಿಂದ ತಿಳಿಯಿತು ಗಣೇಶನಿಗೆ. ಅವನ ಹೆಂಡತಿ ಬಹಳ ಗಂಭೀರೆ. ಗಣೇಶನೊಡನೆ ಎರಡು ಮಾತುಗಳನ್ನಾಡುವದಕ್ಕೂ ಅವಳ ತುಟಿಗಳು ತೆರೆದುಕೊಳ್ಳಲಿಲ್ಲ. ಅಕ್ಕ ಇದ್ದಾಗ ಪ್ರೀತಿ ತುಂಬಿದ ನುಡಿಗಳನ್ನಾಡುತ್ತಿದ್ದವಳು ಇವಳೆಯೆ? ಗಣೇಶ ತಾನಾಗಿಯೇ ಅವಳ ಗಮನ ಸೆಳೆದುಕೊಳ್ಳಲು ಹೇಳಿದ:

"ಅತ್ತೆ, ನಾನು ಸಾಕಿದ ನಾಯಿಯಿಲ್ಲವೇ....ಅದನ್ನೂ ಜೊತೆಯಲ್ಲಿ ಕರ್ಕೊಂಡು ಬರೋಣ ಎಂದುಕೊಂಡಿದ್ದೆ ಆದರೆ ಬಸ್ಸಿನ ಡ್ರೈವರು, ಕಂಡಕ್ಟರುಗಳು ಅದನ್ನು ಹತ್ತಿಸಿಕೊಳ್ಳಲೇ ಇಲ್ಲ. ಪಾಪ! ಊರಲ್ಲೇ ಬಿಟ್ಟುಬಂದೆ."

ಅವನು ಹಾಂ ಹೂಂ ಎನ್ನಲಿಲ್ಲ. "ಶಂಕರ, ನನ್ನ ನಾಯಿಯೂ ಜೊತೆ ಇದ್ದಿದ್ದರೆ ಬಹಳ ಚೆನ್ನಾಗಿದ್ದಿತು ಅಲ್ಲವೇ?" ಎಂದ ತನ್ನತ್ತ ತಿರುಗಿ ವಿಷಾದದಲ್ಲಿ,

"ಹೂ, ಅದೇನು ಮಹಾ ಬಿಡು. ಇಲ್ಲಿ ಕಂತ್ರಿ ನಾಯಿ ಬೇಕಾದಷ್ಟಿವೆ."

ಮರುದಿನ ಬೆಳಿಗ್ಗೆ ಮುಖ ತೊಳೆಯುತ್ತಿದ್ದಾಗ ಮೆಣಸಿನ ಗಿಡಗಳಿಗೆ ನೀರು ಹಾಕಲು ಕೊಡಪಾನ ಎತ್ತಿಕೊಂಡ ನಾಗಪ್ಪಯ್ಯ ಅವನ ಹತ್ತಿರಕ್ಕೆ ಬಂದ, "ಏನೋ, ನೀನು ಇಲ್ಲಿ ಎಷ್ಟು ದಿನ ಇರುತ್ತೀಯೆ?" ಎಂದ.

ಬಾಯಿಯಲ್ಲಿದ್ದ ನೀರನ್ನು ತೆಂಗಿನ ಗುಂಡಿಗೆ ಉಗುಳಿ ಗಣೇಶ ನೋಡಿದ ನಾಗಪ್ಪಯ್ಯನ ಮುಖವನ್ನು. ಏಕೋ ಬಹಳ ಸಿಟ್ಟಿಗೆದ್ದಿದ್ದಾನೆ. 'ಇಲ್ಲಿಯೇ ಉಳಿಯಲು ಬಂದವನು' ಎಂದು ಈಗಾಗಲೇ ಹೇಳಿದರೆ ಅವನ ದರ್ಪದ ಇನ್ನೊಂದು ಪ್ರಶ್ನೆಗೆ ಉತ್ತರಿಸುವುದಕ್ಕೂ ತನಗೆ ತಿಳಿಯಲಾರದು ಎಂದು ತಕ್ಷಣ ಅವನ ಬುದ್ಧಿಗೆ ಹೊಳೆದು, "ಇನ್ನೂ ಯೋಚನೆ ಮಾಡಿಲ್ಲ" ಎಂದು ಬಿಟ್ಟ.

ಸಾಯಂಕಾಲ ಹತ್ತಿರದ ಶಾಲೆಯ ಎದುರು ಯಾವುದೋ ಮೇಳದವರ 'ಭಸ್ಮಾಸುರಮೋಹಿನಿ' ಎಂಬ ಯಕ್ಷಗಾನ ಬಯಲಾಟವಿತ್ತು. ಅಜ್ಜ, ಅಜ್ಜಿ ಮತ್ತು ಮನೆಯ ಎಲ್ಲ ಮಕ್ಕಳೊಡನೆ ಗಣೇಶನೂ ಹೋಗಿ ನೋಡಿದ. ಆಹಾ, ಎಷ್ಟು ಚೆನ್ನಾಗಿತ್ತು ಆಟ! ರಾತ್ರಿ ಬೆಳಗಿನವರೆಗೂ ಕಣ್ಣೆವೆಗಳನ್ನು ಮುಚ್ಚದೆ ನೋಡಿದ. ಭಸ್ಮಾಸುರನ ನೃತ್ಯವನ್ನು ನೋಡುತ್ತ ನೋಡುತ್ತ ತನ್ನನ್ನೇ ಮರೆತುಹೋಯಿತು ಅವನಿಗೆ. 'ಶಿವನಾ ಆಣತಿ ಶಿರದಲಿ ಧರಿಸಿ ಬಂದಿಹ ಭಸ್ಮಾಸುರ' ಎಂದು ಭಾಗವತರು ಸ್ವರ ಎತ್ತಿ ಆಲಾಪನೆ ಗೈಯುವಾಗ ಭಸ್ಮದ ತಟ್ಟೆಯನ್ನು ಕರದಲ್ಲಿ ಇರಿಸಿ 'ತಕಧೀಂ ತಕಧೀಂ' ಎಂದು ...ಕುಣಿದ ಭಸ್ಮಾಸುರನ ನೃತ್ಯವೈಖರಿ ಕಂಡು ದಂಗಾಗಿಹೋದ. ಬಹಳ ಸಮಯವಾಗಿತ್ತು ಇಂತಹ ಒಂದು ಉತ್ತಮವಾದ ಆಟವನ್ನು ನೋಡದೆ. ಯಾರ್ಯಾರ ಹುಟ್ಟು ಎಲ್ಲೆಲ್ಲಿ ಆಗುತ್ತದೆಯೋ ಯಾರಿಗೆ ತಾನೇ ಗೊತ್ತು? ಒಂದು ಸಣ್ಣ ಕಸದಿಂದ ಜನ್ಮತಳೆದ ಆ ಜೀವಿ ಶಿವಭಕ್ತನಾಗಿ ಕೊನೆಗೆ ಅಹಂಕಾರದ ಮೂರ್ತಿಯಾಗಿ ತನ್ನ ತಂದೆಗೇ ಎದುರು ನಿಂತು ತನ್ನ ತಲೆಗೆ ತಕ್ಕಂತೆ ತನ್ನ ಅಂಗೈಯಿಂದಲೇ ಭಸ್ಮವಾದ ಭಸ್ಮಾಸುರ!

ಆಟ ನೋಡಿ ಮನೆಗೆ ಹಿಂದಿರುಗಿದಮೇಲೆಯೂ ಅದೇ ಗುಂಗು. ಶಂಕರ, ಉಳಿದ ಮಕ್ಕಳು ಆಟದ ಪ್ರಭಾವಕ್ಕೊಳಗಾಗಿ ಮನೆತುಂಬ ದಿಂಗಣ ಹಾರಿ ತಮ್ಮ ಸಂತೋಷ ವ್ಯಕ್ತಪಡಿಸಿದರು. ಅವರೊಂದಿಗೆ ತಾನೂ ಸೇರಿಕೊಂಡ. ಶಿವನಂತೆ ಕುಣಿಯಲು ತಿಳಿಯದೇಹೋದರೂ ಹೆಜ್ಜೆ ತಪ್ಪಿಸಿ ತಪ್ಪಿಸಿ ಕುಣಿದ. ನಾಗಪ್ಪಯ್ಯ ಬಂದು ಎಲ್ಲರನ್ನೂ ಗದರಿಸಿದಮೇಲೆ ಅವನು ಹಾ....ಹೋ.... ಎನ್ನುತ್ತ ತಿಕ್ಕಿಕೊಂಡ ನಿದ್ದೆಗಣ್ಣನ್ನು. ಬಿಸಿಗಂಜಿಯನ್ನು ಉಂಡು ಹೊರ ಜಗಲಿಯ ಮೇಲೆ ಮೈಚೆಲ್ಲಿದವನಿಗೆ ಎಚ್ಚರವಾದಾಗ ಇಳಿಬಿಸಿಲು ತುಂಬಿತ್ತು ಒಳಗೆಲ್ಲ.

ಬದಿಯ ಕೋಣೆಯಲ್ಲಿ ಏನೋ ಚರ್ಚೆ. ಗಂಗಯ್ಯ ಮೆಲುಧ್ವನಿಯಲ್ಲಿ ಮಾತನಾಡುತ್ತಿದ್ದರು. ನಾಗಪ್ಪಯ್ಯನದು ಏರುಧ್ವನಿ. ಗಣೇಶ ಜಡವಾದ ತನ್ನ ಮೈಯನ್ನು ಒಂದು ಬಾರಿ ತಿಕ್ಕಿಕೊಂಡು ಎದ್ದು ಕೋಣೆಯ ಹತ್ತಿರ ಬಂದಾಗ ಹಠಾತ್ತನೆ ಒಳಗಿನಿಂದ ನಿಂತಿತು ಮಾತುಗಳು. ನಾಗಪ್ಪಯ್ಯ ಒಂದು ಬಾರಿ ಅವನನ್ನು ಕಣ್ಣು ಕೆಕ್ಕರಿಸಿ ನೋಡಿ ಹೊರಟುಹೋದ ಹೊರಗೆ. ಗಂಗಯ್ಯನ ಮುಖವೂ ಸಿಟ್ಟಿನಲ್ಲಿ ಭುಸುಗುಡುತ್ತಾ ಇದೆ. ಹಣೆಯ ಮೇಲೆ ನಿರಿಗೆಗಳು.

ನಾಲ್ಕು ದಿನಗಳು ಕಳೆದವು. ಶೀನಪ್ಪಯ್ಯ ಬೆಂಗಳೂರಿನಿಂದ ಹಿಂದಿರುಗಿದ ಕೊನೆಗೆ. ಇನ್ನುಮೇಲೆ ಬೆಂಗಳೂರಿನಲ್ಲಿಯೇ ಬಟ್ಟೆಯ ವ್ಯಾಪಾರವನ್ನು ಪ್ರಾರಂಭಿಸಲು ಅದಕ್ಕೆ ಬೇಕಾದ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡೇ ಹಿಂದಿರುಗಿದ್ದ. ಮನೆಗೆ ಬಂದ ತಕ್ಷಣವೇ ಆಸ್ತಿ ಪಾಲಾಗಬೇಕೆಂಬ ಬೇಡಿಕೆ ಸಲ್ಲಿಸಿದ ಅಣ್ಣನಿಗೆ. ಹಿರಿಯವನಾದ ತಂದೆಯನ್ನು ಕೇಳುವುದೂ ಅನಗತ್ಯ! ನಿಂತ ಕಾಲಿನಲ್ಲಿ ಈಗಿಂದೀಗಲೇ ಪಾಲಾಗಬೇಕೆಂಬ ಹಟ. ಆದಷ್ಟು ಬೇಗ ತನ್ನ ಪಾಲನ್ನು ತೆಗೆದುಕೊಂಡು ಹೆಂಡತಿ ಮತ್ತು ಎರಡು ಮಕ್ಕಳೊಡನೆ ಊರು ಬಿಡುವ ಯತ್ನ.

ನಾಗಪ್ಪಯ್ಯ ಕೆರಳಿಹೋದ. "ಪಾಲು ಮಾಡೋದಕ್ಕೆ ಇಲ್ಲೇನಿದೆ ಮಣ್ಣು? ಇರುವ ಐದು ಎಕರೆಯಲ್ಲಿ ನಿನಗರ್ಧ ಕೊಟ್ಟು, ನಾನೂ ನನ ಸಂಸಾರವೂ ಇಲ್ಲಿ ಮಣ್ಣು ತಿನ್ತಾ ಕೂತಿರಬೇಕೇನು?"

"ಈಗೇನು ಇಲ್ಲಿ ಚಿನ್ನ ಬೆಳೀತಾ ಇದ್ದೇನೆಯೆ? ನನ್ನ ಪಾಲು ಕೊಡು, ನನ್ನ ಪಾಡಿಗೆ ಹೊರಟುಹೋಗ್ತೇನೆ."

ಪಾಲು ಕೊಡಲು ಅಲ್ಲಿ ಹೇಳಿಕೊಳ್ಳುವ ಸೊತ್ತು ಎಲ್ಲಿದೆ? ಫಲಬರುವ ಐವತ್ತು ತೆಂಗಿನ ಮರಗಳು, ಮೂರು ಎಕರೆ ಗದ್ದೆ, ಮನೆಸ್ಥಳ, ಕಾಡು ಸೇರಿ ಎರಡು ಎಕರೆ, ಒಟ್ಟು ಐದು ಎಕರೆ ಎನ್ನುವ ಸ್ಥಳದಲ್ಲಿ ಪಾಲು ಮಾಡುವುದಾದರೂ ಹೇಗೆ?

"ನನಗೆ ಭೂಮಿ ಬೇಕಾಗಿಲ್ಲ—"ಸ್ಪಷ್ಟವಾಗಿ ಅಂದ ಶೀನಪ್ಪಯ್ಯ. "ತಕ್ಕಡಿಯಲ್ಲಿ ತೂಗಿದಂತೆ ಪಾಲಿನಷ್ಟು ಕೇಳುವುದಿಲ್ಲ. ಹೇಗೂ ನೀನು ಹಿರಿಯವ, ನಿನ್ನ ಮಕ್ಕಳ ಜೊತೆ ಅಕ್ಕನ ಮಕ್ಕಳೂ, ಅಪ್ಪ ಅಮ್ಮನೂ ಇದ್ದಾರೆ. ಒಂದು ಹತ್ತು ಸಾವಿರ ಕೊಡು, ಸಾಕು."

ಹತ್ತು ಸಾವಿರ! ಅಂಗೈಮೇಲೆ ನೂರರ ಒಂದು ನೋಟನ್ನೂ ಕಂಡರಿಯದ ನಾಗಪ್ಪಯ್ಯ ನೂರರ ನೂರು ನೋಟುಗಳನ್ನು ಎಲ್ಲಿಂದ ತರುತ್ತಾನೆ? ಬಡತನದ ಜೀವನವನ್ನುಂಡ ಅಣ್ಣತಮ್ಮಂದಿರಲ್ಲಿ ಧರ್ಮಬುದ್ಧಿ ಘೋರವಿಟವಾಗಿತ್ತೋ ಅಥವಾ ಸ್ವಾರ್ಥದ ಕೈ ಮೇಲಾಗಿತ್ತೋ ಎರಡು ದಿನಗಳಲ್ಲಿ ಮನೆಯಲ್ಲಿ ಭೀಕರ ಗುಡುಗು ಸಿಡಿಲು. ಒಳಗೆ ಹೆಂಗಸರ ಬಿಕ್ಕುಗಟ್ಟಿದ ಮೌನದ ಕ್ಷೋಭೆಯೂ ಭುಸುಗುಡುವ ಸದ್ದು. ತಂದೆಯ ಮಾತು ಕೇಳುವ ತಾಳ್ಮೆಯಿರಲಿಲ್ಲ ಮಕ್ಕಳಲ್ಲಿ. ಪಾಲು ಕೇಳುವಾಗ ಕಾನೂನು ಪ್ರಕಾರ ಕೊಡಬೇಕಾದ್ದು ಧರ್ಮ. ಅಲ್ಲಿ ವೈಯಕ್ತಿಕ ಪ್ರಶ್ನೆಯಿಲ್ಲ.

ಮೊದಲೇ ನಾಗಪ್ಪಯ್ಯನಿಗೆ ಸಂಸಾರ ತಾಪತ್ರಯ. ಈಗ ಪಾಲಿನ ರಗಳೆ. ಆಸ್ತಿಯನ್ನು ಎರಡು ಪಾಲು ಮಾಡಿ ತಮ್ಮನ ಪಾಲಿನ ಕ್ರಯವನ್ನು ಕಟ್ಟಿದಾಗ ಅವನ ಭೂಮಿಗೆ ಆದ ಬೆಲೆ ಕೇವಲ ಐದು ಸಾವಿರ. ಆದರೆ ಶೀನಪ್ಪಯ್ಯ ಮನೆ ಮತ್ತು ಅದರ ಚರಸೊತ್ತುಗಳಲ್ಲಿಯೂ ಬೇಡಿದ ಪಾಲನ್ನು. ಧೂರ್ತಬುದ್ಧಿ! ನಾಗಪ್ಪಯ್ಯ ಸಿಡಿಮಿಡಿಗೊಳ್ಳುತ್ತ ಕೊನೆಗೂ ಹತ್ತು ಸಾವಿರಕ್ಕೆ ಒಪ್ಪಂದದ ಸಹಿ ಹಾಕಿದ. ಹೆಂಡತಿಯ ಚಿನ್ನಾಭರಣ, ಸುನಂದೆಯ ಮೈಮೇಲೆ ಇರುವ ಅಕ್ಕನ ಆಭರಣಗಳನ್ನು ಒತ್ತೆಯಿಟ್ಟು, ಎಲ್ಲೆಲ್ಲಿಂದಲೋ ಸಾಲಮಾಡಿ ಹೇಗೋ ಹೊಂದಿಸಿದ ಹತ್ತು ಸಾವಿರ. ಶೀನಪ್ಪಯ್ಯ ತನ್ನ ಪಾಲಿನ ಹಣ ಕೈಗೆ ದೊರೆತ ತಕ್ಷಣ ಹೆಂಡತಿಮಕ್ಕಳೊಡನೆ ಊರು ಬಿಡುವ ತಯಾರಿ ನಡೆಸಿದ.

ಗಂಗಯ್ಯ ಅನುಮಾನ ಬೆರೆತ ಸ್ವರದಲ್ಲಿ ಕೇಳಿದ: "ಹೇಗೂ ದೊಡ್ಡ ಪಟ್ಟಣಕ್ಕೆ ಹೋಗುವವನು. ಸಹಾಯಕ್ಕೆ ಒಬ್ಬ ಹುಡುಗ ಬೇಡವೇ?"

"ಅಲ್ಲಿ ಸಿಗಬಹುದು ಯಾರಾದರೂ."

"ನಂಬಿಗಸ್ಥನು ಸಿಗುವುದು ಕಷ್ಟ. ಗಣೇಶ ಇದ್ದಾನಲ್ಲ, ಕರ್ಕೊಂಡು ಹೋಗು."

"ಯಾಕೆ?, ಆ ಪೋರ ಇಲ್ಲಿ ಉಳಿಯುವುದಕ್ಕೆ ಬಂದಿದ್ದಾನೆಯೋ?"

"ಹೂಂ, ಏನಾದರೂ ವ್ಯವಸ್ಥೆ ಮಾಡಬೇಕಲ್ಲ."

"ನಿಮ್ಮ ತಲೆ!" ಹಣೆ ಚಚ್ಚಿಕೊಂಡ ಶೀನಪ್ಪಯ್ಯ, "ನಿಮಗ್ಯಾಕೆ ಇಲ್ಲದ ಚಿಂತೆ? ಕೃಷ್ಣಯ್ಯ ನೋಡಿಕೊಳ್ಳಲಿ. ನನಗಂತೂ ಅವನು ಬೇಡವೇ ಬೇಡ."

ಗಣೇಶ ಒಳಗೊಳಗೇ ಉರಿದುಹೋದ. ಒಡಹುಟ್ಟಿದ ಅಕ್ಕನ ಮಗನ ಮೇಲೆ ಆಸಕ್ತಿಯಿಲ್ಲದ ತಮ್ಮ! ನಾಗಪ್ಪಯ್ಯನೂ, "ಅವನನ್ನು ಇಲ್ಲಿಂದ ಕರ್ಕೊಂಡು ಹೋಗು. ಶಂಕರ-ಸುನಂದೆಯರನ್ನು ನಾನು ಹೇಗಾದರೂ ಸಾಕಿಕೊಳ್ತೇನೆ" ಎಂದ. ಆ ಮಾತಿಗೂ ಒಪ್ಪಿಕೊಳ್ಳದ ಶೀನಪ್ಪಯ್ಯ ಹೆಂಡತಿ ಮಕ್ಕಳೊಡನೆ ತನ್ನ ಪಾಡಿಗೆ ತಾನೊಬ್ಬನೇ ಹೊರಟುಹೋದ ಬೆಂಗಳೂರಿಗೆ.

ಮತ್ತೆ ಕಳೆದವು ಎರಡು ದಿನಗಳು. ಅನಿರೀಕ್ಷಿತವಾಗಿ ಒದಗಿಬಂದ ಸಾಲದಿಂದ ಚಿಂತಿತನಾದ ನಾಗಪ್ಪಯ್ಯನಿಗೆ ಮನೆ ಸೇರಿದ ಗಣೇಶನೂ ಬೆನ್ನಮೇಲಿನ ಹುಣ್ಣಿನಂತಾದ. ಈ ಹುಣ್ಣಿನ ನಿವಾರಣೆಯಾಗದ ಹೊರತು ನೆಮ್ಮದಿಯಿಲ್ಲ ಮನಸ್ಸಿಗೆ. ಈಗಲೂ ತಾನು ಮಾತನಾಡದೆ ಕುಳಿತರೆ ಆಮೇಲೆ ತನಗೇ ಕಷ್ಟ.

ಆ ದಿನ ಶಂಕರ, ಸುನಂದೆಯ ಜೊತೆಯಲ್ಲಿ ಕುಳಿತು ಪಾಟಿಯ ಮೇಲೆ ಇಂಗ್ಲಿಷ್ ಅಕ್ಷರಗಳನ್ನು ಬರೆಯುತ್ತಾ ಇದ್ದ ಗಣೇಶನ ಹತ್ತಿರವೇ ಬಂದು ನಿಂತ ನಾಗಪ್ಪಯ್ಯ ಕೆರಳಿಸಿದ ಕಣ್ಣುಗಳನ್ನು:

"ಏನ್ಮಾಡ್ತಾ ಇದ್ದೀಯೋ?"

"ಮಾವಾ, ಇವನು ಎಷ್ಟು ಚೆನ್ನಾಗಿ ಇಂಗ್ಲಿಷ್ ಬರೀತಾನೆ, ನೋಡು! ಪಾಟಿಯನ್ನು ಅವನ ಮುಂದೆ ಹಿಡಿದ ಶಂಕರ, "ಈ ವರ್ಷ ನಮ್ಮ ಶಾಲೆಗೇ ಅವನೂ ಸೇರಿಕೊಳ್ತಾನಂತೆ...."

"ಮಾಸ್ತರರಿಗೆ ಮೊದ್ಲೇ ಹೇಳಿಬಿಟ್ಟಿದ್ದೀವಿ, ನಮ್ಮ ಶಾಲೆಗೆ ಇವನೂ ಮುಂದಿನ ವರ್ಷದಿಂದ ಬರ್ತಾನೆ ಅಂತ" ಎಂದಳು ಸುನಂದ ಹೆಮ್ಮೆಯಲ್ಲಿ.

ನಾಗಪ್ಪಯ್ಯ ಕಣ್ಣು ಕೆಕ್ಕರಿಸಿ ನೋಡಿದ ಗಣೇಶನನ್ನು. ನಿಜಸಂಗತಿ

ಯನ್ನು ಈವರೆಗೂ ಅವನಿಂದ ಎಲ್ಲರೂ ಮುಚ್ಚಿಟ್ಟಿದ್ದೇ ದೊಡ್ಡ ತಪ್ಪು. ಮುಚ್ಚಿರಿಸಿದ್ದ ಹೊದಿಕೆಯನ್ನು ಸರಿಸಿ ಅವನ ನಿಜಸ್ಥಿತಿಯ ಅರಿವು ಮಾಡಿ ಕೊಡಲೇಬೇಕಿತ್ತು. ತನ್ನಿಂದ ಸಾಧ್ಯವಾಗಲೇ ಇಲ್ಲ. "ಯಾವ ಕಾಲಕ್ಕೂ ಗಣೇಶನಿಗೆ ತಾನು ಬೇರೆಯವರ ಮಗ ಎನ್ನುವುದು ತಿಳಿಯಬಾರದು!" ಅಕ್ಕ ಅವನನ್ನು ಸಾಕಿಕೊಳ್ಳುವ ಮೊದಲು ಹೇಳಿದ ಮಾತುಗಳು. ಅವಳು ಅವನನ್ನು ಹೊಟ್ಟೆಮಗನಿಗಿಂತಲೂ ಅಧಿಕಪ್ರೀತಿಯಿಂದ ಬೆಳೆಸಿದ್ದಳು. ಹಾಗೆ ಎಲ್ಲರಿಂದಲೂ ಸಾಧ್ಯವೇ? ಈವರೆಗೂ ತಂದೆಯ ಸ್ಥಾನದಲ್ಲಿದ್ದ ಕೃಷ್ಣಯ್ಯನಿಗೇ ಬೇಡವಾಗಿ ದ್ದಾನೆ ಇವನು! ನನ್ನ ಕುತ್ತಿಗೆಗೆ ಉರುಳು ಮಾಡುವ ಆಲೋಚನೆ. ಅಕ್ಕ ತೀರಿಹೋದಾಗಲೇ ಅವನ ವಿಷಯದಲ್ಲಿ ಹುಟ್ಟಿಕೊಂಡ ಸಮಸ್ಯೆ ಅವನನ್ನು ಪುನಃ ಬೆಳ್ಳಿಪಾಡಿಗೆ ಕಳುಹಿಸಿದಮೇಲೆ ಬಗೆಹರಿಯಿತು ಎಂದುಕೊಂಡಿದ್ದೆ. ಆದರೆ....ಗಣೇಶ ಬೆಳ್ಳಿಪಾಡಿಯಲ್ಲಿ ಹೇಳದೆ ಇಲ್ಲಿಗೆ ಓಡಿಬಂದು ಅನೇಕ ದಿನ ಗಳಾದರೂ ಕೃಷ್ಣಯ್ಯನಿಂದ ಕಾಗದವಿಲ್ಲ, ಅವನೂ ಆತಂಕಗೊಂಡು ಬರಲಿಲ್ಲ. ಓಹೋ! ಪೀಡೆ ಹೊರಟುಹೋದದ್ದು ಒಳಿತೇ ಆಯಿತೆಂದುಕೊಂಡಿರಬೇಕು.

ಯೋಚಿಸುತ್ತಿದ್ದಂತೆ ತಲೆ ಕಾದ ಹಂಚಿನಂತಾಗಿ ಹಿಂದೆಮುಂದೆ ನೋಡದೆ ತಂದೆಯನ್ನು ಕರೆದು ಒಂದೇ ಉಸುರಿಗೆ ಏನೇನೋ ಒದರಾಡಿದ. ಹತ್ತಿರದಲ್ಲಿ ಗಣೇಶನಿದ್ದಾನೆ ಎನ್ನುವುದನ್ನೂ ಗಮನಿಸಲಿಲ್ಲ. ಹಳೆಯದೆಲ್ಲವೂ ಒಂದೊಂದಾಗಿ ಬೆಳಕಿಗೆ ಬರುತ್ತ ಮುಚ್ಚಿದ್ದ ಹೊದಿಕೆಯನ್ನೂ ಕಿತ್ತೆಸೆದವು. ಅಗೋಚರವಾದ, ಅಸತ್ಯವೆನಿಸಿದ ವಿಷಯಗಳು ಸಂಪೂರ್ಣ ಬಯಲಾದಾಗ ಗಣೇಶನಿಗೆ ಜೋರಾಗಿ ಕೂಗಿಕೊಳ್ಳಬೇಕೆಂದೆನಿಸಿತು.

ಗಣೇಶನ ಕೈಯಲ್ಲಿದ್ದ ಪಾಟಿ, ಬರೆಯುವ ಕಡ್ಡಿ ಜಾರಿ ಬಿದ್ದಿತು ಕೆಳಗೆ. ತನ್ನ ಎಡಬಲ ನೋಡಿದ. ಶಂಕರ ಮತ್ತು ಸುನಂದೆ ಎದ್ದು ಹೋಗಿಬಿಟ್ಟಿದ್ದರು. ಕುಂತಿದೇವಿ ತನ್ನ ಮಗನನ್ನು ಗಂಗೆಪಾಲು ಮಾಡಿದ ಕಥೆ ಇದ್ದಕ್ಕಿದ್ದಂತೆ ನೆನಪಿಗೆ ಬಂದು, 'ಹೋ, ಇದೇನು ಹೀಗಾಯಿತು?' ಎಂದುಕೊಂಡ....

"ಮಾವಾ...." ಕುಳಿತಲ್ಲಿಂದ ಧಡಕ್ಕನೆ ಮೇಲೆದ್ದು ಹತ್ತಿರ ಬಂದ: "ನೀನೀಗ ಹೇಳಿದ ಎಲ್ಲ ವಿಷಯಗಳೂ ನಿಜವೇ?"

ಸರ್ರನೆ ಅವನತ್ತ ಹೊರಳಿದ ನಾಗಪ್ಪಯ್ಯ, "ಸುಳ್ಳು ಬೊಗಳುವುದು ನನಗೆ ಗೊತ್ತೇ ಇಲ್ಲ. ಇದು ಹೇಗಾಯಿತು ಎಂದು ನಿನ್ನನ್ನು ಸಾಕಿದ

ಅಪ್ಪನ್ಹತ್ರ ಹೋಗಿ ಕೇಳು. ನಾನು ಸಾವಿರ ಬಾರಿ ಹೇಳಿದ್ದೆ ಅಕ್ಕ್ನ ಹತ್ರ." ಅವನು ತನ್ನ ತಂದೆಯತ್ತ ತಿರುಗಿ ಹೇಳಿದ, "ನಾಳೆ ಇವನನ್ನ ಅನಾಥಾಶ್ರಮಕ್ಕೆ ಸೇರಿಸುವ ಏರ್ಪಾಟುಮಾಡ್ತೀನಿ. ಆಮೇಲೆ ನನ್ನನ್ನ ಹಾಗೆ ಹೀಗೆ ಅನ್ನಬೇಡ!"

ಗಂಗಯ್ಯನ ಮುಖಚಹರೆ ಬದಲಾಗಿಹೋಗಿತ್ತು. ಬಾಗಿಲ ಮರೆಯಲ್ಲಿ ಇದ್ದ ಸಣ್ಣಮ್ಮನನ್ನ ನೋಡಿದ. ಎಣ್ಣೆ ತೀರಲು ಸಿದ್ಧವಾದ ದೀಪದಂತೆ ತಾವಿಬ್ಬರೂ. ಗಣೇಶನಿಗೆ ಯಾವ ರೀತಿಯಲ್ಲೂ ಬೆಳಕು ನೀಡಲು ಸಾಧ್ಯವಿಲ್ಲ. ತಮ್ಮಿಂದ. ಅಲ್ಲಿರುವದಕ್ಕಿಂತಲೂ ಅವನ ಪಾಲಿಗೆ ಅನಾಥಾಶ್ರಮ ಎಷ್ಟೋ ವಾಸಿ. ಬಹಳ ಮೊದಲೇ ಸೇರಿಸಬೇಕಿತ್ತು. ಆದರೆ ಆ ಹುಡುಗನ ಹಣೆಯಲ್ಲಿ ಏನು ಬರೆದಿದ್ಯೋ....ಗಂಗಯ್ಯ ಮಗನ ಮಾತಿಗೆ ಉತ್ತರಿಸದೆ ಸರಿದುಹೋದ ಅಲ್ಲಿಂದ.

ಗಣೇಶನಿಗೆ ಸುತ್ತಲೂ ಕತ್ತಲೆಯಾದಂತೆ ಯಾವುದೋ ಸುಳಿಯೊಳಗೆ ಸಿಕ್ಕುಬಿದ್ದಂತೆ ಭಾಸವಾಯಿತು. ತಾನು ಹೇಗೆ ಬಂದೆ ಇಲ್ಲಿಗೆ? ಅಕ್ಕ ತನ್ನ ತಾಯಿಯಲ್ಲ. ಅವಳು ಸಾಕುತಾಯಿಯಂತೆ. ಇದು ಏನಾಶ್ಚರ್ಯ....ತಾನು ಗಣಪಿಯ ಮಗನಂತೆ! ತೋನ್ಸೆ ನಿವಾಸಿಯಾಗಿದ್ದ ಹೊನ್ನಪ್ಪನ ಮಗಳು ಗಣಪಿ ತನಗೆ ತಾಯಿ! ಹಾಗಿದ್ದರೆ ತಂದೆ ಎಲ್ಲಿ? ಇದೇಕೆ ಹೀಗಾಯಿತು? ತನಗೆ ಯಾರೊಬ್ಬರೂ ಯಾಕೆ ತಿಳಿಸಲಿಲ್ಲ? "ಅಜ್ಜ, ನೀನಾದರೂ ಸರಿಯಾಗಿ ಎಲ್ಲ ಹೇಳು" ಎಂದು ಗಂಗಯ್ಯನ ಹಿಂದೆಯೇ ಓಡಿಹೋಗಿ ಕೇಳುವ ಆಸೆಯಾದರೂ ಮರಗಟ್ಟಿದಂತೆ ನಿಂತುಬಿಟ್ಟ. ಅಜ್ಜ ಎಂದು ತಾನು ಈವರೆಗೂ ತಿಳಿದು ಕೊಂಡಿದ್ದವನೂ ತನಗೆ ಅಜ್ಜನಲ್ಲ. ಬಾಗಿಲ ಮರೆಯಲ್ಲಿ ನಿಂತವಳೂ ಅಜ್ಜಿಯಲ್ಲ....ಛೋ!....ಇಲ್ಲ, ಹೀಗೆ ಆಗಲು ಸಾಧ್ಯವಿಲ್ಲ.

ನಾಗಪ್ಪಯ್ಯ ಹೇಳಿದ ವಿಷಯಗಳನ್ನು ಹೆಚ್ಚು ಆಳವಾಗಿ ಚಿಂತಿಸುವ, ಪರಿಸ್ಥಿತಿಯನ್ನು ಗಂಭೀರವಾಗಿ ಸ್ವೀಕರಿಸುವ ವಯಸ್ಸು ಅವನದಲ್ಲ. ಆದರೂ ಈ ಗಳಿಗೆಯಲ್ಲಿ ಬಿರುಗಾಳಿಗೆ ಸಿಲುಕಿದ ಎಳೆಲತೆಯಂತೆ ಬಸವಳಿದು ಕುಳಿತು ಬಿಟ್ಟ ನೆಲದ ಮೇಲೆ. ಅದೇ ಸಮಯದಲ್ಲಿ ಹೊರಗೆ ನಾಯಿ ಬೊಗಳಿದ ಸದ್ದು. ಯಾರಪ್ಪ ಈ ಹೊತ್ತಿನಲ್ಲಿ? ಎಂದುಕೊಳ್ಳುತ್ತಿದ್ದಂತೆ ದಪ್ಪ ಚರ್ಮದ ಜೋಡಿನ ಚರ್‌ಪರ್ ಶಬ್ದದೊಂದಿಗೆ ಕೆಮ್ಮುತ್ತ ಅಂಗಳದಲ್ಲಿ ಕಾಲಿರಿಸಿದ ಕೃಷ್ಣಯ್ಯ.

ಸಮಯಕ್ಕೆ ಸರಿಯಾಗಿ ಆಗಮಿಸಿದ ಕೃಷ್ಣಯ್ಯನನ್ನು ನೋಡಿ ನಾಗಪ್ಪಯ್ಯನ ಮುಖದ ತುಂಬ ಸಂತಸದ ಓಕುಳಿ. ಎಂದಿಗಿಂತಲೂ ಹೆಚ್ಚಿನ ಉಪಚಾರದ ನುಡಿಗಳಲ್ಲಿ ಬರಮಾಡಿಕೊಂಡ ಅವನನ್ನು. ಇಷ್ಟು ವರ್ಷಗಳಿಂದಲೂ ಬಚ್ಚಿಟ್ಟುಕೊಂಡ ಸತ್ಯವನ್ನು ಬಯಲಿಗೆಳೆದಮೇಲೆ ಒಳಗೊಳಗೇ ಅಳುಕುಂಟಾಗಿತ್ತು ಅವನಿಗೆ. ಅಕ್ಕ-ಕೃಷ್ಣಯ್ಯರ ಮಡಿಲಲ್ಲಿ ಬೆಳೆದ ಗಣೇಶ ಅವರಿಗೆ ಮನೆಮಗನಂತೆ. ಅಕ್ಕ ತೀರಿಹೋದಮೇಲೆಯೂ ಕೃಷ್ಣಯ್ಯ ಸತ್ಯ ಸಂಗತಿಯನ್ನು ಅವನಿಗೆ ತಿಳಿಸಿರಲಿಲ್ಲ. ತನಗೋ ಈ ಅಧಿಕಪ್ರಸಂಗ ಬೇಡವಾಗಿತ್ತು. ಪಾಪ. ಹೇಗಾಗಿಹೋಗಿದೆ ಗಣೇಶನ ಮುಖ! ಕೃಷ್ಣಯ್ಯ ಅವನನ್ನು ಹುಡುಕಿಕೊಂಡು ಬಂದಿರಬೇಕು. ಅದೇನು ಪುತ್ರವ್ಯಾಮೋಹ! ತನಗೆ ತನ್ನ ಮಕ್ಕಳ ಮೇಲೆ ಪ್ರೀತಿ ಅಷ್ಟಕಷ್ಟೆ. ಇವನಿಗೆ ಗಣಸಿಯ ಮಗನಮೇಲೆ ಪ್ರೀತಿ!

ಕೃಷ್ಣಯ್ಯ ಒಳಗೆ ಬರುತ್ತಿದ್ದಂತೆ ಶಂಕರ-ಸುನಂದೆ ಓಡೋಡಿ ಬಂದರು ಅವನ ಹತ್ತಿರ. ಆದರೆ ಅವನ ಕಣ್ಣುಗಳು ಹುಡುಕಾಡಿದವು ಮೂರನೆಯವನಿಗಾಗಿ. ಅದೋ ಅಲ್ಲಿ ಮೂಲೆ ಸೇರಿ ಮುದ್ದೆಯಾಗಿ ಕುಳಿತಿದ್ದಾನೆ. ಹತ್ತಿರ ಬಂದು ತಲೆ ನೇವರಿಸಿದ, "ಹೇಳದೆ ಕೇಳದೆ ಇಲ್ಲಿಗೆ ಯಾಕೆ ಬಂದೆ? ಕತ್ತೆ, ನಿನ್ನ ಚರ್ಮ ಸುಲಿದು ಹೋಗೋಣವೆಂದು ಬಂದೆ ಇಲ್ಲಿಗೆ...."

"ಅಪ್ಪಾ....!" ಎಂದ ಅವನು ಆರ್ತನಾಗಿ.

ರಾತ್ರಿ ಊಟದ ಸಮಯದಲ್ಲಿ ನಾಗಪ್ಪಯ್ಯ ತನ್ನ ಆಸ್ತಿ ಪಾಲಾದ ವಿಷಯವನ್ನೆಲ್ಲ ವಿವರವಾಗಿ ಹೇಳುತ್ತ ಶೀನಪ್ಪಯ್ಯ ಹೊರಟುಹೋದುದಕ್ಕೆ ಅಸಮಾಧಾನ ವ್ಯಕ್ತಪಡಿಸಿ, ಸ್ವಲ್ಪಹೊತ್ತಿನ ಮೊದಲು ಗಣೇಶನಿಗೆ ತಿಳಿಸಿದ ವಿಷಯಗಳನ್ನೂ ಸ್ಪಷ್ಟಪಡಿಸಿದ ಕೃಷ್ಣಯ್ಯನಿಗೆ. ತುತ್ತು ಕೈಗೆತ್ತಿಕೊಂಡ ಕೃಷ್ಣಯ್ಯ ಹುಬ್ಬುಗಂಟಿಕ್ಕಿ ವಿಷಾದದಿಂದ ಹಣೆ ತಟ್ಟಿಕೊಂಡ.

"ಇವತ್ತಲ್ಲ ನಾಳೆಯಾದರೂ ಅವನಿಗೆ ತಿಳಿಯಲೇಬೇಕಿತ್ತು. ಇನ್ನೇಲೆ ಇಲ್ಲೇ ಉಳಿಯೋದಕ್ಕೆ ಬಂದಿದ್ದ ಅವನು. ನಿನ್ನ ಮಕ್ಕಳನ್ನು, ಅವನನ್ನು ನೋಡಿಕೊಳ್ಳಲು ಸಾಧ್ಯವಿಲ್ಲವೆಂದು ಸತ್ಯಸಂಗತಿ ತಿಳಿಸಿ ಅನಾಥಾಶ್ರಮಕ್ಕೆ ಸೇರಿಸೋಣ ಎಂದುಕೊಂಡೆ."

ಗಣೇಶ ಅನ್ನದ ಅಗುಳನ್ನು ಕೈಯಿಂದ ಹಿಚುಕುತ್ತ ನೋಡಿದ ಕೃಷ್ಣಯ್ಯನನ್ನು.

"ನೀನು ಮಾಡಿದ್ದು ಸರಿ. ಆದರೆ ಅನಾಥಾಶ್ರಮಕ್ಕೆ ಯಾಕೆ ಸೇರಿಸ್ತಿ?" ನಿಧಾನವಾಗಿ ಅವನೆಂದ, "ನನ್ನ ಮನೆಯಲ್ಲಿ, ನನ್ನ ಜೊತೆಯಲ್ಲಿ ಇಷ್ಟು ವರ್ಷಗಳಿಂದಲೂ ಇಲ್ಲವೇ ಅವನು? ಇನ್ನೂ ಇರ್ತಾನೆ. ನನಗೆ ಕೆಲಸಕ್ಕೆ ಅವನು ಅತಿ ಅಗತ್ಯ. ಅವನಿಗೇ ಬೇರೆ ಕಡೆ ಹೋಗಬೇಕು ಅನ್ನಿಸಿದರೆ ಹೋಗ್ತಾನೆ!"

"ಆಮೇಲೆ ಮತ್ತೆ ಅವನನ್ನು ಇಲ್ಲಿಗೆ ಕಳುಹಿಸಬೇಡ. ಅಲ್ಲ, ನಿನಗೇ ಆದರೂ ಯಾಕೆ ಅವನಮೇಲೆ ಅಷ್ಟು ಮೋಹ? ಅವನು ಎಲ್ಲಿಗೆ ಬೇಕಾದರೂ ಹೋಗಲಿ."

ಕೃಷ್ಣಯ್ಯ ತುದಿಯಲ್ಲಿ ಕುಳಿತ ಗಣೇಶನನ್ನು ನೋಡಿದ, "ಹೂಂ, ಆದಷ್ಟು ಬೇಗ ನನ್ನ ಮಕ್ಕಳನ್ನೂ ಚಿಕ್ಕಪಾಡಿಗೆ ಕರ್ಕೊಂಡು ಹೋಗ್ತೇನೆ. ಇತ್ತೀಚಿನ ಕೆಲವು ದಿನಗಳಲ್ಲಿ ಸುಮಿತ್ರಳ ಸ್ವಭಾವವೂ ಬದಲಾದಂತಿದೆ."

"ನೀನೊಬ್ಬ ಪುಕ್ಕಲ....ಅವಳಿಗೆ ಹೆದರಿ ಸಾಯ್ತಿಯಲ್ಲೋ!"

"ಇನ್ನೇನ್ಮಾಡ್ಲಿ? ಅವಳು ತಾನಾಗಿಯೇ ಮಕ್ಕಳನ್ನು ಕರೆಯಿಸಿಕೊಳ್ಳಿ ಎನ್ನಬೇಕು. ಆಗ ನಾನು ಕರ್ಕೊಂಡುಹೋದರೆ ಚೆಂದ. ಇಲ್ಲವಾದರೆ ನನಗೂ ಕಷ್ಟ, ಮಕ್ಕಳಿಗೂ ಅವಳಿಂದಾಗಿ ಗೋಳು...."

ಊಟದನಂತರ ರಾತ್ರಿ ಬಹಳ ಹೊತ್ತಿನವರೆಗೆ ನಾಗಪ್ಪಯ್ಯ ಮತ್ತು ಕೃಷ್ಣಯ್ಯನಲ್ಲಿ ನಡೆಯಿತು ಮಾತುಕಥೆ. ಗಣೇಶ ಸ್ವಲ್ಪ ಹೊತ್ತು ಕುತೂಹಲದಿಂದ ಆಲಿಸಿದರೂ ಅದನ್ನು ಗ್ರಹಣ ಮಾಡಿಕೊಳ್ಳುವ ಶಕ್ತಿಯಿಲ್ಲದೆ ಶಂಕರ-ಸುನಂದೆಯ ಹತ್ತಿರ ಬಂದು ಅವರೊಡನೆ ತಾನೂ ಮಲಗಿಕೊಂಡ. ಈವರೆಗೂ ತನ್ನ ತಮ್ಮ ಮತ್ತು ತಂಗಿ ಎಂದು ನಂಬಿಕೊಂಡ ಆ ಎರಡು ಜೀವಗಳನ್ನು ಸ್ನೇಹದಪ್ಪಿದ ಕತ್ತಲೆಯಲ್ಲಿ. ಓ!....ಇನ್ನು ತನಗೂ ಇವರಿಗೂ ಯಾವ ರೀತಿ ಸಂಬಂಧವೂ ಇಲ್ಲ....ಅವನು ಬಿಕ್ಕಳಿಸಿದ ತನ್ನಲ್ಲೇ.

ರಾತ್ರಿ ಬಹಳ ಹೊತ್ತಿನನಂತರ ತನ್ನ ಮಕ್ಕಳೊಡನೆ ಮಲಗಲೆಂದು ಕೃಷ್ಣಯ್ಯ ಬಂದಾಗ ಇನ್ನೂ ಎಚ್ಚರವಾಗಿಯೇ ಇದ್ದ ಗಣೇಶ. ಸಣ್ಣ ದೀಪವೊಂದು ಹೊಗೆ ಕಾರುತ್ತ ಉರಿಯುತ್ತಿತ್ತು ಮೂಲೆಯಲ್ಲಿ.

"ಅಪ್ಪಾ!...." ಮೆಲ್ಲನೆ ಕರೆದ ಗಣೇಶ ಸರಿದ ಅವನ ಹತ್ತಿರಕ್ಕೆ.

"ಏನೋ, ಇನ್ನೂ ತಿಗಣೆಗಳು ಕಚ್ತಾ ಇವೆಯೇನು?"

"ಅಪ್ಪಾ!...." ಅವನು ಎರಡೂ ಕೈಗಳನ್ನು ನೆಲಕ್ಕೆ ಊರಿ ಇನ್ನಷ್ಟು

ಹತ್ತಿರಕ್ಕೆ ಬಂದು ಒಮ್ಮೆಲೇ ತನ್ನ ತಲೆಯನ್ನು ಇಟ್ಟ ಅವನ ತೊಡೆಯ ಮೇಲೆ. ಅರಿಯಲಾಗದ ಉದ್ವೇಗದಲ್ಲಿ ಬಿಕ್ಕಳಿಸಿದ ಜೋರಾಗಿ, "ಅಪ್ಪಾ!...."

ಹೌದು, ಅವನು ಮೊದಲಿನಿಂದಲೂ ಕರೆಯುತ್ತಾ ಇದ್ದದ್ದು ಹಾಗೇ. ಕೃಷ್ಣಯ್ಯ ಎನ್ನುವವನು ತನ್ನ ಅಪ್ಪ ಎಂದು ನಂಬಿಕೊಂಡಿದ್ದ. ಈಗ 'ಅಲ್ಲ' ಎಂಬ ಅರಿವಿಗೆ ಬಂದಾಗ ಅವನ ಅಂತರಂಗ ಸುಲಭದಲ್ಲಿ ಒಪ್ಪಿಕೊಳ್ಳಲು ಸಿದ್ಧವಾಗಿರಲಿಲ್ಲ. ತಾಯಿಯಿಲ್ಲದ ಮಗುವನ್ನು ದೂರ ಕಳುಹಿಸಲು ನಾಗಪ್ಪಯ್ಯ ಹೇಳಿದ ಸುಳ್ಳು! ಅದು ನಿಜವಾಗಿದ್ದರೂ ಈಗ ಎದುರಿಗೆ ಕುಳಿತವನನ್ನು 'ಅಪ್ಪಾ' ಎಂದು ಕರೆಯದೆ ಇರಲಾರ.

ಅವನ ಆರ್ತಧ್ವನಿ ಕೇಳಿ ಕೃಷ್ಣಯ್ಯ ಕಸಿವಿಸಿಗೊಂಡ ತನ್ನದಲ್ಲೇ. ಮನಸ್ಸಿಲ್ಲದಿದ್ದರೂ ಇಷ್ಟು ವರ್ಷ ತಾನೇ ಸಾಕಿದ ಹುಡುಗ. ಕೈಯಾರೆ ಎತ್ತಿ ಆಡಿಸಿದ ಗಣಪಯ್ಯನ ಮಗ! ಶಂಕರನ ಮೇಲಿರುವ ವಾತ್ಸಲ್ಯ ಇವನ ಮೇಲಿರದೆ ಇದ್ದರೂ ಕಟುಕಬುದ್ಧಿ ತನ್ನದಲ್ಲ.... ಕೃಷ್ಣಯ್ಯ ತನ್ನ ತೊಡೆಯ ಮೇಲಿನ ಅವನ ತಲೆಯನ್ನು ಸವರಿದ ಮೃದುವಾಗಿ.

ಗಣೇಶ ಮುಖ ಮುಚ್ಚಿಕೊಂಡು ನರಳಿದ, ಹೃದಯ ಬಿರಿದು ಹೋಗುತ್ತಾಯಿದೆ ಅನುಭವಿಸುವ ವೇದನೆಯಲ್ಲಿ. ಸ್ವಲ್ಪ ಹೊತ್ತಿನ ಮೊದಲು ನಾಗಪ್ಪಯ್ಯ ಚುಚ್ಚಿ ಹಾಕಿದ್ದನಲ್ಲವೇ! "ಕರುಣೆ, ದಯೆಯ ಸೊಲ್ಲನ್ನು ಯಾರೂ ಎತ್ತಬೇಡಿ. ಊರಲ್ಲಿ ಯಾರ್ಯಾರಿಗೋ ಹುಟ್ಟಿದ್ದ ಮಕ್ಕಳನ್ನು ದಯಾದೃಷ್ಟಿಯಿಂದ ನೋಡಬೇಕು ಎನ್ನುವುದು ಯಾವ ನ್ಯಾಯ? ಹುಟ್ಟಿಸಿದ ಅಪ್ಪ ನಾಪತ್ತೆ, ಅಮ್ಮನಿಗೆ ಇವನು ಬೇಡ. ಸಾಕಿದ ಅಪ್ಪನಿಗೂ ಅವನ ಹೊಸ ಹೆಂಡತಿಗೂ ಇವನ ಚಿಂತೆಯಿಲ್ಲ. ಮತ್ತೆ ನಮಗ್ಯಾಕೆ ತಲೆಬಿಸಿ?"

ಅವನ ಮೈ ಬಿಸಿಯೇರಿತ್ತು. ಎಲ್ಲವನ್ನೂ ತಿಳಿದುಕೊಳ್ಳುವ ಕಾತುರತೆಯಿಂದ ಎದ್ದು ಸರಿದು ಕುಳಿತ ಬದಿಗೆ. ಕೃಷ್ಣಯ್ಯ ಅವನ ಮೈದಡವಿ ದಿಟ್ಟಿಸಿದ ಮುಖವನ್ನು. ಹದಿನಾರು ವರ್ಷಗಳ ಹಿಂದೆ ಹೆತ್ತೊಡಲಿನ ಸಂಕಟವನ್ನು ತಾನು ಹೊತ್ತುಕೊಂಡ ಅಕ್ಕನ ಮುಖ ಕಾಣಿಸಿತು.......ಹೊನ್ನಪ್ಪನಿಗೆ ಅಂದು ಅಕ್ಕ ನೀಡಿದ ವಾಗ್ದಾನ, ತನ್ನ ವಿರೋಧ, ತಮಗಿಬ್ಬರಿಗೂ ಆದ ಚರ್ಚೆ. ಅದೇಕೋ ಈವರೆಗೂ ಗಣೇಶ ಯಾರೆಂದು ಹೇಳಲಾಗದ ಸ್ಥಿತಿ, ಪರಿಸ್ಥಿತಿ....ಎಲ್ಲವೂ ಅಲೆಅಲೆಯಾಗಿ ಉಕ್ಕೇರಿತು ನೆನಪಿನಾಳದಿಂದ. ನೆನಪಿನ

ದೋಣಿ ತೇಲಿತು ಹಿಮ್ಮುಖವಾಗಿ.

ಅಂದು ಚಹದಂಗಡಿಗೆ ಬಂದ ಗಣಪಿಯ ಕಾಗದ. ಅಲ್ಲಿಂದ ಪ್ರಾರಂಭ ವಾಯಿತಲ್ಲವೇ ತಮ್ಮ ಬಾಳಿನಲ್ಲಿ ಗಣೇಶನ ಪ್ರವೇಶ!

## 20

ಗಣಪಿ ಕಾರವಾರದಿಂದ ಅಕ್ಕು ಹೆಸರಿಗೆ ಬರೆದಿದ್ದಳು ಕಾಗದವನ್ನು. ಆ ಕಾಗದದ ಒಂದೊಂದು ಸಾಲುಗಳೂ ನೆನಪಿದೆ ಕೃಷ್ಣಯ್ಯನಿಗೆ. ತನ್ನ ಆಪ್ತ ಗೆಳತಿಗೆ ತನ್ನೆಲ್ಲ ನೋವು, ಸಂಕಟವನ್ನು ಕಾಗದದಲ್ಲಿ ಪ್ರಸ್ತಾಪಿಸಿ,

"ನನ್ನ ಹೆರಿಗೆ ದಿನಗಳು ಸಮೀಪ ಬಂದಿವೆ. ಅಪ್ಪ ದಿನೇ ದಿನೇ ನನ್ನ ನರಳು ಕಂಡರೆ ಸಿಡುಕುತ್ತಿದ್ದಾನೆ. ನನಗಿಂತ ಅವನಿಗೇ ಚಿಂತೆ ಅಧಿಕ. ಹೆರಿಗೆ ಆದಾಕ್ಷಣ ಮಗು ಹೆಣ್ಣೋ ಗಂಡೋ ಎನ್ನುವುದನ್ನೂ ನೋಡದೆ ಅದನ್ನು ಕೊಂದು ಅದರ ಹುಟ್ಟು ಇಲ್ಲ ಅನ್ನಿಸಿಬಿಡ್ತಾನಂತೆ. 'ಮಗುವನ್ನು ಕೊಂದು ಪಾಪ ಕಟ್ಟಿಕೊಳ್ಳುವ ಬದಲು ಅದನ್ನು ಅನಾಥಾಶ್ರಮಕ್ಕೆ ಒಪ್ಪಿಸೋಣ' ಎನ್ನುತ್ತಿದ್ದಾಳೆ ಅಮ್ಮ. ನನಗಂತೂ ಮುಂದೆ ಹುಟ್ಟಲಿರುವ ಮಗುವಿನ ಮೇಲೆ ಚಿಂತೆ ಬಹಳವಾಗಿದೆ. ನೀನು ಆದಷ್ಟು ಬೇಗ ನನ್ನಲ್ಲಿಗೆ ಬಾ. ನಿನ್ನ ಮಡಿಲಿಗೆ ನನ್ನ ಮಗುವನ್ನು ಒಪ್ಪಿಸಿ ನಿನ್ನ ಮನೆಯಲ್ಲಿ ಅದು ಬೆಳಗುವದನ್ನು ಕಲ್ಪಿಸಿ ಸಂತೋಷ ಪಡ್ತೇನೆ. ಕಾಗದವನ್ನು ನೋಡಿದಾಕ್ಷಣ ವಿಳಂಬ ಮಾಡದೆ ತತ್‌ಕ್ಷಣ ಹೊರಟು ಬಾ"

ಎಂದು ಬರೆದಿದ್ದಳು ಕಳಕಳಿಯಲ್ಲಿ.

ಕೃಷ್ಣಯ್ಯ ಹುಬ್ಬುಗಂಟಿಕ್ಕಿದ ಆ ಕಾಗದವನ್ನು ಓದಿ. ಗಣಪಿ ಅಪರಿಚಿತಳೇನಲ್ಲ. ಅಕ್ಕು ಮತ್ತು ಅವಳಿಗೆ ಒಂದೇ ಪ್ರಾಯ. ಇಬ್ಬರಲ್ಲಿಯೂ ಅಕ್ಕತಂಗಿಗಿಂತ ಮಿಗಿಲಾದ ಅನ್ಯೋನ್ಯತೆ. ಹೊನ್ನಪ್ಪ ಅವಳಿಗಾಗಿ ಗಂಡು ಹುಡುಕುತ್ತ ಇದ್ದ. ಆದರೆ ಇದೇನು ಇಷ್ಟು ಬೇಗ ಅವಳಿಗೆ ಮದುವೆಯಾಗಿ ಮಗುವಿನ ತಾಯಿಯಾಗಲಿದ್ದಾಳೆಯೇ? ಈ ರೀತಿ ಕಾಗದವನ್ನು ಅಕ್ಕುವಿಗೆ

ಯಾಕೆ ಬರೆದಿದ್ದಾಳೆ?

ಆಗ ಅಕ್ಕ ಎಲ್ಲ ರಹಸ್ಯವನ್ನು ಹೊರಗೆಡಹಿದ್ದಳು. ಇನ್ನೂ ಮದುವೆ ಆಗದ ಗಣಪಿ ಮಗುವಿನ ತಾಯಿಯಾಗಲಿದ್ದಳು. ಐದು ತಿಂಗಳ ಹಿಂದೆ ಅಕ್ಕ ತವರುಮನೆಗೆ ಹೋದಾಗ ಗಣಪಿಯ ಸ್ಥಿತಿ ಕಂಡು ದಿಗಿಲು, ಆಶ್ಚರ್ಯ! ಅವಳಿಂದಾಗಿ ಮನೆ ರಣರಂಗ. ಅಕ್ಕನ ತವರುಮನೆಯಲ್ಲಿಯೂ ಅವಳದೇ ಚರ್ಚೆ. ಹೊನ್ನಪ್ಪನಿಗೆ ಊರಲ್ಲಿ ತಲೆ ಎತ್ತಿ ತಿರುಗಲು ನಾಚಿಕೆ. ಸಂಸಾರ ಸಮೇತ ಊರು ಬಿಟ್ಟು ಕಾರವಾರಕ್ಕೆ ಹೋಗುವ ತಯಾರಿ ನಡೆಸಿದ್ದಾನೆ.

"ತಿಳಿಯದೆ ಜಾರಿಬಿದ್ದೆ ಅಕ್ಕ...." ಅತ್ತಿಗೆಯ ಗೆಳತಿಯಲ್ಲಿ ದುಃಖವನ್ನು ಹಂಚಿಕೊಳ್ಳುತ್ತ ಅಂದಿದ್ದಳು ಗಣಪಿ, "ಈಗ ನನ್ನ ಹೊಟ್ಟೆಯಲ್ಲಿರುವವನ್ನು ಏನು ಮಾಡಲಿ?"

ಆಗ ಅಕ್ಕ ಮತ್ತು ಗಣಪಿಯಲ್ಲಿ ನಿಗೂಢವಾದ ಒಪ್ಪಂದವಾಗಿ ಅದನ್ನು ನೆರವೇರಿಸುತ್ತೇನೆಂದು ಅಕ್ಕ ಭಾಷೆ ಕೊಟ್ಟಿದ್ದಳು. ಅದನ್ನೇ ನಂಬಿ ಗಣಪಿ ಬರೆದಿದ್ದಾಳೆ ಕಾಗದ....

"ಹುಟ್ಟಿದ ಮಗುವನ್ನು ಕೊಲ್ಲುವದಕ್ಕೂ ಹೇಸುವವನಲ್ಲ ಹೊನ್ನಪ್ಪ...." ಅಕ್ಕ ನಿಧಾನವಾಗಿ ಅಂದಳು, "ನಿನ್ನ ಹೆರಿಗೆ ದಿನ ಹತ್ತಿರವಾದಾಗ ನನಗೆ ಕಾಗದ ಬರಿ, ನಾನು ಬಂದು ನಿನಗೆ ಹುಟ್ಟಿದ ಮಗುವನ್ನು ತಗೊಂಡು ಹೋಗಿ ಸಾಕಿಕೊಳ್ತೀನಿ—ಎಂದು ಅವಳಿಗೆ ಭಾಷೆ ಕೊಟ್ಟಿದ್ದೇನೆ....ನಾಳೆ ಬೆಳಗ್ಗೆಯೇ ಹೊರಟುಬಿಡೋಣ ಕಾರವಾರಕ್ಕೆ."

ಕೃಷ್ಣಯ್ಯ ವಿಸ್ಮಿತನಾದ ಹೆಂಡತಿಯ ಮಾತು ಕೇಳಿ. ಯಾರದೋ ಮಗುವನ್ನು ತಂದು ಸಾಕುತ್ತೇನೆ ಎನ್ನುತ್ತಿದ್ದಾಳಲ್ಲ....ತಮ್ಮ ಮದುವೆಯಾಗಿ ಇನ್ನೂ ವರ್ಷ ಕಳೆದಿಲ್ಲ. ಊರ ಜನರು ಸುಮ್ಮನಿದ್ದಾರೆಯೇ?....

"ಬೇಕಿದ್ದರೆ ಹಣದ ಸಹಾಯ ಮಾಡು. ಇಲ್ಲದ ತಾಪತ್ರಯಗಳನ್ನು ನಾವಾಗಿಯೇ ಎಳೆದುಕೊಳ್ಳುವದು ಬೇಡ...."

"ಹಣದ ಸಹಾಯ ಯಾರೂ ಮಾಡ್ತಾರೆ. ಅನ್ಯಾಚಾರದಿಂದ ಹುಟ್ಟಿದ ಮಕ್ಕಳಿಗೆ ಸಮಾಜದಲ್ಲಿ ನಮ್ಮಂಥವರೂ ಭದ್ರತೆ ಒದಗಿಸದೇ ಇದ್ದರೆ ಹೇಗೆ? ನಾನೇನು ಊರು ಉದ್ಧಾರದ ಮಾತು ಹೇಳ್ತಾ ಇಲ್ಲ. ನಾನು ಮದುವೆ ಯಾದವಳು; ಅವಳು ಆಗದವಳು!" ಉದ್ವೇಗದಿಂದ ಅಂದಳು ಅಕ್ಕ,

“ನಾಳಿನ ಭವಿಷ್ಯ ಇದರಿಂದ ಹಾಳಾಗಬಾರದು. ಮಗು ಹೆಣ್ಣಾಗಲಿ, ಗಂಡಾಗಲೀ ತಂದು ಸಾಕಿಕೊಳ್ತೀನೆ ಎಂದು ಮಾತುಕೊಟ್ಟಿದ್ದೇನೆ ಅವಳಿಗೆ!”

ಅವರಿಬ್ಬರಲ್ಲಿ ಅದೇ ವಿಷಯದಲ್ಲಿ ಚರ್ಚೆ. ಕೃಷ್ಣಯ್ಯ ಯಾರ್ಯಾರದೋ ಮಗುವನ್ನು ತಂದು ಸಾಕಿಕೊಳ್ಳಲು ಸಿದ್ಧನಿರಲಿಲ್ಲ. ಆದರೆ ಹಿಡಿದ ಪಟ್ಟು ಬಿಡಲಿಲ್ಲ ಅಕ್ಕ. ಚರ್ಚೆ ಬೆಳೆಯುತ್ತಿದ್ದಂತೆ ಬಾಗಿಲಲ್ಲಿ ಕಾಣಿಸಿಕೊಂಡ ಹೊನ್ನಪ್ಪ. ಅವನ ಜೊತೆಯಲ್ಲಿ ಕೈಯಲ್ಲಿ ಕೆಂಪುಕೆಂಪಾದ ಹಾಲುಗೆನ್ನೆಯ ಮಗುವನ್ನು ಹಿಡಿದುಕೊಂಡಿದ್ದ ಅವನ ಹೆಂಡತಿ. ಕಣ್ಣು ಕೆಕ್ಕರಿಸಿ ನೋಡಿದ ಕೃಷ್ಣಯ್ಯ. ತಾನಿನ್ನೂ ನಿರ್ಧಾರ ಕೈಗೊಳ್ಳುವ ಮೊದಲೇ ಹುಟ್ಟಿದ ಮಗುವನ್ನು ಒಂದು ಬಾರಿಯಾದರೂ ನೋಡಿದ್ದಾಳೋ ಇಲ್ಲವೋ, ಕಟುಕರಂತೆ ಅವಳಿಂದ ಸೆಳೆದುಕೊಂಡು ಬಹಳ ದೂರದ ಪ್ರಯಾಣ ಮಾಡಿ ಬಂದಿದ್ದಾರೆ! ಬಸವಳಿದ ಮಗು ಇನ್ನೂ ಜಗತ್ತಿನಲ್ಲಿ, ಸುತ್ತಲಿನ ಸಮಾಜದಲ್ಲಿ ತಲೆ ಎತ್ತಿ ಉಸಿರಾಡಲು ಬಯಸುತ್ತಿತ್ತು. ಹಸಿದು ಹಾಲಿಗಾಗಿ ಆಕ್ರಂದನ. ಪಿಳಿಪಿಳಿ ಕಣ್ಣುಗಳಿಂದ ನೋಡುತ್ತಿತ್ತು ಸುತ್ತಲೂ.

ಹೆತ್ತ ತಾಯಿಗೆ ತೋರಿಸದೆ, ಅವಳ ಮಗ್ಗುಲಿನಲ್ಲಿ ಮಲಗಲು ಬಿಡದೆ ಕರೆದುಕೊಂಡು ಬಂದ ಮಗುವಿನತ್ತ ಕರುಣೆಯ ನೋಟ ಬೀರಿ ಅಕ್ಕನ ಕೈಗಿತ್ತ ಹೊನ್ನಪ್ಪ ಗದ್ಗದಿತನಾದ. ತನ್ನೆರಡೂ ಕೈಗಳಿಂದ ಬಾಚಿ ತಬ್ಬಿಕೊಂಡ ಅಕ್ಕ ಮಗುವಿನ ನೆತ್ತಿಯ ಮೇಲೆ ಹೂಮುತ್ತನ್ನಿಡುತ್ತ “ಓ....ಗಂಡು ಮಗು!” ಎಂದು ಉದ್ಗಾರವೆತ್ತಿದಳು.

“ಕುತ್ತಿಗೆ ಹಿಸುಕಿ ಕೊಂದುಬಿಡಪ್ಪ ಎಂದ್ಕೊಂಡಿದ್ದೆ. ಆದರೆ ಹಸುಳೆಯನ್ನು ನೋಡಿದಾಕ್ಷಣ ನನ್ನಿಂದ ಹಾಗೆ ಮಾಡಲು ಸಾಧ್ಯವಾಗಲೇ ಇಲ್ಲ.”

“ಎಂತಹ ಮಾತನ್ನಾಡುತ್ತೀ, ಹೊನ್ನಪ್ಪ? ಬದುಕುವ ಜೀವವನ್ನು ಕೊಲ್ಲುವ ಅಧಿಕಾರ ಇಲ್ಲ ಯಾರಿಗೂ. ಇಲ್ಲಿಗೆ ಕರ್ಕೊಂಡು ಬಂದದ್ದು ಒಳ್ಳೆತೇ ಆಯ್ತು. ಗಣಪಿ ಕಾಗದ ಇವತ್ತಷ್ಟೇ ಬಂದಿತ್ತು....”

“ಮಗುವನ್ನು ನಾವೆಲ್ಲಿ ಬೀದಿಪಾಲು ಮಾಡ್ತೀವೋ ಎಂದು ಅವಳಿಗೆ ಹೆದರಿಕೆ.” ಹೊನ್ನಪ್ಪ ತಗ್ಗಿದ ಸ್ವರದಲ್ಲಿ ಹೇಳಿದ, “ನೀನು ಸಾಕಿಕೊಳ್ತೀನೆ ಎಂದಿದ್ದಿಯಂತೆ. ಆ ಧೈರ್ಯದಲ್ಲಿ ಅವಳದ್ದು ಒಂದೇ ಗಲಾಟೆ. ‘ಮಗೂನ್ನ ಅನಾಥಾಶ್ರಮಕ್ಕೆ ಸೇರಿಸಬೇಡಿ, ಅಕ್ಕನ ಮನೆಗೇ ಕರ್ಕೊಂಡು ಹೋಗಿ’

ಎಂದು."

"ನೀನೇನೂ ಚಿಂತಿಸಬೇಡ." ಧೈರ್ಯದ ಆಶ್ವಾಸನೆ ನೀಡಿದಳು ಅಕ್ಕ, "ಇನ್ನ್ಮೇಲೆ ಮಗು ನನ್ನ ಮಗನಾಗಿ ಬೆಳೀತಾನೆ ಈ ಮನೆಯಲ್ಲಿ. ಗಣಪಿಯ ಭವಿಷ್ಯವನ್ನು ಹಾಳುಮಾಡಬೇಡ. ಸರಿಯಾದ ಕಡೆಯಲ್ಲಿ ನೋಡಿ ಬೇಗ ಅವಳಿಗೊಂದು ಮದುವೆ ಮಾಡಿಬಿಡು."

ಕೃಷ್ಣಯ್ಯ ಅವುಡುಗಚ್ಚಿದ ಕೋಪದಲ್ಲಿ, "ಇದೆಲ್ಲಿ ಹೇಗಾಯ್ತು, ಹೊನ್ನಪ್ಪ? ನಿನ್ನ ಮಗಳಿಗೆ ಬುದ್ಧಿಯಿರಲಿಲ್ಲವೇ?"

ನಿಟ್ಟುಸಿರು ತೆಗೆದ ಹೊನ್ನಪ್ಪ. ಅಂದು ಅವನು ಮಗಳ ಕಥೆಯನ್ನು ವ್ಯಥೆ ತುಂಬಿದ ಸ್ವರದಲ್ಲಿ ಹೇಳಿಕೊಂಡದ್ದನ್ನು ಈಗಲೂ ಮರೆತಿಲ್ಲ ಕೃಷ್ಣಯ್ಯ.

ಗಣಪಿ ಅವನ ಎರಡನೆಯ ಮಗಳು. ಹದಿನೆಂಟರ ಬುದ್ಧಿ ತಿಳಿದ ಆಕರ್ಷಕ ರೂಪಿನ ಹುಡುಗಿ. ಮರವಂತೆಯಲ್ಲಿರುವ ತನ್ನ ಅಕ್ಕನ ಮನೆಗೆ ಹೋದವಳು ಅಲ್ಲಿ ಒಂದೂವರೆ ತಿಂಗಳು ಉಳಿದು ಬಂದಿರುವಾಗ ಜರುಗಿ ಹೋದ ಅನರ್ಥ. ಆಗಬಾರದ್ದೇ ಇದ್ದದ್ದು ಆಗಿ ಅರಿಯದೆ ಅವಳು ತಪ್ಪು ಹೆಜ್ಜೆಯನ್ನು ಇಟ್ಟುಬಿಟ್ಟಿದ್ದಳು. ಹೆಜ್ಜೆ ತಪ್ಪಿದಮೇಲೆ ಬೆಚ್ಚಿಬಿದ್ದು ಎಚ್ಚೆತ್ತು ಯೋಚಿಸಬೇಕಾಯಿತು ಗಂಭೀರವಾಗಿ. ಅವಳ ಸ್ಥಿತಿಯನ್ನು ಕಂಡು ಹೌಹಾರಿ ಹೋದ ಹೊನ್ನಪ್ಪ. ತಲೆ ಚಚ್ಚಿಕೊಳ್ಳುತ್ತ ದಂಡಿಸಿದ ಮಗಳನ್ನು. ಮದುವೆಯಾಗದ ಹುಡುಗಿ ದಿನೇದಿನೇ ಕಣ್ಣಿನ ಕಸವಾದಳು. ತೋನ್ಸೆಯಲ್ಲಿ ತಾನಿನ್ನು ತಲೆಯೆತ್ತಿ ತಿರುಗುವದು ಹೇಗಪ್ಪ ಎಂಬ ಚಿಂತೆಯಲ್ಲಿಯೇ ಹೊನ್ನಪ್ಪನಿಗೆ ದಿಕ್ಕುತೋಚದ ಪರಿಸ್ಥಿತಿ. ಮುಂದಿನ ದಾರಿಯೇನು?

ಅವಳು ಇಟ್ಟ ತಪ್ಪು ಹೆಜ್ಜೆಯನ್ನು ಸರಿಗೊಳಿಸಬೇಕಾದರೆ ಅವಳು ತಪ್ಪು ದಾರಿಗಿಳಿಯುವಂತೆ ಮಾಡಿದವನನ್ನು ಹುಡುಕಿ ಮುಂದಿನ ವಿಷಯವನ್ನು ಇತ್ಯರ್ಥಗೊಳಿಸಬೇಕಿತ್ತು. ಎಲ್ಲಿ ಗಣಪಿ ಅರಿತು ಅಥವಾ ಅರಿಯದೆ ಸೋತು ಹೋದಳೋ ಅಲ್ಲಿಯೇ ಗೆಲ್ಲಬೇಕು. ಹೀಗಾಗಿ ಹೊನ್ನಪ್ಪ ಅದೇ ಮರವಂತೆಗೆ ಕರೆದುಕೊಂಡು ಬಂದ ಅವಳನ್ನು. ಆಗ ಅವಳಿಗೆ ಮೂರನೆಯ ತಿಂಗಳು.

ತಲೆತಗ್ಗಿಸಿಕೊಂಡು ನಡೆದುದನ್ನೆಲ್ಲ ವಿವರಿಸಿದ ಹೊನ್ನಪ್ಪ, "ಏನು ಹೇಳಲಿ ಸ್ವಾಮೀ, ಅವನು ಎನ್ನುವದಕ್ಕೆ ನನಗೆ ನಾಲಿಗೆಯಿಲ್ಲ. ಅವರು ಬಹಳ ದೊಡ್ಡ ಶ್ರೀಮಂತರು, ಪ್ರಾಯ ಹೆಚ್ಚಾದರೆ ನಲ್ವತ್ತು ನಲ್ವತ್ತೈದು ವರ್ಷ

ಗಳಿರಬಹುದು. ಅದೇನು ರೂಪ ಅನ್ನುತ್ತೀರಿ....ನೋಡಿದಾಕ್ಷಣ ಭಯಭಕ್ತಿ ಉಂಟಾಗುತ್ತಿತ್ತು. ದುಂಡುಮುಖ, ಹಾಲುಬಿಳಿಬಣ್ಣ, ರಾಜಗಾಂಭೀರ್ಯವ ಗತ್ತು. ಸದಾ ಮುಗುಳ್ನಗೆ. ಆದರೆ ಕಣ್ಣಂಚಿನಲ್ಲಿ ನಿಸ್ತೇಜ ಕಳೆ. ಅಬ್ಬಬ್ಬ! ಯಾಕೋ ಅವರೆದುರು ನಿಂತು ಮಾತನಾಡುವವರಿಗೂ ಹೆದರಿಕೆ. ಮರವಂತೆ ಅವರ ಊರಲ್ಲ. ಅವರಿಗೆ ಆಸ್ತಿ, ಮನೆ, ಅಣ್ಣಂದಿರೂ ಎಲ್ಲ ಇದ್ದಾರಂತೆ. ಮರವಂತೆಯಲ್ಲಿ ಸಣ್ಣ ಬಾಡಿಗೆಮನೆ ಹಿಡಿದು ಆರು ತಿಂಗಳುಗಳಿಂದಲೂ ಅವರೊಬ್ಬರೇ ಯಾಕೆ ಇದ್ದಾರೆ ಎನ್ನುವುದು ಅಲ್ಲಿಯವರಿಗೂ ತಿಳಿದಿರಲಿಲ್ಲ. ಅವರ ಹೆಸರು ಪರಿಚಯ ಹಾಗೆ ನೋಡಿದರೆ ನನ್ನ ಹಿರಿಯ ಮಗಳು-ಅಳಿಯ ನಿಗೂ ಗೊತ್ತಿಲ್ಲ. ಯಾವಾಗಲೂ ಕೈಯಲ್ಲೊಂದು ಪುಸ್ತಕ ಹಿಡಿದುಕೊಂಡು ಸಮುದ್ರತೀರದಲ್ಲಿ ಕುಳಿತುಕೊಳ್ಳುವ, ಅತ್ತಿತ್ತ ತಿರುಗಾಡುವ ಅವರನ್ನು ಮಾತ್ರ ಜನರಿಗೆ ಗೊತ್ತು. ಕೆಲಸಕ್ಕೆ ಯಾರೋ ಒಬ್ಬ ಸಣ್ಣ ಹುಡುಗ ಇದ್ದ ಅಂತ ಕಾಣುತ್ತದೆ....

"ನಾನು ಗಣಪಿಯನ್ನು ಕರೆದುಕೊಂಡು ಅವಳನ್ನು ಮುಂದೆ ಮಾಡಿ ಕೊಂಡು ಅವರ ಮನೆಗೆ ಬಂದಾಗ ಅವರು ಹೊರಗಿನ ಕೋಣೆಯಲ್ಲಿ ಹೀಗೆ ಒಂದು ಪುಸ್ತಕ ಹಿಡ್ಕೊಂಡು ಓದ್ತಾ ಕುಳಿತಿದ್ದರು. ನನ್ನ ಪರಿಚಯವನ್ನು ತಿಳಿಸಿ ಅವಳ ವಿಷಯವನ್ನು ಹೇಳುತ್ತಿದ್ದಂತೆ ಅವರು ಹುಬ್ಬುಗಂಟಿಕ್ಕಿ ನೋಡಿ ದರು ತನ್ನೆದುರು ನಿಂತವಳನ್ನು. "ಹೀಗಾಗಿ ಹೋಯಿತೇ?" ಎಂಬ ವಿಷಾದದ ಸ್ವರ ಮಾತ್ರ ಹೊರಟಿತು ಅವರ ಬಾಯಿಂದ. ಆಮೇಲೆ ಸೀದಾ ಒಳಗೆ ನಡೆದು ಅರ್ಧನಿಮಿಷದಲ್ಲಿ ಹೊರಗೆ ಬಂದು ಒಂದು ದಪ್ಪದ ನೋಟುಗಳ ಕಟ್ಟನ್ನು ಕೈಲಿರಿಸಿದರು.

"ಇದರಲ್ಲಿ ಹಣ ಇದೆ. ತಗೊಂಡು ಹೋಗು."

"ಹಣವನ್ನು ನೋಡಿ ದಂಗಾಗಿಹೋದೆ! ಆದರೂ ಸಾವರಿಸಿಕೊಂಡು ಕೈಮುಗಿದೆ, "ಹಣಕ್ಕಾಗಿ ನಾನು ಬಂದಿಲ್ಲ. ಪರಿಹಾರಕ್ಕೆ ಬಂದಿದ್ದೇನೆ."

"ಪರಿಹಾರ ಇದರಲ್ಲೇ ಇದೆ. ಇನ್ನೂ ಬೇಕಿದ್ದರೆ ಕೊಡ್ತೇನೆ" ಎಂದರು ಸಮಾಧಾನದಲ್ಲಿ!

"ಇಲ್ಲ ರಾಯರೇ, ಹೇಗೂ ಅವಳು ನಿಮ್ಮ ಹತ್ತಿರ ಬಂದವಳು. ನೀವೇ ಅವಳನ್ನು ಸ್ವೀಕರಿಸಿ" ಎಂದೆ ಸಂದರ್ಭದ ಎಳೆ ಹಿಡಿದು.

ಅವರ ಮುಖದ ತುಂಬಾ ನೋವಿನ ಛಾಯೆ. ಗಣಪಿಯತ್ತ ನೋಡ

ಲಾರದೆ ಅವರೆಂದರು, "ಎಲ್ಲಿ ಇದ್ದರೂ ಅನುಭವಿಸುವ ಯೋಗ ಹಣೆಯಲ್ಲಿ ಬರೆದಿಲ್ಲವಪ್ಪ. ಇನ್ನೂ ಮದುವೆಯಾಗದೆ ಇದ್ದೇನೆ ನೋಡು ನಾನೊಬ್ಬ. ಹಗಲು ರಾತ್ರಿ ಉಬ್ಬುಸದ ರೋಗ ಹಿಂಡಿ ಹಿಪ್ಪೆ ಮಾಡುತ್ತ ಇದೆ ನನ್ನನ್ನು. ಸಮುದ್ರತೀರದಲ್ಲಿಯಾದರೂ ಗುಣ ಸಿಕ್ಕೀತು ಎಂದ್ಕೊಂಡು ಇಲ್ಲೀ ಮನೆ ಮಾಡ್ಕೊಂಡು ಇದ್ದೇನೆ. ಊಹೂಂ. ಹಾಗೇ ಇದೆ."

"ಅದಕ್ಕೂ ನಿಮ್ಮ ಮದುವೆಗೂ ಏನು ನಂಟು? ನನ್ನ ಮಗಳು ನಿಮ್ಮನ್ನ ಚೆನ್ನಾಗಿಯೇ ನೋಡಿಕೊಳ್ಳಬಲ್ಲಳು. ಏನ್ಹೇಳ್ತಿ ಗಣಪಿ?"

"ಇವತ್ತೋ ನಾಳೆಯೋ ಹೋಗಲಿರುವ ಈ ಜೀವ" ಅವರು ಜೋರಾಗಿ ನಕ್ಕು ಅಂದರು, "ಅವಳಿಗ್ಯಾಕೆಬೇಕು? ನನ್ನ ಅಪ್ಪ, ಹಿರಿಅಣ್ಣ, ಅಜ್ಜ ಎಲ್ಲರೂ ಉಬ್ಬುಸರೋಗದಲ್ಲಿ ಬಹಳ ಸಣ್ಣ ಪ್ರಾಯದಲ್ಲೇ ಕೊನೆಯುಸಿರನ್ನೆಳೆದವರು. ಈಗ ನಾನೂ ಅವರ ದಾರಿಯಲ್ಲಿದ್ದೇನೆ. ಏನು, ತಮಾಷೆ ಮಾಡ್ತಾ ಇದ್ದೇನೆ ಅಂತ ತಿಳೀಬೇಡ. ಅದಕ್ಕೋಸ್ಕರವೇ ಯಾರೆಷ್ಟು ಹೇಳಿದರೂ ನಾನು ಮದುವೆ ಆಗಿಲ್ಲ. ನನ್ನ ಕಥೆ ಕೇಳಿ ನೀನೇನು ಮಾಡ್ತಿ ಬಿಡು! ನಿನ್ನ ಮಗಳು ತಾನಾಗಿಯೇ ನನ್ನ ಹತ್ರ ಬಂದ್ಲು, ಏನೋ ನಾನೂ ಸ್ವಲ್ಪ ಎಚ್ಚರ ತಪ್ಪಿದೆ ಅನ್ನು.... ಹೋಗ್ಲಿ, ಈಗ ನಿನಗೇನು ಬೇಕು? ಇನ್ನೂ ಬೇಕಿದ್ದರೆ ಹಣ ಕೊಡ್ತೇನೆ"

"ನಾನು ಮೂಕನಾಗಿಹೋದೆ. ಈಗಿನ ಕಾಲದಲ್ಲಿ ನ್ಯಾಯ ಬೇಡಿದರೂ ಹಣ ದೊರೆಯುವದು ಕಷ್ಟ. ಇತ್ತ ಕೇಳುವ ಮೊದಲೇ ಎಷ್ಟು ಬೇಡಿದರೂ ಕೊಡಲು ಸಿದ್ಧ! ಅವರು ಕೊಟ್ಟ ಹಣವನ್ನು ತೆಗೆದುಕೊಂಡು ಮಗಳೊಡನೆ ತೋನ್ಸೆಗೆ ಹಿಂದಿರುಗಿದಮೇಲೆ ನನಗೆ ಅನ್ನಿಸಿತ್ತು, ಗಣಪಿಗೆ ಜೀವನಾಂಶವನ್ನು ಕೊಡಬೇಕೆಂದು ಅವರನ್ನು ಕೇಳಬೇಕಿತ್ತು. ಗಣಪಿ ಗಲಾಟೆಯೆಬ್ಬಿಸಿ ಬಿಟ್ಟಳು. ಹೆಚ್ಚು ಆಶಿಸುವದೂ ತಪ್ಪು ಅಲ್ಲವೇ? ಆಮೇಲೆ ಒಂದೆರಡು ದಿನಗಳಲ್ಲಿ ಅವರೂ ಮರವಂತೆಯನ್ನು ಬಿಟ್ಟು ಹೊರಟುಹೋಗಿದ್ದಾರೆಂದು ಹಿರಿಮಗಳು ಸುದ್ದಿ ತಿಳಿಸಿದಳು. ಎಲ್ಲೆಲ್ಲಿ ನೀರಿನ ಋಣವಿರುತ್ತದೆಯೋ ಯಾರಿಗೆ ಗೊತ್ತು?...."

"ಅವರ ಹೆಸರೇನು? ಈಗೆಲ್ಲಿದ್ದಾರೆ?" ಕೇಳಿದ ಕೃಷ್ಣಯ್ಯ.

"ಯಾರಿಗೆ ಗೊತ್ತು, ಸ್ವಾಮಿ. ಗಣಪಿಗೆ ಅವರು ಎಲ್ಲಿದ್ದಾರೆ, ಯಾರು, ಹೇಗಿದ್ದಾರೆ? ಎನ್ನುವದೆಲ್ಲ ಚೆನ್ನಾಗಿ ತಿಳಿದಿದೆ. ಆದರೆ ನನ್ನ ಹತ್ತಿರ ಬಾಯಿ

ಬಿಡುವವಳಲ್ಲ. ನಾನು ಮೊದಲೇ ಕುಡುಕ. ತನ್ನ ನೆವ ಹೇಳಿ ಆಗಾಗ ಅವರಿಂದ ಹಣ ಸೆಳೆದುಕೊಂಡು ಬರುತ್ತೇನೆಂದು ಅವಳು ಹೆದರಿಹೋದಳು. ಇಲ್ಲವಾದರೆ ಸ್ವಾಮಿ, ಈಗಲೂ ಈ ಮಗುವನ್ನು ಅವರ ಮುಂದೆ ಹಿಡಿದು ನನ್ನ ಜೇಬಿ ಜೇಯಿಸಿಕೊಳ್ತಾ ಇದ್ದೆ. ಅದಾಗಲೇ ಇಲ್ಲ. ತಲೆ ಜಜ್ಜಿದರೂ ಗಣಪಿ ಆ ಮನುಷ್ಯನ ಹೆಸರು ಹೇಳಲಿಲ್ಲ. ಇನ್ನೇನ್ಮಾಡಲಿ....ಸೀದಾ ಇಲ್ಲಿಗೆ ಕರ್ಕೊಂಡು ಬಂದಿದ್ದೇನೆ."

ಕೃಷ್ಣಯ್ಯ ಉಗುಳು ನುಂಗಿಕೊಂಡ. ಅವ್ಯವಹಾರ, ಅನೀತಿಯಿಂದ ಹುಟ್ಟಿದ ಮಗುವನ್ನು ನೋಡುತ್ತಿದ್ದಂತೆ ಅಸಹ್ಯದಿಂದ ತಿರುಗಿಸಿಕೊಂಡ ಮುಖವನ್ನು. ಇವರ ತಂದೆತಾಯಿ ಸಾವಾಗಬೇಕೇ? ಇದೆಲ್ಲಿಯ ಗ್ರಹಚಾರ? ಅವನ ಹೆಂಡತಿ ಬಟ್ಟೆಯ ಸಣ್ಣ ಬತ್ತಿಯನ್ನು ಹಾಲಿನಲ್ಲಿ ಅದ್ದಿ ಮಗುವಿನ ಬಾಯಿಯಲ್ಲಿರಿಸುತ್ತ ಅಂದಳು,

"ನೀನೇನೂ ಹೆದರಬೇಡ ಹೊನ್ನಪ್ಪ. ಇನ್ಮೇಲೆ ಮಗುವಿನ ಜವಾಬ್ದಾರಿ ಎಲ್ಲ ನನಗೆ. ನೀನು ಈಗಲೇ ಇವನ ಕಿವಿಯಲ್ಲಿ ಬಾಯಿರಿಸಿ 'ಶ್ರೀ ಗಣೇಶ' ಎಂದು ಉಚ್ಚರಿಸು ಮೂರು ಬಾರಿ."

ಹೊನ್ನಪ್ಪ ಮಗುವಿನ ಕಿವಿಯ ಬಳಿ ಬಾಯಿ ಇರಿಸಿ "ಶ್ರೀಗಣೇಶ" ಎಂದು ಉಚ್ಚರಿಸಿದ ಮೂರು ಬಾರಿ. ಆ ಗಳಿಗೆಯಲ್ಲಿ ನಿಜವಾಗಿಯೂ ಅವನ ಗಂಟಲು ನರಗಳು ಊದಿಕೊಂಡಿದ್ದವು.

## 21

ನೆನಪಿನ ಹಾಳೆಗಳನ್ನು ತಿರುಗಿಸುತ್ತಿದ್ದಂತೆ ಕೃಷ್ಣಯ್ಯನ ತುಟಿಗಳಿಗೊಂದು ಚಲನೆ ಬಂದಿತ್ತು. ತನ್ನ ಎದುರು ಕುಳಿತವನ ಮುಖವನ್ನು ನೋಡುತ್ತ ಹೇಳಿದ: "ಆ ಗಣಪಿಯ ಮಗನೇ ನೀನು....ಗಣೇಶ!"

ಕೇಳುತ್ತ ಕೇಳುತ್ತ ಗಣೇಶನ ತಲೆಯೊಳಗೆಲ್ಲ 'ಧೀಂ ಧೀಂ' ಎನ್ನ ಪ್ರಾರಂಭಿಸಿತು. ಸತ್ಯಸಂಗತಿಯ ಸಂಪೂರ್ಣ ಹೊಳಕೆ ನನಗಾಗಿದೆ. ತಾನು ಯಾರು ಎನ್ನುವ ನಿಜದರ್ಶನ. ಅನಾಥಪ್ರಜ್ಞೆಯೊಂದಿಗೆ ಬದುಕಿದ್ದೋ ಮೂಕವೇದನೆ. ವಿಷಯವನ್ನು ಸಂಪೂರ್ಣವಾಗಿ ಸ್ವೀಕರಿಸಿಕೊಳ್ಳಲು—

ಹಿಂಜೇಟು ಹಾಕಿತು ಅವನ ಮನಸ್ಸು. ತಡೆತಡೆದು ಮರುಪ್ರಶ್ನೆ ಹಾಕಿದ:

"ಹಾಗಾದರೆ....ಅವರು....ನನ್ನ ಆ ಅಪ್ಪ ಎಲ್ಲಿದ್ದಾರೆ ಈಗ?"

ಚಿಮಣಿ ದೀಪದಲ್ಲಿ ಎಣ್ಣೆ ಮುಗಿಯುತ್ತ ಬಂದಿರಬೇಕು. ಅದರ ಬತ್ತಿ ಕರಟಿಕೊಳ್ಳುತ್ತ ಇತ್ತು. "ಆಗಲೇ ಹೇಳಿದೆನಲ್ಲ! ಅವರು ಎಲ್ಲಿದ್ದಾರೆ ಎನ್ನುವುದು ಹೊಸಪ್ಪನಿಗೆ ತಿಳಿದಿರಲಿಲ್ಲ. ನೀನು ನಮ್ಮ ಮನೆ ಸೇರಿದಮೇಲೆ ನಾವೂ ಆ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳಲಿಲ್ಲ...."

"ಮತ್ತೆ....ಗಣಪಿ ಎಂದೆಯಲ್ಲ ನೀನು....ಅವಳೆಲ್ಲಿ?" ನಡುಗುವ ಸ್ವರದಲ್ಲಿ ಎಳೆದು ಎಂದು ಕೇಳಿದ ಇನ್ನೊಂದು ಪ್ರಶ್ನೆಯನ್ನು.

"ಅಲ್ಲಿಯ ಸಂಬಂಧದ ಕೊಂಡಿ ಯಾವಾಗಲೋ ಕಳಚಿಹೋಗಿದೆ. ನನಗೆ ಗೊತ್ತಿಲ್ಲವೆ? ಗಣಪಿಯ ಕಡೆಯವರಾರೂ ಕೋಣ್ಣೆಯಲ್ಲಿ ಇಲ್ಲ...." ಹಾಸಿಗೆಯನ್ನು ಬಿರಗಿಕೊಳ್ಳುತ್ತ ಹೇಳಿದ ಕೃಷ್ಣಯ್ಯ. "ನೀನು ಹುಟ್ಟಿದ ಆರು ತಿಂಗಳಲ್ಲಿ ಅವಳಿಗೆ ಮದುವೆಯಾಯಿತು ಎನ್ನುವ ಸುದ್ದಿ ಕೇಳಿ ಗೊತ್ತು ನನಗೆ. ಆಮೇಲೆ ಅವಳ ವಿಷಯವೇ ತಿಳಿದಿಲ್ಲ. ಅಪ್ಪ ಬಹಳ ವಿಚಿತ್ರ ಸ್ವಭಾವದವನು. ಆ ಬಗ್ಗೆ ಚಕಾರ ಶಬ್ದವನ್ನೂ ಮನೆಯಲ್ಲಿ ಎತ್ತಿದವನಲ್ಲ. ನನಗೂ ಆಸಕ್ತಿ ಇರಲಿಲ್ಲ ಬಿಡು....ತುಂಬ ರಾತ್ರಿಯಾಯ್ತು. ಇನ್ನು ಮಲಗು ಹೋಗು. ಹಾಂ, ನಾಳೆ ಬೆಳಗ್ಗೆ ನನ್ನ ಜೊತೆಯಲ್ಲಿ ನೀನೂ ಹೊರಟುಬಿಡು....ಕೇಳಿತ್ತ?"

ಕೇಳಿಸಿತು. ಆದರೆ ಅವನು ಮರುನುಡಿಯಲಿಲ್ಲ. ಚಿಮಣಿ ದೀಪ ಆರಿದರೂ ಮನದ ಬೆಳಕಿನಲ್ಲಿ ಪದೇಪದೇ ಕಾಣಿಸಿಕೊಳ್ಳುತ್ತಿದ್ದಾಳೆ ಅಕ್ಕ. ತನ್ನ ತಾಯಿ ಇವಳು ಎಂದು ಈವರೆಗೂ ಅಂದುಕೊಂಡಿದ್ದ ಅವನಿಗೆ ಮನದಲ್ಲಿ ಚಿರಸ್ಥಾಯಿಯಾದ ಆ ರೂಪವನ್ನು ಅಳಿಸಿ ಅಲ್ಲಿ ಬೇರೆಯೇ ಒಂದು ಕಲ್ಪಿಸಿದ ರೂಪವನ್ನು ಪ್ರತಿಷ್ಠೆ ಮಾಡುವುದಕ್ಕಾಗಲಿಲ್ಲ. ಗಣಪಿ ಎನ್ನುವ ವ್ಯಕ್ತಿ ಇರಬಹುದು, ಇಲ್ಲದೇ ಇರಬಹುದು. ಅವಳು ತಾಯಿಯಾಗಿರಬಹುದು ಅಥವಾ ಅಲ್ಲದೇ ಇರಬಹುದು, ತನ್ನ ಪಾಲಿಗೆ ಎಂದೆಂದಿಗೂ ತೀರಿಹೋದ ಅಕ್ಕ ತಾಯಿಯಾಗಿದ್ದಾಳೆ. ಅದನ್ನು ಸುಲಭದಲ್ಲಿ ಅಲ್ಲಗಳೆಯಲು ಸಾಧ್ಯವೇ? ಲೋಕದ ದೃಷ್ಟಿಯಲ್ಲಿ, ತನ್ನ ಜನನರೀತಿಯಲ್ಲಿ ಅವಳಿಗೆ ಆ ಸ್ಥಾನ ಇಲ್ಲದೇ ಹೋದರೂ ತನ್ನ ಪಾಲಿಗೆ ತನ್ನ ಹೃದಯದಲ್ಲಿ ಅದೇ ತಾಯಿಗೆ ಮೊದಲ ನಮಸ್ಕಾರ! ಆದರೆ ಇದೇನು? ತನಗೆ ಜನ್ಮವಿತ್ತ ತಾಯಿ ಜೀವಂತವಾಗಿದ್ದಾಳೆ

ಇನ್ನೂ. ಅವಳೆಲ್ಲಿದ್ದಾಳೆ? ಹೇಗಿದ್ದಾಳೆ? ತಾನು ಹೋಗಿ ನೋಡಬೇಡವೆ? ಕರ್ಣನನ್ನು ಗಂಗೆಪಾಲು ಮಾಡಿದ ಕುಂತೀದೇವಿ ಅದೆಷ್ಟೋ ವರ್ಷಗಳನಂತರ 'ನಾನು ನಿನ್ನ ಮಾತೆ' ಎಂದು ಹೇಳಿಕೊಂಡು ಅವನನ್ನು ಸಂಧಿಸಿದ್ದಾಳೆ. ಈಗ ನಾನೂ 'ಇದೋ, ನಾನು ನಿನ್ನ ಮಗ' ಎಂದು ನನ್ನ ಪರಿಚಯ ನಾನೇ ಮಾಡಿಕೊಳ್ಳಬಾರದೇಕೆ? ಅವಳಿನ್ನೂ ಎಲ್ಲಿಯೋ ಜೀವಂತವಾಗಿದ್ದಾಳೆ ಎಂದರೆ ಅದಕ್ಕಿಂತ ಹೆಚ್ಚಿನ ಮಹತ್ವವೇನೂ ಇಲ್ಲ ತನ್ನ ಪಾಲಿಗೆ.

ಆದರೆ ಅವನಿಗೇಕೋ ಈ ಯೋಜನೆಯಿಂದ ಕ್ರೋಧವುಕ್ಕಿಬಂದಿತು. ಅವನಿಗರಿಯದಂತೆ. ಎಳೆಕಂದನನ್ನು ಬೀದಿಪಾಲು ಮಾಡಿದರೂ ಸರಿಯೇ. ಸ್ವಾರ್ಥದಿಂದ ಅವಳ ಜೊತೆಯಲ್ಲಿಯೇ ಉಳಿಸಿಕೊಳ್ಳಲಾರದ ಆ ತಾಯಿಯನ್ನು ತಾನು ಇಷ್ಟು ವರ್ಷಗಳನಂತರ ನೋಡುವದಾದರೂ ಯಾಕೆ? ತನ್ನ ಗುರುತು ಅವಳಿಗೀಗ ಸಿಕ್ಕೀತೇ? ತನ್ನೊಂದಿಗೆ ಮಾತನಾಡಬಲ್ಲಳೇ?

ಗಣೇಶ ಮಲಗಿದಲ್ಲಿಯೇ ಹೊರಳಾಡಿದ. ಅತ್ತ ಇತ್ತ ಮಗ್ಗಲು ಬದಲಾಯಿಸಿದ. ಶಂಕರ, ಸುನಂದೆ ಎಷ್ಟು ನಿಶ್ಚಿಂತೆಯಾಗಿ ಮಲಗಿ ನಿದ್ರೆ ಹೋಗುತ್ತಿದ್ದಾರೆ. ತನ್ನಂತೆ ಅವರಿಗೆ ಯಾವ ಚಿಂತೆಯೂ ಇಲ್ಲ. ನಾಗಪ್ಪಯ್ಯ ಮಾವ ತನ್ನನ್ನು ಅನಾಥಾಶ್ರಮಕ್ಕೆ ಸೇರಿಸಬೇಕು ಎನ್ನುತ್ತಿದ್ದಾನೆ. ಕೃಷ್ಣಯ್ಯ ಮುದಿತನಕ್ಕೆ ಒಬ್ಬ ಆಳು ಇರಲಿ ಎಂದು ತನ್ನ ಜೊತೆಗೆ ಕರೆದೊಯ್ಯಲು ಇಚ್ಛಿಸಿದ್ದಾನೆ. ತನಗೆ ಎಲ್ಲಿಯಾದರೂ ಏನಂತೆ. ಊರೂರು ಅಲೆದರೂ ಸರಿಯೆ ಮೊದಲು ಅವಳನ್ನು ಕಾಣಬೇಕು, ಅವಳೊಂದಿಗೆ ಮಾತನಾಡಬೇಕು.

ಮರುದಿನ ಬೆಳಿಗ್ಗೆ ಗಣೇಶನ ನಿರ್ಧಾರವನ್ನು ಕೇಳಿದ ಕೃಷ್ಣಯ್ಯ ಅರ್ಥವಾಗದವನಂತೆ ನೋಡಿದ ಅವನನ್ನು. ಅವನ ಕಣ್ಣುಗಳಲ್ಲಿ ಅಧೀರತೆಯ ಬದಲು ದೃಢನಿರ್ಧಾರ ತುಂಬಿದೆ. ತನ್ನ ತಾಯಿಯನ್ನು ನೋಡಿ ಬರಬೇಕೆನ್ನುವ ಉತ್ಸುಕತೆಯು ಹಟ ಮುಖದ ಮೇಲೆ. ನಾಗಪ್ಪಯ್ಯ ಗೇಲಿಮಾಡಿ ಕುಚೇಷ್ಟೆ ಮಾಡಿದ. "ಊರೂರು ತಿರುಗುತ್ತ ಅಮ್ಮನನ್ನು ಹುಡುಕುತ್ತಿಯೇನೋ, ಬೆಪ್ಪ!" ಎಂದು ಪರಿಹಾಸ್ಯಮಾಡಿದ. ಹೊನ್ನಪ್ಪನನ್ನು ಎಲ್ಲರೂ ಸಂಪೂರ್ಣ ಮರೆತುಬಿಟ್ಟಿದ್ದಾರೆ. ಗಣಪಿ ಮದುವೆಯಾಗಿ ಯಾವ ಊರಿನಲ್ಲಿದ್ದಾಳೆ ಎನ್ನುವದೂ ತಿಳಿಯದು. ಈಗ ಇದ್ದಕ್ಕಿದ್ದಂತೆ ಗಣೇಶನಲ್ಲಿ ಅವಳ ಹತ್ತಿರಕ್ಕೆ ಹೋಗುವ ಆಸೆ ಉದ್ಭವಿಸಿದೆ. ಸಹಜವಾದ ಪ್ರತಿಕ್ರಿಯೆ. ಹೋಗಬೇಕಾದುದೂ

ಅನಿವಾರ್ಯ. ಆದರೆ ಗಣಪಿ ಅವನನ್ನು ಹೇಗೆ ಸ್ವೀಕರಿಸುತ್ತಾಳೆ? ಅಲ್ಲಿದ್ದ ಹಿರಿಯರೆಲ್ಲ ತಲೆಗೊಂದರಂತೆ ಯೋಚಿಸಿದರು. ನಾಗಪ್ಪಯ್ಯ ಆಳವಾಗಿ ಚಿಂತಿಸದೆ ತೆರೆದ ಬಾಯಿಗೇ ನುಡಿದ:

"ಅವನಿಗೆ ಇಷ್ಟಬಂದಂತೆ ಮಾಡಿಕೊಳ್ಳಲಿ!"

"ಇಷ್ಟು ವರ್ಷ ಸಾಕಿ ದೊಡ್ಡವನನ್ನಾಗಿ ಮಾಡಿಯಾಯ್ತು. ಇನ್ನು ಅವನ ದಾರಿ ಅವನು ನೋಡಿಕೊಳ್ತಾನೆ" ಎಂದ ಗಂಗಯ್ಯ ಸುಲಭದಲ್ಲಿ ಹೊಣೆ ಕಳಚಿಕೊಳ್ಳಲು. "ಇಲ್ಲಿಂದ ನಾಲ್ಕು ಮೈಲು ದೂರದಲ್ಲಿ ಗಣಪಿಯ ದೊಡ್ಡ ತಂದೆ ಇದ್ದಾನೆ. ಅವನ ಹತ್ರ ಕೇಳಿದರೆ ಎಲ್ಲಿದ್ದಾಳೆ ಎನ್ನುವುದು ತಿಳಿದೀತು."

"ಹೌದು...ಬೇಕಿದ್ದರೆ ನಾನೀಗಲೇ ಅಲ್ಲಿಗೆ ಹೋಗಿ ವಿಷಯ ತಿಳಿದು ಅವಳ ಸರಿಯಾದ ವಿಳಾಸವನ್ನು ತೆಗೊಂಡು ಬರ್ತೇನೆ...." ತುದಿಗಾಲಿನಲ್ಲಿ ಸಿದ್ಧನಾದ ನಾಗಪ್ಪಯ್ಯ.

"ತಕ್ಕೊಂಡು ಬಾ."—ಒಂದಿನಿತೂ ಅನುಮಾನಪಡದೆ ನೇರವಾಗಿ ಹೇಳಿದ ಕೃಷ್ಣಯ್ಯ. "ತನ್ನ ಕಾಲಮೇಲೆ ನಿಲ್ಲುವಷ್ಟು ದೊಡ್ಡವನಾಗಿದ್ದಾನೆ ಹುಡುಗ. ಒಂದು ವೇಳೆ ಗಣಪಿ ಸಿಗದೇ ಹೋದರೂ ದುಡಿದು ತಿನ್ನುವ ತಾಕತ್ತು ಅವನಿಗಿದೆ!"

ಈ ಮಾತುಗಳು ಗಣೇಶನ ಕಿವಿಗಳ ಮೇಲೆ ಕಾದ ಸೀಸದಂತೆ ಎರೆದವು. ಇದೇನಿದು? ಇವರೆಲ್ಲರೂ ಈ ತನಕ ತನ್ನ ಮೇಲೆ ಕೃತಕ ಪ್ರೀತಿಯನ್ನು ತೋರಿಸುತ್ತಿದ್ದರೇ? ಕೃಷ್ಣಯ್ಯ ನಿರ್ವಿಕಾರಭಾವದಿಂದ ಅವನನ್ನು ನೋಡಿ ಅನಂತರ ತನ್ನ ಮಕ್ಕಳನ್ನು ಹತ್ತಿರ ಕರೆದ. ಆತ್ಮೀಯವಾಗಿ ಅವರ ತಲೆ ನೇವರಿಸಿ ನುಡಿದ:

"ನಿಮಗಿಬ್ಬರಿಗೂ ಹೊಸ ಬಟ್ಟೆಗಾಗಿ ಅಜ್ಜನ ಹತ್ರ ಹಣ ಕೊಟ್ಟಿದ್ದೇನೆ. ಬೇಕಾದ ಬಣ್ಣದ ಬಟ್ಟೆ ಹೊಲಿಸಿಕೊಳ್ಳಿ. ಸುನಂದಾ, ನನ್ನ ಮೇಲೆ ಸಿಟ್ಟು ಮಾಡ್ಬೇಡ, ಆದಷ್ಟು ಬೇಗ ಇಬ್ಬರನ್ನೂ ನನ್ನ ಮನೆಗೆ ಕರೆಯಿಸಿಕೊಳ್ತೇನೆ."

ಅವಸರದಲ್ಲಿ ಬೆಳಗಿನ ಉಪಾಹಾರ ಮುಗಿಸಿ ಗಣೇಶನಿಗೂ ತಿಳಿಸಿ ಕೃಷ್ಣಯ್ಯ ಹೊರಟುಹೋದ ಜಿಲ್ಲಾಪಾಡಿಗೆ. ಈವರೆಗೂ ಮೌನವಾಗಿ ಹಿರಿಯರ ಮಾತುಗಳನ್ನು ಆಲಿಸಿಕೊಂಡಿದ್ದ ಶಂಕರ ನಿಧಾನವಾಗಿ ಗಣೇಶನ ಹತ್ತಿರ

ಬಂದು ಅನುಮಾನ ಬೆರೆತ ಸ್ವರದಲ್ಲಿ ಕೇಳಿದ, "ಅಣ್ಣಾ, ನೀನೀಗ ಎಲ್ಲಿಗೆ ಹೋಗ್ತಾ ಇದ್ದಿ?"

"ನನ್ನ ಅಮ್ಮ ಇದ್ದಲ್ಲಿಗೆ!"

"ಅಮ್ಮ!" ಉದ್ಗಾರವೆತ್ತಿದ ಶಂಕರ ಪಿಳಿಪಿಳಿ ಕಣ್ಣು ಬಿಟ್ಟು ನೋಡಿದ. ಆಗ ಏಕಕಾಲದಲ್ಲಿ ಅವರಿಬ್ಬರಿಗೂ ಅಕ್ಕನನ್ನು ಚಿತೆಯ ಮೇಲೇರಿಸಿ ಬೆಂಕಿ ಕೊಟ್ಟದ್ದು ನೆನಪಿಗೆ ಬಂದು ಕಸಿವಿಸಿಯಾಯಿತು. ಉಮ್ಮಳಿಸಿ ಬಂದ ದುಃಖವನ್ನು ತಡೆದುಕೊಂಡ ಗಣೇಶ ಮುಖ ತಿರುಗಿಸಿಕೊಂಡ.

"ನಿನಗೆ ಅದೆಲ್ಲ ಅರ್ಥವಾಗುವುದಿಲ್ಲ, ಸುಮ್ಮನಿರು" ಎಂದ ತಿಳಿದವನಂತೆ.

ಮಧ್ಯಾಹ್ನ ಹನ್ನೆರಡುಗಂಟೆಯ ಹೊತ್ತಿಗೆ ನಾಗಪ್ಪಯ್ಯ ತಂದುಕೊಟ್ಟ ಗಣಪಿಯ ವಿಳಾಸವನ್ನು. ಅವಳು ಈಗ ಧಾರವಾಡದಲ್ಲಿ ಇದ್ದಾಳಂತೆ. ಶಿರೋಸ್ಸಿಯಿಂದ ಎಷ್ಟೋ ಮೈಲು ದೂರದಲ್ಲಿರುವ ಧಾರವಾಡ. ಅರಿಯದ ಊರು, ದೊಡ್ಡ ಪಟ್ಟಣ. ಗಣೇಶ ಕೈಬರಹದ ವಿಳಾಸವನ್ನು ನೋಡಿದ. ಅವಳನ್ನು ಹುಡುಕುವುದು ಸುಲಭವೇನಲ್ಲ. ಯಾರಾದರೂ ತನ್ನನ್ನು ಅಲ್ಲಿಯ ವರೆಗೆ ಕರೆದುಕೊಂಡು ಹೋಗಿಬಿಟ್ಟರೆ....? ಎಂದೆನಿಸಿ ನೋಡಿದ ನಾಗಪ್ಪಯ್ಯನ ಮುಖವನ್ನು. ಆದರೆ ಹಾಗೇ ಉಡುಗಿಹೋಯಿತು ಅವನ ಧೈರ್ಯ.

"ಮಧ್ಯಾಹ್ನದ ಮೇಲೆ ಒಂದು ಬಸ್ಸು ಇದೆ ಧಾರವಾಡಕ್ಕೆ. ಸರಕಾರೀ ಬಸ್ಸು, ಸ್ಥಳ ಸಿಕ್ಕೀತು, ಅದರಲ್ಲಿ ಹೊರಟುಬಿಡು" ಎಂದ ನಾಗಪ್ಪಯ್ಯ ಮುಂದಿನ ಆಲೋಚನೆಗೆ ಹೆಚ್ಚಿನ ಅವಕಾಶ ಕೊಡದೆ.

"ಅವನಿನ್ನೂ ಸಣ್ಣವ. ಹೇಗೆ ಹೋಗ್ತಾನೆ?" ಕೇಳಿದಳು ಸಣ್ಣಮ್ಮ.

"ನಿನಗ್ಯಾಕೆ ಅಧಿಕಪ್ರಸಂಗ? ಮೀಸೆ ಬರಲಿಕ್ಕಾದ ಹುಡುಗ ಇನ್ನೂ ಸಣ್ಣವನೇ? ಹೋಗಿ ಅಭ್ಯಾಸವಾಗಲಿ. ಅನ್ನ ಆಗಿದ್ದರೆ ಬಡಿಸು, ಊಟ ಮಾಡ್ಕೊಂಡು ಹೋಗಲಿ." ಕಣ್ಣು ಕೆಂಪಾಗಿ ನುಡಿದ ನಾಗಪ್ಪಯ್ಯ ತಾನೇ ಒಳಗೆ ನಡೆದು ಅವನಿಗೆ ಊಟದ ಬಟ್ಟಲನ್ನಿಟ್ಟ.

"ದಾರಿ ಖರ್ಚಿಗೆ ಹಣ ಕೊಡ್ತೇನೆ. ಜಾಗ್ರತೆಯಾಗಿ ಇಟ್ಟುಕೋ. ಗಣಪಿಗೆ ನಮ್ಮ ಹೆಸರು ಹೇಳಿದರೆ ಎಲ್ಲ ಅರ್ಥವಾಗುತ್ತದೆ. ನಾನೇನು ನಿನಗೆ ಹೇಳಿಕೊಡಬೇಕಾಗಿಲ್ಲ."

"ನನಗೆಲ್ಲ ಗೊತ್ತು. ಆದರೆ ಮತ್ತೆ ನಾನಿಲ್ಲಿಗೇ ಬರುವಂತಾದರೆ....?"

“ಆ ಮಾತನ್ನು ಹೇಳಬೇಡ.” ಸರ್ರನೆ ರೇಗಿದ, “ಇನ್ನು ನೀನು ಇಲ್ಲಿಗೆ ಬರುವ ಪ್ರಶ್ನೆಯೇ ಇಲ್ಲ. ನನ್ನ ಕಷ್ಟಗಳನ್ನೂ ಸ್ವಲ್ಪ ಅರ್ಥಮಾಡಿಕೋ!”

ಮತ್ತೆ ಅರ್ಧಗಂಟೆಯಲ್ಲಿ ಹೊರಟು ಸಿದ್ಧನಾದ. ಕೈಯಲ್ಲಿ ಒಂದು ಸಣ್ಣ ಚೀಲ. ಸಣ್ಣಮ್ಮ ದಾರಿಯಲ್ಲಿ ತಿನ್ನಲೆಂದು ಕಟ್ಟಿಕೊಟ್ಟಳು ಹುಡಿ ಅವಲಕ್ಕಿ ಮತ್ತು ಬೆಲ್ಲ. ಒಂದೊಂದು ರೂಪಾಯಿಗಳ ಮುಷ್ಟಿಯಾದ ಇಪ್ಪತ್ತು ನೋಟುಗಳನ್ನು ಎರಡೆರಡು ಬಾರಿ ಎಣಿಸಿ ನಾಗಪ್ಪಯ್ಯ ಅವನ ಜೇಬಿನಲ್ಲಿರಿಸಿದ. ಯಾವ ಅನುಕಂಪ, ಕರುಣೆಯುಂಟೋ ಗಂಗಮ್ಮ ಹತ್ತಿರ ಎರಡು ನೋಟುಗಳನ್ನು ಒಳತಡ್ಡಿಯಲ್ಲಿರಿಸಿದ ಗುಟ್ಟಾಗಿ. ಅವನು ಕೈಚೀಲವನ್ನೆತ್ತಿಕೊಂಡು ಅಂಗಳಕ್ಕಿಳಿಯುತ್ತಿದ್ದಂತೆ ಓಡಿಬಂದಳು ಸುನಂದಾ,

“ಅಣ್ಣಾ, ನಮಗೆ ಅಮ್ಮನೇ ಇಲ್ಲವಲ್ಲ! ನೀನೆಲ್ಲಿಗೆ ಹೋಗ್ತಾ ಇದ್ದೀ?”

ಸಣ್ಣಮ್ಮ ಮೊಮ್ಮಗಳನ್ನು ಬಾಚಿ ತನ್ನತ್ತ ಎಳೆದುಕೊಂಡಳು. ಗಣೇಶ ತನ್ನ ತಂಗಿ ಇವಳು ಎಂದು ಅದೇ ಮೊದಲಿನ ಪ್ರೀತಿಯಲ್ಲಿ ನೋಡಿದ ಅವಳನ್ನು. ಬದಿಯ ಜಗಲಿಯ ಗೋಡೆಯನ್ನೊರಗಿ ನಿಂತಿದ್ದಾನೆ ಶಂಕರ. ಮಾತನಾಡುವುದಕ್ಕೂ ಬಾಯಿಬಾರದ ಅವನ ಮುಖದಮೇಲೆ ನೂರು ವಿಚಿತ್ರ ಭಾವನೆಯ ತರಂಗಗಳು. ಏಕೋ ಕಸಿವಿಸಿ ಗಣೇಶನಿಗೆ. ಒಂದೇ ತಾಯಿಯ ಮಕ್ಕಳು ತಾವು ಮೂವರು! ತಾನು ಹಿರಿಯವನು. ಊಹೂಂ, ಅಲ್ಲ. ತನಗೆ ಹಿರಿಸ್ಥಾನ ಎಲ್ಲಿದೆ? ತಾನು ಅವರಿಬ್ಬರಿಗೆ ಹಿರಿಯವನೂ ಅಲ್ಲ, ಕಿರಿಯವನೂ ಅಲ್ಲ. ಅವರಿಗೆ ಪರಕೀಯನು! ನಿಜವಾಗಿಯೂ ತನ್ನನ್ನು ಸಾಕಿದ ಅಮ್ಮನಿಗೆ ತನ್ನ ಮೇಲೆ ಎಷ್ಟು ಭರವಸೆಯಿತ್ತು. ಅವಳು ಸಾಯುವ ಎರಡು ದಿನಗಳ ಮೊದಲು ಜ್ವರದ ಅಮಲಿನಲ್ಲಿಯೂ ಅಂದಿದ್ದಳು:

“ನಾಳೆ ನಾನು ಜ್ವರದಲ್ಲಿ ಚೇತರಿಸಿಕೊಳ್ಳದೇಹೋದರೆ....ಗಣೇಶ, ಹಿರಿಯವನಾದ ನೀನು ನಿನ್ನ ತಂಗಿ-ತಮ್ಮನನ್ನು ಚೆನ್ನಾಗಿ ನೋಡಿಕೋಪ್ಪಾ. ಶಂಕರ ಬಹಳ ಚೂಟಿ ಹುಡುಗ. ಸುನಂದಾ ಹಟಮಾರಿ....”

ಅವಳೇನೋ ಅವನಿಗೆ ಕೊಟ್ಟಿದ್ದಳು ಹಿರಿಯ ಸ್ಥಾನವನ್ನು. ಆದರೆ ಉಳಿದವರಿಗೂ ಎಲ್ಲಿಂದ ಬರಬೇಕು ಆ ವಿಶಾಲಹೃದಯ. ಅವನು ನಿಧಾನವಾಗಿ ಹೆಜ್ಜೆ ಮುಂದೆ ಇರಿಸಿದ. ಅಷ್ಟರಲ್ಲಿ ಮತ್ತೆ ಕೇಳಿಸಿತು ನಾಗಪ್ಪಯ್ಯನ ಸ್ವರ:

“ಬೇಗ ಬೇಗ ನಡಿ, ಬಸ್ಸು ಬರುವ ಹೊತ್ತಾಗಿಹೋಯಿತು!”

ಸರಕಾರೀ ಬಸ್ಸು ಧಾರವಾಡವನ್ನು ತಲುಪಿದಾಗ ಹನ್ನೊಂದೂವರೆ ರಾತ್ರೆ. ತನ್ನ ಕೈಚೀಲದೊಂದಿಗೆ ಬಸ್ಸಿನಿಂದ ಕೆಳಗಿಳಿದ ಗಣೇಶ. ಅಪರಿಚಿತ ಊರನ್ನು ನೋಡಿ ಒಂದು ವಿಧದ ಹೆದರಿಕೆಯುಂಟಾಗಿಹೋಯಿತು ಅವನಿಗೆ. ನಾಗಪ್ಪಯ್ಯ ಎಂಥ ಕಟುಕ. ತನ್ನನ್ನು ಇಲ್ಲಿಯವರೆಗೂ ಕರೆತಂದು ಬಿಡಬಾರದಿತ್ತೇ? ಈ ರಾತ್ರೆ ತಾನೀಗ ಎಲ್ಲಿಗೆ ಹೋಗಲಿ?

ಅವನು ಬಸ್ಸು ನಿಲ್ದಾಣದ ಸುತ್ತಲೂ ಕಣ್ಣಾಡಿಸಿದ. ಎಲ್ಲೋ ಕೆಲವರು ಓಡಾಡಿಕೊಂಡಿದ್ದಾರೆ. ಯಾವುದೋ ಬಸ್ಸಿಗಾಗಿ ಕೆಲವು ಗಂಡಸರು ಮಕ್ಕಳು ಕಾದು ಕುಳಿತಿದ್ದಾರೆ ತಮ್ಮ ಗಂಟುಮೂಟೆಗಳೊಂದಿಗೆ. ಹತ್ತಿರದ ಬೀಡಾ ಅಂಗಡಿ ತೆರೆದುಕೊಂಡಿದೆ ಈ ರಾತ್ರೆಯಲ್ಲಿಯೂ. ಅವನು ಬಸ್ಸು ನಿಲ್ದಾಣದಿಂದ ಹೊರಗೆ ಕಾಲಿರಿಸಿದ. ಒಣಹುಲ್ಲು, ಕಡಲೆಹೊಟ್ಟಿನ ಪರಿಮಳದಿಂದ ಅರಳಿತು ಮೂಗು. ಓ....ಕುದುರೆಗಾಡಿಗಳು! ದೀಪದ ಕತ್ತಲೆಯಲ್ಲಿ ನಿಂತುಕೊಂಡಿವೆ. ಅವನು ಈವರೆಗೂ ನೋಡಿಯೇ ಇಲ್ಲ ಕುದುರೆಗಳನ್ನು. ಎಂತಹ ಕುದುರೆಗಳು! ಕೆಲವು ಮಲಗಿವೆ, ಕೆಲವು ನಿಂತು ಮೆಲಕಾಡಿಸುತ್ತಿವೆ. ಅದರ ಸಾಬಿಗಳೂ ಅಲ್ಲಲ್ಲಿ ನೆಲದ ಮೇಲೆ ಒರಗಿದ್ದಾರೆ ಗಿರಾಕಿಗಳ ಪ್ರತೀಕ್ಷೆ ಮಾಡುತ್ತ. ಅವನಿಗೆ ಕುದುರೆಗಳ ನುಣುಪಾದ ಮೈಯನ್ನು ಮುಟ್ಟುವ ಆಸೆಯಾದರೂ ಯಾಕೋ ಹೆದರಿಹೋದ. ಎಲ್ಲೋ ನಾಲ್ಕಾರು ನಾಯಿಗಳು ಸುಮ್ಮನೆ ಕಚ್ಚಾಡಿಕೊಳ್ಳುತ್ತ ಇವೆ. ದಾಂಬರು ರಸ್ತೆಗಳಲ್ಲಿ ಮಲಗಿ ನಿದ್ರೆ ಹೋಗಿದ್ದಾರೆ ಭಿಕ್ಷುಕರು. ನಿರ್ಜನವಾದ ದೊಡ್ಡದೊಡ್ಡ ರಸ್ತೆಗಳನ್ನು ಬೆಳಗಿಕೊಂಡಿವೆ ಬೀದಿದೀಪಗಳು. ಅಲಂಕಾರದ ಬೋರ್ಡುಗಳನ್ನು ಹೊತ್ತ ಮುಚ್ಚಿದ ಅಂಗಡಿ ಬಾಗಿಲನ್ನು ನೋಡುತ್ತ ಅವನು ನಾಲ್ಕು ಹೆಜ್ಜೆ ಮುಂದಿಡುತ್ತಿದ್ದಂತೆ ಯಾವುದೋ ಅರ್ಧತೆರೆದ ಹೋಟೆಲ್‌ನಿಂದ ನೀರುಳ್ಳಿಯ ಪರಿಮಳ ಮೂಗಿಗೆ ಬಡಿದು ಕೆರಳಿಸಿತು ಅವನ ಜಠರಾಗ್ನಿಯನ್ನು. ಅತ್ತ ಹೆಜ್ಜೆ ಹಾಕಿದ ಹೊಟ್ಟೆಗೆ ಏನಾದರೂ ಹಾಕಿಕೊಳ್ಳೋಣವೆಂದು.

ಹೋಟೆಲ್ ಮುಚ್ಚುವ ತಯಾರಿಯಲ್ಲಿದ್ದ ಅದರ ಯಜಮಾನ ಒಳಗೆ ಬಂದ ಗಣೇಶನನ್ನು ನೋಡಿ ಸಿಂಡರಿಸಿಕೊಂಡ ಮುಖವನ್ನು. ಅವನು ಕೇಳುವ ಮೊದಲೇ ಊಟ ಮುಗಿದಿದೆ ಎಂದು ಕೈಯಾಡಿಸಿಬಿಟ್ಟ. ಆರಿ ತಣ್ಣಗಾದ ದೋಸೆ ಸಿಕ್ಕಿತು. ಅದನ್ನೇ ಹೊಟ್ಟೆಗಿಳಿಸಿಕೊಂಡು ತನ್ನ ಜೇಬಿನಲ್ಲಿದ್ದ

ಗಣಪಿಯ ವಿಳಾಸವನ್ನು ಹೋಟೆಲ್ ಯಜಮಾನನಿಗೆ ತೋರಿಸಿ ಕೇಳಿದ:
"ಈ ಮನೆ ಎಲ್ಲಿದೆ?"

"ದಿನೇಶ ಕಂಪೌಂಡ್, ಜೈಲ್ ರೋಡ್" ಎಂದು ಉಚ್ಚರಿಸಿದ. ಆತ ಗಣೇಶನನ್ನು ತದೇಕಚಿತ್ತನಾಗಿ ನೋಡಿದ, "ಹೀಂಗs ಇದs ರಸ್ತೆಯಾಗ ಅರ್ಧಮೈಲು ದೂರ ಹೋಗಿ ಎಡಕ್ಕೆ ತಿರುಗು. ಆಮ್ಯಾಲ ಬಲಕ್ಕೆ ತಿರುಗು. ಕಡೀಗ ನೆಟ್ಟಗ ಮುಂದಕ್ಕೆ ಹೋಗು. ಮನಿ ಸಿಕ್ಕತೈತಿ" ಎಂದ.

ಅವನು ಹೇಳಿದ್ದು ಸಂಪೂರ್ಣ ಅರ್ಥವಾಗದಿದ್ದರೂ ಅರ್ಥಮಾಡಿಕೊಂಡು ಅಲ್ಲಿಂದ ಹೊರಬಿದ್ದ. ನಿರ್ಜನವಾದ ರಸ್ತೆಯಲ್ಲಿ ಬೀದಿದೀಪಗಳ ಬೆಳಕಿನಲ್ಲಿ ನಾಲ್ಕು ಹೆಜ್ಜೆ ದೂರ ನಡೆಯುತ್ತಿದ್ದಂತೆ ನೋತುಬಂದವು ಕಾಲುಗಳು. ಈ ರಾತ್ರಿ ಮನೆಯನ್ನು ಹುಡುಕುವುದು ಕಷ್ಟಕರ. ಅಷ್ಟರಲ್ಲಿ ಅವನ ದೃಷ್ಟಿಗೆ ಕಾಣಿಸಿತು ಒಂದು ಉದ್ಯಾನ. ದೊಡ್ಡ ಕಬ್ಬಿಣದ ಹೆಬ್ಬಾಗಿಲ ಗೇಟು ಮುಚ್ಚಿದರೂ ಬದಿಯಲ್ಲಿರುವ ತಿರುಗುವ ಕಿರಿದಾದ ಗೇಟಿನಿಂದ ಯಾರೂ ಒಳಗೆ ಹೋಗಿ ಬರಬಹುದು. ಉದ್ಯಾನವನ ಕಾಯುವ ಘೂರ್ಖ ಎಲ್ಲಿದ್ದನೋ. ಮರಗಳ ತಂಪುಗಾಳಿ ಬೀಸಿದಾಗ ಗಣೇಶ ಅವನಿಗರಿಯದಂತೆ ಕಿರುಗೇಟನ್ನು ತಿರುಗಿಸಿ ಉದ್ಯಾನವನವನ್ನು ಪ್ರವೇಶಿಸಿದ. ಒಳಗೆ ದೀಪಗಳು ಇರಲಿಲ್ಲ. ಬೀದಿಯ ದೀಪಗಳ ಬೆಳಕಿನಿಂದ ಕತ್ತಲೆಯ ಆವರಣಕ್ಕೆ ಕಾಲಿರಿಸಿದ ಅವನ ಕಣ್ಣುಗಳು ಸ್ವಲ್ಪ ಹೊತ್ತಿನಲ್ಲಿ ಅಲ್ಲಿಯ ಕತ್ತಲೆಗೆ ಹೊಂದಿಕೊಂಡುಬಿಟ್ಟವು. ಆಗಸದಲ್ಲಿ ಮಿನುಗುವ ಅಸಂಖ್ಯ ನಕ್ಷತ್ರಗಳ ಬೆಳಕಿನಲ್ಲಿ ಉದ್ಯಾನವನದ ಒಳಭಾಗ ಗೋಚರಿಸಿತು ಅಸ್ಪಷ್ಟವಾಗಿ.

ನಿರ್ಜನವಾದ ಮೆತ್ತನೆಯ ಹಸಿರು ಹುಲ್ಲಿನ ನೆಲ ಒದ್ದೆಯಾಗಿತ್ತು ರಾತ್ರಿಯ ಇಬ್ಬನಿಯಿಂದ. ಮೇ ತಿಂಗಳ ಕೊನೆಯ ದಿನಗಳು. ಧಾರವಾಡದ ಹವೆ ಹೆಚ್ಚು ಸೆಕೆಯಿಲ್ಲ ಉರಿಯಿಲ್ಲ, ಬಹಳ ಹಿತಕರವಾಗಿತ್ತು. 'ಈ ರಾತ್ರಿ ಇಲ್ಲಿಯೇ ನಿದ್ರೆ, ನಾಳೆ ಮುಂದಿನ ಕಾರ್ಯ' ಎಂದು ಮನಸ್ಸಲ್ಲೇ ಲೆಕ್ಕಹಾಕಿ ತಿರುಗಿದ ಅತ್ತ ಇತ್ತ. ಮೊದಲು ಕಾಣಿಸಿದ ಸಿಮೆಂಟ್ ಬೆಂಚಿನ ಕೆಳಗೆ ತನ್ನ ಮೈಬಗ್ಗಿಸಿ ಕೈಚೀಲವನ್ನೇ ತಲೆದಿಂಬನ್ನಾಗಿ ಮಾಡಿಕೊಂಡು ಮಲಗಿದ. ನಿನ್ನೆ ರಾತ್ರಿಯೂ ಸರಿಯಾಗಿ ನಿದ್ರಿಸಿರಲಿಲ್ಲ. ಈವತ್ತಿಗೆ ಪ್ರಯಾಣದ ಆಯಾಸ, ಮನದ ಆತಂಕ, ನೋತುಹೋದ ಅವನ ದೇಹ ನೆಲವನ್ನಪ್ಪಿದಾಕ್ಷಣ

ನಿದ್ರೆಯ ಲೋಕಕ್ಕೆ ಜಾರಿಹೋಯಿತು.

ಎಚ್ಚರವಾದಾಗ ಸುತ್ತಲಿನ ಜಗತ್ತು ಬೆಳ್ಳಂಬೆಳಗಾಗಿಹೋಗಿದೆ. ಪಕ್ಷಿಗಳ ಕಲರವದ ಧ್ವನಿಗೆ ಅವನಿಗೆ ಎಚ್ಚರವಾಗಿರಲಿಲ್ಲ. ತೀರ ಹತ್ತಿರದಲ್ಲಿ ಯಾರದೋ ಕರ್ಕಶಧ್ವನಿ ಮಲಗಿದಲ್ಲಿಂದ ಬಡಿದೆಬ್ಬಿಸಿದೆ ಅವನನ್ನು. ಧಡಬಡಿಸಿಕೊಂಡು ತಲೆ ಎತ್ತಿದಾಗ ಸಿಮೆಂಟಿನ ಬೆಂಚಿನ ಕೆಳಭಾಗ ಬಡಿಯಿತು ನೆತ್ತಿಗೆ. ಈಗ ತಾನೆಲ್ಲಿದ್ದೇನೆನ್ನುವದೂ ಸರಿಯಾಗಿ ತಿಳಿಯಿತು. ಮೈಮುರಿದು ಮುದ್ದೆಮಾಡಿಕೊಂಡು ಬೆಂಚಿನ ಒಳಭಾಗದಿಂದ ಹೊರಗೆದ್ದು ಬಂದ. ಅಷ್ಟರಲ್ಲಿ ದಪ್ಪದ ದೊಣ್ಣೆಯೊಂದು ಅಪ್ಪಳಿಸಿತ್ತು ಅವನ ಬೆನ್ನಮೇಲೆ. 'ಹಾಯ್' ಎನ್ನುತ್ತ ಬೆನ್ನನ್ನು ನೇರಮಾಡಿಕೊಂಡು ನಿಂತಲ್ಲಿಂದ ಹೊರಳಿ ನೋಡಿದ.

ಖಾಕಿ ಸಮವಸ್ತ್ರ, ತಲೆಗೆ ಪೇಟ, ಕಾಲಿಗೆ ದಪ್ಪದ ಬೂಟು, ಗಿರಿಜಾ ಮೀಸೆಯನ್ನು ಹೊತ್ತ ಕೆಂಪುಕಣ್ಣುಗಳ ಆಜಾನುಬಾಹು ವ್ಯಕ್ತಿ ನಿಂತಿದ್ದಾನೆ ಎದುರಿನಲ್ಲಿ. ನೋಡಿದಾಕ್ಷಣ ತಿಳಿದುಹೋಯಿತು ಅವನು ಇಲ್ಲಿಯ ಕಾವಲುಗಾರನೆಂದು.

"ಕಳ್ಳ, ಬದ್ಮಾಷ್!" ದೊಣ್ಣೆಯನ್ನು ಜೋರಾಗಿ ನೆಲಕ್ಕೆ ಕುಟ್ಟಿದ ಎದುರು ನಿಂತ ವ್ಯಕ್ತಿ, "ನಿಮ್ಮಪ್ಪನ ಮನಿ ಇದು ಅಂದ್ಕೊಂಡಿಯೇನೋ? ಯಾರ ಹತ್ರ ಕೇಳಿ ಇಲ್ಲಿ ಮಲಗಾಕ ಬಂದಿದ್ದೀ? ಒತ್ತ ಒದೀಲೇನು ನಾಕು?"

ಗಣೇಶ ತನ್ನ ನಾಲ್ಕಡಿ ಎಂಟು ಇಂಚಿನ ದೇಹವನ್ನು ಬಗ್ಗಿಸಿ ಆರು ಅಡಿಯವನನ್ನು ನೋಡಿದ. ಅವನ ಕೈಯಲ್ಲಿದ್ದ ದೊಣ್ಣೆ ಕುಣಿಯುತ್ತಿದೆ ಸಿಟ್ಟಿನಲ್ಲಿ.

"ಬೀದ್ಯಾಗ ಹೋಗೋ ಭಿಕ್ಷುಕರನ್ನ ಹೀಂಗ ಒಳಗ ಬಿಡ್ತಾ ಹೋದ್ರ ನಮಗ ಪಾರ್ಕನ್ನ ಗುಡಿಸಿಗುಡಿಸಿ ಸೊಂಟ ಬಗ್ತಾsದ. ಏನ್ಲೇ, ಬೋಡ್ಡೀ ಮಗನs....ಯಾಕಲೇ ಇಲ್ಲಿಗ್ಬಂದಿ? ನನ್ನ ಕಣ್ಣು ತಪ್ಪಿ ಹ್ಯಾಂಗಲೇ ಇಲ್ಲಿ ಮಲಗಿದ್ದೀ?"

"ನಾನು....ದೂರ....ದೂರದಿಂದ ಬಂದವನು. ಈ ಊರು ಹೊಸದು."

"ರಾಗ ಎಳೆದು ಒದರಬ್ಯಾಡ." ದೊಣ್ಣೆಯನ್ನು ಮತ್ತೊಮ್ಮೆ ನೆಲಕ್ಕೆ ಕುಟ್ಟಿ ಹೇಳಿದ ಆತ: "ರಾತ್ರೆಯೆಲ್ಲ ಕೇಳ್ದೆ ಮಲಗಿದ್ದಿಯಲ್ಲ ಬೇವಕೂಫ್. ಚಡ್ಡಿ ಕಿಸೆದಾಗ ಏನದs ತಗೀ ಮೊದಲು."

“ನನ್ನ ಅವ್ವ ಇದೇ ಊರಿನಲ್ಲಿದ್ದಾಳೆ. ಅವಳನ್ನ ಹುಡುಕ್ತಾ....”

“ಹೋಹೋಹೋ....ಅವ್ವ ನಿನ್ನ ನೋಡಾಕ ಇಲ್ಲಿಗ್ಬಂದಿ?” ಅತ ಅಟ್ಟಹಾಸದಿಂದ ನಗುತ್ತ ದೊಣ್ಣೆಯನ್ನು ತಿರುಗಿಸಿದ ಗಾಳಿಯಲ್ಲಿ, “ಯಪ್ಪೋ ....ನಿನ್ನ ತಲಿಗಿಲಿ ಕೆಟ್ಟದೇನು? ಏದ್ಸ್ ಮಗನೇ, ಒಂದ ದಫಾ ಈ ಪಾರ್ಕನ್ಯಾಗ ರಾತ್ರಿ ಕಳದಾಂದ ನನ್ನ ಕೈಬಿಸಿಮಾಡಬೇಕಪ್ಪೋ. ಹೂಂ. ಎಲ್ಯದ ಕೊಡು ಬ್ಯಾಗ.”

ಅವನ ಗಿರಿಜಾಮೀಸೆ ಕುಣಿಯಿತು. ಗಣೇಶ ಬೆದರಿ ಅವನ ಮುಖವನ್ನು ನೋಡುತ್ತ ಭದ್ರವಾಗಿ ಹಿಡಿದುಕೊಂಡ ಚಡ್ಡಿಕಿಸೆಯನ್ನು. ನಾಗಪ್ಪಯ್ಯ ಕೊಟ್ಟ ಹಣವನ್ನು ಅಷ್ಟು ಸುಲಭದಲ್ಲಿ ಕಳೆದುಕೊಳ್ಳಲು ಸಿದ್ಧನಿರಲಿಲ್ಲ ಅವನು.

“ಏನಲೇ, ನಿನ್ನ ಕೈ ತಗೀ.” ದೊಣ್ಣೆ ಗಣೇಶನ ಮೊಣಗಂಟಿಗೆ ಬಡಿಯಿತು, “ಕಿಸೇದಾಗ ರೊಕ್ಕ ಇಟ್ಕೊಂಡು ಇಲ್ಲ ಅಂತ ಸುಮ್ಮಕ ನಿಂತಿದ್ದೀಯಲ್ಲೋ. ನಾ ಯಾರು ಅಂತ ತಿಳಿದಿದ್ದೀ? ಈ ಪಾರ್ಕನ ಕಾವಲುಗಾರ! ನನ್ನ ಕಣ್ಣುತಪ್ಪಿ ಇಲ್ಲಿಗ್ಬಂದು ಹಾಂಗs ಹೋಗೂದಂದ್ರ ಹುಲಿ ಕೈಯಿಂದ ತಪ್ಪಿಕೊಂಡ್ಹಾಂಗ! ಕಿಸೆದಾಗ ಇದ್ದದ್ದನ್ನೆಲ್ಲ ಹಾಕು ನನ್ನ ಕೈಯ್ಯಾಗs....”

“ಇಲ್ಲ....ನನ್ನ ದುಡ್ಡು ಅದು. ನಾಗಪ್ಪಯ್ಯನಾವ ಕೊಟ್ಟದ್ದು ....”

“ಹೂಂ ಮತ್ತ....” ಗಹಗಹಿಸಿ ನಕ್ಕ ಕಾವಲುಗಾರ ಅವನತ್ತ ಬಗ್ಗಿ ಚಡ್ಡಿಯನ್ನು ಹಿಡಿದೆಳೆದು ಕಿಸೆಯೊಳಗೆ ಕೈತೂರಿ ಮುದ್ದೆಯಾದ ನೋಟುಗಳನ್ನು ಹಿಡಿದೆಳೆದ. ಗಣೇಶ ಕೊಸರಿಕೊಳ್ಳುತ್ತಿದ್ದಂತೆ ಹಣ ಕೈಗೆ ಸಿಕ್ಕಿದಮೇಲೆ ಅವನನ್ನು ನೂಕಿದ ಅಷ್ಟು ದೂರಕ್ಕೆ.

ಮುದ್ದೆಯಾದ ನೋಟುಗಳನ್ನು ನೋಡುತ್ತ ಕೋಸುಕಣ್ಣುಗಳು ನಕ್ಕವು. ಗಿರಿಜಾಮೀಸೆ ಕುಣಿಯಿತು. “ಹ್ಯಾಂಗಲೇ ಮಗನs. ಬಿಸಿ ಆಗದs ಬೆಣ್ಣಿ ಕರಗೋದಿಲ್ಲ. ಇಷ್ಟು ರೊಕ್ಕಾ ಕಿಸ್ಯಾಗ ಇಟ್ಟುಕೊಂಡು ಇಲ್ಲ ಅಂತಿಯಲ್ಲೋ. ಇನ್ನ ನೀನು ಇಡೀ ದಿನ ಇಲ್ಲೇ ಇರು, ಎಲ್ಲಾದರೂ ಹೋಗು —ನಾ ಅಂತೂ ಖುಷ್ ಆದೆ....”

ಗಣೇಶ ಹೌಹಾರಿಹೋದ! ಅಷ್ಟು ಸುಲಭದಲ್ಲಿ ಹಣವನ್ನು ಕಳೆದುಕೊಳ್ಳುವದೆಂದರೇನು? ತನಗಿಂತ ಅವನು ಎಷ್ಟೋ ದೊಡ್ಡವನು. ಉದ್ಯಾನ

ವನವನ್ನು ಕಾಯುವ ಕಾವಲುಗಾರ. ತನ್ನ ಕೆಲವು ರೂಪಾಯಿಗಳಿಂದ ಅವನಿಗೇನೂ ಪ್ರಯೋಜನವಿಲ್ಲ. ಅವನ ಹತ್ತಿರ ಬಂದು ಹಣ ಹಿಂದಿರುಗಿ ಕೊಡುವಂತೆ ಅಂಗಲಾಚಿದ.

ನೋಟುಗಳನ್ನು ತನ್ನ ಜೇಬಿಗಿಳಿಸಿ ಸೊಂಟದ ಬೆಲ್ಟನ್ನು ಸರಿಪಡಿಸಿ ಕೊಳ್ಳುತ್ತ ಕಾವಲುಗಾರ ಅವನತ್ತ ನೋಡದೆ ಹೊರಟ ಅಲ್ಲಿಂದ. ಗಣೇಶ ಅವನ ಕೈಹಿಡಿದೆಳೆದು ಮತ್ತೊಮ್ಮೆ ಬೇಡಿಕೊಂಡಾಗ ಕಣ್ಣು ಕೆಂಪಾಯಿತು ಕಾವಲುಗಾರನಿಗೆ,

"ಭಿಕಾರಿ! ನನ್ನ ಮೈ ಮುಟ್ಟುವಷ್ಟು ಧೈರ್ಯ ನಿಂದೇನು? ಇನ್ನು ಹೆಚ್ಚು ಗಲಾಟೆ ಮಾಡಿದಿ ಅಂದ್ರೆ ಆ ಜೇಲದಾಗಿದ್ದ ಅರಿವೀನೂ ತಗೋತೀನಿ ನೋಡು."

"ನಿನ್ನ ಕಾಲುಬೀಳ್ತೀನೆ, ನನ್ನ ಹಣವನ್ನು ಕೊಟ್ಟುಬಿಡು. ನನ ಗಂತೂ ಈ ನಿನ್ನ ಊರಿನ ಪರಿಚಯವಿಲ್ಲ. ಹೊಸದಾಗಿ ಬಂದವನು. ನನ್ನ ಅಮ್ಮನಿಗಾಗಿ ಬಂದವನು."

"ನನ್ನ ಹತ್ರ ಒದರಬ್ಯಾಡ. ನೋಡಿದ್ರೆ ದೊಡ್ಡ ಮನುಷ್ಯರ ಮಗನ್ಹಾಂಗ ಕಾಣಿಸ್ತಿ. ಅದ್ರೆ ತಿರುಗಲು ತಿಪ್ಯಾನ್ಹಾಂಗ ಯಾಕ ತಿರುಗ್ತೀ? ಹೋಗು ಇಲ್ಲಿಂದ."

"ಆ ಹಣ ಕೊಡು. ಇಲ್ಲವಾದರೆ ಇವತ್ತೆಲ್ಲ ನನಗೆ ಉಪವಾಸ."

"ಹೋಹೋ!....ನಿನ್ನಂಥವರಿಂದ ನನಗೂ ಸಂಪಾದನೆಯುಪ್ಪೋ—ಏನ್ಸ್...." ದೊಣ್ಣೆಯನ್ನು ಅವನತ್ತ ಬೀಸಿದ ಕಾವಲುಗಾರ, "ಹುಚ್ಚು ಮಂಗ್ಯಾನ ತರಹ ನನ್ನ ಹಿಂದ ಬಂದ್ರ ಇದರಾಗs ಹೊಡ್ದು ನಿನ್ನನ್ನು ಎತ್ತಿ ಪಾರ್ಕಿನಿಂದ ಎಸೀತೀನೆ ಹೊರಗೆ....ಬುದ್ಧಿಯಿಲ್ಲದವ...."

ಹತಾಶಭಾವದಿಂದ ನಿಂತಲ್ಲಿಯೇ ಕಾಲನ್ನಪ್ಪಳಿಸಿದ ಗಣೇಶನಿಗೆ ತಾನು ಬಹಳ ಸಣ್ಣವನೆಂದು ಈಗ ತಿಳಿದುಹೋಯಿತು. ರಟ್ಟೆಯಲ್ಲಿ ಬಲವಿದ್ದಿದ್ದರೆ ಈ ಕಾವಲುಗಾರನನ್ನು ಗಿರಿಗಿರಿ ತಿರುಗಿಸುತ್ತಾ ಇದ್ದೆ....ಎಂದುಕೊಂಡ. ಇಲ್ಲಿಗೆ ಬಂದದ್ದೇ ತಪ್ಪಾಯಿತು. ದಾರಿ ಬದಿಯಲ್ಲಿ ಭಿಕ್ಷುಕರಂತೆ ಬಿದ್ದು ಕೊಂಡಿದ್ದರು ಯಾರೂ ಕೇಳುತ್ತಿರಲಿಲ್ಲ ತನ್ನನ್ನು....ಉದ್ಯಾನವನದ ಗೇಟನ್ನು ದಾಟಿ ಹೊರಗೆ ಬಂದು ಕಿಸೆಯೊಳಗೆ ಕೈ ಹಾಕಿದ. ಖಾಲಿಯಾದ ಕಿಸೆ. ಎದೆ

ಥಸ್ ಎಂದಿತು. ವಿಳಾಸದ ಚೀಟಿ ನಾಪತ್ತೆ. ಅವನು ಅವಸರದಲ್ಲಿ ಕೈ ಚೀಲದಲ್ಲೆಲ್ಲ ನೋಡಿದ. ಅಂಗಿ ಜೇಬನ್ನು ಹುಡುಕಿದ. ಸಿಗಲಿಲ್ಲ ಆ ಸಣ್ಣ ಕಾಗದದ ತುಂಡು. ಕಾವಲುಗಾರ ಜೇಬಿನಿಂದ ನೋಟುಗಳನ್ನು ಎಳೆದು ಕೊಳ್ಳುವಾಗ ಆ ಚೀಟಿಯೂ ಅವನ ಕೈಗೇ ಹೋಗಿರಬೇಕು. ಹಣ ಕೈತಪ್ಪಿ ಹೋಗುವ ಆತಂಕದಲ್ಲಿ ಗಣೇಶನಿಗೂ ನೆನಪಾಗಲೇ ಇಲ್ಲ.

ಅವನು ಸರ್ರನೆ ಹಿಂದೆ ಹೊರಳಿದ. ಆದರೆ ಉದ್ಯಾನದ ಸುತ್ತು ತಿರುಗಿ ದರೂ ಕಾಣಿಸಲಿಲ್ಲ ಕಾವಲುಗಾರ. ಅವನಾಗಲೇ ರಾತ್ರಿಯ ಡ್ಯೂಟಿ ಮುಗಿಸಿ ಹೊರಟುಹೋಗಿರಬೇಕು. ಗಣೇಶನಿಗೆ ತಡೆಯಲಾರದ ಅಳು ಉಕ್ಕಿಬಂದಿತು. ವಿಳಾಸವಿಲ್ಲದೆ ಇಷ್ಟು ದೊಡ್ಡ ಪಟ್ಟಣದಲ್ಲಿ ಅವಳನ್ನು ಹೇಗೆ ಹುಡುಕುವದು? ತಾನಿಲ್ಲಿಗೆ ಬಂದದ್ದು ವ್ಯರ್ಥವಾಯಿತಲ್ಲ. ಅವನು ತನ್ನ ನೆನಪಿನ ಆಳವನ್ನು ಕೆದಕಿದ. 'ಜೈಲ್ ರೋಡ್' ಎನ್ನುವದನ್ನು ಮರೆತಿರಲಿಲ್ಲ. ಅದನ್ನೇ ಆಧಾರ ವಾಗಿಟ್ಟುಕೊಂಡು ಆ ಹೆಸರಿನ ರಸ್ತೆಯಲ್ಲಿ ಹುಡುಕಿದರೆ ಗಣಪಿಯ ಮನೆ ಖಂಡಿತ ಸಿಗಬಲ್ಲದು. ಅದರೊಂದಿಗೇ ನೆನಪಾಯಿತು ಗಂಗಯ್ಯ ಗುಟ್ಟಾಗಿ ತನ್ನ ಒಳಚಡ್ಡಿಯಲ್ಲಿ ಹತ್ತರ ಎರಡು ನೋಟುಗಳನ್ನು ಇರಿಸಿದ್ದಾನೆ ಎಂದು. ಸದ್ಯ ಆ ಹಣ ಕಾವಲುಗಾರನ ಗೃಧ್ರದೃಷ್ಟಿಗೆ ಬಿದ್ದಿರಲಿಲ್ಲ.

ಅಷ್ಟು ಹೊತ್ತಿಗೆ ಸಂಪೂರ್ಣ ಎಚ್ಚೆತ್ತುಕೊಂಡಿತ್ತು ಧಾರವಾಡ ನಗರ. ಜನರ ಸದ್ದುಗದ್ದಲಗಳ ಮಧ್ಯೆ ಕುದುರೆ ಗಾಡಿಗಳ ಓಡಾಟ, ಡಬ್ಬಲ್ ಬಸ್ಸುಗಳ ಸಂಚಾರ, ಹಾಲಿನವರ ಕೂಗು, ತರಕಾರಿಯವರ ಅಬ್ಬರ, ಎಲ್ಲಿಯೋ ವಿಮಾನ ಹಾರಿದ ಶಬ್ದ. ಅದರೊಂದಿಗೇ ರೇಲ್ವೇಗಾಡಿಯ ಧಡ್‌ಧಡ್ ಸದ್ದು. ಅದರ ಕುಹೂ....ಎಂಬ ಸಿಳ್ಳು ಬಹಳ ದೂರದ ವರೆಗೂ ಕೇಳಿಸುತ್ತಿದೆ. ಯಾರದೋ ಮನೆಯಲ್ಲಿ ಮದುವೆ. ಊರಿಗೆಲ್ಲ ಕೇಳಿಸುವಂತೆ ಮೈಕಾಸುರನ ಗಲಾಟೆ. ಸಾಲುಮರಗಳ ನೆರಳಿನಲ್ಲಿ ನಿಶ್ಚಿಂತೆಯಿಂದ ಮೇಯುತ್ತ ಮುಂದೆ ಸಾಗುವ ಎಮ್ಮೆಗಳ ಹಿಂಡನ್ನು ನೋಡುವದೇ ಒಂದು ಚೆಂದ. ಅಲ್ಲಿಯ ಎಮ್ಮೆಗಳೆಂದರೆ ಅಷ್ಟು ಸೊಗಸು.

ಎಮ್ಮೆಗಳನ್ನೂ ಅವುಗಳನ್ನು ಮೇಯಿಸಲು ಕರೆದೊಯ್ಯುತ್ತಿರುವ ಅವನದೇ ಪ್ರಾಯದ ಹುಡುಗರನ್ನು ನೋಡುತ್ತ ಗಣೇಶ ತನ್ನೊಳಗೇ ಉಬ್ಬಿ ಹೋದ ಚೂಡಿನಂತೆ. ಸುರುಳಿ ಎಮ್ಮೆಗಳನ್ನು ಎಷ್ಟು ನೋಡಿದರೂ ಸಾಲದು.

ಅವನಿಗೆ ಜೆಕ್ಕಿಪಾಡಿಯಲ್ಲಿ ತಾನು ಹಾಲುಕರೆಯುತ್ತಿರುವ ಎಮ್ಮೆಯ ನೆನಪು. ದೊಡ್ಡಮ್ಮನ ಒದರಾಟ, ಈಗ ಅವಳಿಗೆ ತಾನಿಲ್ಲದೆ ಆಗುವ ಕಷ್ಟಗಳನ್ನು ಯೋಚಿಸಿದಾಗ 'ನಾನಿಲ್ಲದೆ ಅವಳಿಗೂ ಬುದ್ಧಿ ಬರಲಿ' ಎಂದುಕೊಂಡ ನಗುತ್ತ.

ಅವನ ಕಾಲುಗಳು ಚುರುಕಾದವು. ನಡೆದು ಹೋಗುತ್ತಿದ್ದ ಅನೇಕರನ್ನು ತಡೆದು ನಿಲ್ಲಿಸಿ ವಿಚಾರಿಸಿದ, "ಜೈಲು ರೋಡ್ ಎಲ್ಲಿದೆ?" ಎಂದು. ಕೆಲವರಿಗೆ ತಿಳಿದಿಲ್ಲ. ಕೆಲವರು, "ಬಲಬದಿಗೆ ನೇರ ಹೋಗು" ಎಂದರೆ ಬೇರೆ ಕೆಲವರು "ಆ ದಾರಿ ತಪ್ಪು, ಸೀದಾ ಎಡಕ್ಕೆ ಹೋಗು" ಎಂದರು. ಸರಿಯಾದ ವಿಳಾಸವಿಲ್ಲದೆ ದೊಡ್ಡ ಪಟ್ಟಣದಲ್ಲಿ ಒಂದು ನರಹುಳವನ್ನೂ ಹುಡುಕುವದು ಅಸಾಧ್ಯ. ಗಣೇಶ ಮತ್ತೆಮತ್ತೆ ತಿರುಗಿದ. ಯಾರ್ಯಾರನ್ನೋ ವಿಚಾರಿಸಿದ. ಆಮೇಲೆ ಯಾರೋ ಒಬ್ಬ ಮುದುಕ "ಜೈಲ್ ರೋಡ್ ಬೆಳಗಾಂ ನಾಕಾದ ಹತ್ತಿರ ಅದ" ಎಂದೆಂದು ಅಲ್ಲೇ ಸಮೀಪದಲ್ಲಿ ನಿಂತಿದ್ದ ಕುದುರೆಗಾಡಿಯತ್ತ ಕೈತೋರಿಸಿದ,

"ನಮ್ಮ ಸೋಮಣ್ಣನ ಹಾಲಿನ ಗಾಡಿ ಅದs ದಾರ್‍ಯಾಗ ಹೋಗ್ತದ. ನೀನು ಅದರಾಗನs ಹೋಗು ಬೇಕಾದರ."

ಗಣೇಶ ಓಡಿದ ಕುದುರೆಗಾಡಿಯ ಹತ್ತಿರ. "ಸ್ವಾಮೀ, ಜೈಲ್‌ರೋಡ್ ಎಲ್ಲಿದೆ?" ಕೇಳಿದ ಆತುರದ ವಿನಯದಲ್ಲಿ.

ಕುದುರೆಯ ಕುತ್ತಿಗೆಯ ಪಟ್ಟಿಯನ್ನು ಸರಿಪಡಿಸುತ್ತಿದ್ದ ಪ್ರಾಯದ ತರುಣನೊಬ್ಬ ಹೊರಳಿ ನೋಡಿದ ಅವನನ್ನು. "ಜೈಲ್ ರೋಡ್ ಎಲ್ಯದ ಅಂತ ಕೇಳ್ತಿಯಲ್ಲೋ. ಅದು ಜೈಲ್‌ನ ಪಕ್ಕದಲ್ಲೇ ಅದs. ನೀನ್ಯಾರು, ಈ ಊರಿಗೆ ಹೊಸಬನೇನು?"

ಹೌದು ಎಂದು ತಲೆಯಲ್ಲಾಡಿಸಿದ ಗಣೇಶ ತಾನು ಕಳೆದುಕೊಂಡ ವಿಳಾಸವನ್ನು ಹೇಳುತ್ತಿದ್ದಂತೆ 'ಪಾಪ' ಎಂದು ಲೊಚಗುಟ್ಟಿದ ಎದುರು ನಿಂತವನು. ಆದರೆ ಗಣಪಿಯ ಹೆಸರೆತ್ತಿದಾಕ್ಷಣ ಅರಳಿದವು ಅವನ ಕಣ್ಣುಗಳು.

"ಓ!....ನೀನೀಗ ಅವರ ಮನೆ ಹುಡುಕ್ಕೋತ ಬಂದೀಯೇನು?"

"ಹೌದು, ನಿನ್ನೆ ರಾತ್ರಿಯೇ ಬಂದಿದ್ದೆ. ನನ್ನ ವಿಳಾಸ, ಹಣ ಎಲ್ಲ ಕಳೆದುಕೊಂಡೆ. ಈಗ ಇನ್ನು ಗಣಪಿಯ ಮನೆಯೂ ಸಿಕ್ಕದೆ ಹೋದರೆ...."

"ದೇವರು ದೊಡ್ಡವನಪ್ಪ." ಕುದುರೆಗಾಡಿಯವನು ಅವನ ಬೆನ್ನು

ತಟ್ಟಿದ, "ನನ್ನ ಗಾಡಿ ಅದೇ ದಾರ್‍ಯಾಗ ಹೋಗ್ತದೆ, ಹತ್ತು. ಕರ್ಕೊಂಡು ಹೋಗ್ತೀನಿ."

ಗಣೇಶ ಉತ್ಸಾಹದಿಂದ ಜಿಗಿದು ಕುಳಿತ ಗಾಡಿಯಲ್ಲಿ. ಅದರ ಕಮಾನಿನ ಮಾಡು ವಿಶೇಷ ಎತ್ತರವಿರಲಿಲ್ಲ, ಒಳಗೆ ಮೆತ್ತನ್ನ ಸೀಟುಗಳೂ ಇಲ್ಲ. ದಿನ ನಿತ್ಯವೂ ಹಾಲು ತೆಗೆದುಕೊಂಡು ಹೋಗುವ ಕುದುರೆಗಾಡಿ. ಹಾಲು ಮತ್ತು ಕಡಲೆ ತೌಡಿನ ಪರಿಮಳ ಒಳಗೆಲ್ಲ. ಒಂದು ದೊಡ್ಡ ಗೋಣಿ ತುಂಬ ಕಡಲೆಹೊಟ್ಟು, ಮೂರು ದೊಡ್ಡ ಹಾಲಿನ ಕ್ಯಾನುಗಳು, ಒಂದು ಸಾಮಾನಿನ ಬುಟ್ಟಿ. ಗಾಡಿಯವನು ಹತ್ತಿರದ ಹೋಟೆಲ್‌ನಿಂದ ಖಾಲಿಯಾದ ಇನ್ನೊಂದು ಹಾಲಿನ ಕ್ಯಾನು, ಅಳತೆಯ ಪಾತ್ರೆ ತಂದು ಇರಿಸಿದ ಗಾಡಿಯಲ್ಲಿ. ಕುದುರೆಯ ಪಟ್ಟಿಗಳನ್ನೆಲ್ಲ ಸರಿಪಡಿಸಿ ಗಾಡಿಗೆ ಕಟ್ಟಿ ತಾನು ಕುಳಿತ ಎದುರಿನಲ್ಲಿ.

ಕುದುರೆ ಡಾಂಬರು ಹಾಕಿದ ರಸ್ತೆಯ ಮೇಲೆ ಓಡಲಾರಂಭಿಸಿತು. ಹಾಲಿನ ಕ್ಯಾನುಗಳ ಮಧ್ಯೆ ಕುಳಿತ ಗಣೇಶನ ಮೈ ಓಲಾಡಿತು ಅತ್ತ ಇತ್ತ. ಕುದುರೆಯ ಖುರಪುಟಗಳ ಶಬ್ದದಿಂದ ಮೈಯೆಲ್ಲ ರೋಮಾಂಚನ. ಎಳೆ ಮಗು ವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವಂತೆ ಯಾರೋ ಜೋಗುಳದ ಹಾಡು ಹಾಡಿ ತನ್ನನ್ನು ಮಲಗಿಸುತ್ತಿದ್ದಾರೆ ಎಂದೆನಿಸಿತು. ಚಪ್ ಚಪ್ ಎಂದು ಕುದುರೆಯ ಮೇಲೆ ಲಘುವಾಗಿ ಬಾರಿಸುತ್ತ ಎದುರು ಕುಳಿತವನು ಅರ್ಧ ಹೊರಳಿದ,

"ಇದs ಸುರು ಬರ್‍ತಾ ಇದ್ದೀಯೇನು ಧಾರವಾಡಕ್ಕೆ?"

"ಹೂಂ."

"ಆ ಮನಿ ದಿನೇಶ್ ಕಂಪೌಂಡನಾಗ ಅದs. ಅಪ್ಪಾವರು ನಿಂಗೇನಾಗ ಬೇಕು?"

"ನಾನು ಅವಳ ಮಗ."

"ಯಪ್ಪೋ!...." ವಿಸ್ಮಯಗೊಂಡ ಅವನು ಕುದುರೆಯನ್ನು ಹಿಡಿದೆಳೆದು ನಿಲ್ಲಿಸಿದ ಅರೆಗಳಿಗೆ, "ಅಪ್ಪಾವರಿಗೆ ಈಟು ದೊಡ್ಡ ಗಂಡಮಗ ಅದಾನ ಅಂತ ಇವತ್ತs ನಂಗ ಗೊತ್ತಾತು...."

"ನಿನಗೆ ಅಮ್ಮನ ಪರಿಚಯ ಚೆನ್ನಾಗಿ ಇರಬೇಕಲ್ಲ?"

"ಹೂಂ, ಅವರು ಧಾರವಾಡಕ್ಕ ಬಂದು ಆಗಲೇ ಆರು ವರ್ಷ ಆತು.

ಅವತ್ತಿಂದ ನಾನೇ ಅವರ ಮನೀಗೆ ಹಾಲು ಸರಬರಾಜು ಮಾಡ್ತಾ ಅದೀನಿ. ಅಲ್ಲವೋ ತಮ್ಮಾ, ಈಟು ವರ್ಷ ನೀ ಯಾವೂರ್ನಾಗ ಇದ್ದಿ? ಅದ್ಯಾಕೆ ಈ ಕಡೀಗ ಬಂದೇ ಇಲ್ಲ? ನೀ ಒಬ್ಬ ಅದಿ ಅಂತ ಅವ್ವಾವರೂ ಹೇಳಲಿಲ್ಲ."

ಗಣೇಶ ಮುಗುಳ್ನಗೆಯ ಉತ್ತರವಿತ್ತ, ಅಪರಿಚಿತ ಕುದುರೆಗಾಡಿಯವ ನೊಂದಿಗೆ ಇಲ್ಲದ ತಲೆಹರಟೆಯ ಮಾತುಕಥೆ ಬೇಡ ಎಂದುಕೊಂಡು.

"ಅಜ್ಜನ ಮನ್ಯಾಗ ಇದ್ದಿರಬೇಕಲ್ಲ ನೀನು?" ಕುದುರೆ ಹೊಡೆಯುತ್ತ ಅವನು ಹೇಳಿದ, "ಆದರೂ ಇನ್ನೂ ಸಣ್ಣವ. ದೊಡ್ಡ ಊರಿಗೆ ಬಂದಿದ್ದಿ. ನಾ ಬರ್ತೇನೆ ಅಂತ ಒಂದು ಕಾಗ್ದ ಹಾಕ್ಬೇಕಿತ್ತು...."

"ಆಗಲೇ ಇಲ್ಲ ಕಾಗದ ಬರೆಯಲು. ಹಾಂ, ನೀನೆಲ್ಲಿಂದ ಹಾಲು ತರುತ್ತೀ?"

"ಎತ್ತಿನ ಗುಡ್ಡದಾಗ ನಮ್ಮ ಸಾಹುಕಾರರ ಹಾಲಿನ ಡೈರಿ ಅದಾವ. ದಿನಾ ಬೆಳಗ್ಗೆ ಸಂಜೆ ಇದೇ ಗಾಡ್ಯಾಗ ಹಾಲು ತಗೊಂಡು ಬಂದು ಮಾರಾಟ ಮಾಡಿ ಹೋಗ್ತೀನಿ. ನಿನ್ನ ಅವ್ವಾವರು ಮೊದಲಿನಿಂದಲೂ ನನ್ನ ಹಾಲಿನ ಗಿರಾಕಿ. ಅದ್ಕs ನೀ ಅವರ ಹೆಸರು ಹೇಳಿದಾಕ್ಷಣ ಯಾರು ಅಂತ ನನ್ನ ತಲೀಗೆ ಹೊಳೀತು...."

ಕುದುರೆಗಾಡಿ ಎಷ್ಟು ಬೇಗ ದಾರಿಯನ್ನು ಮುಗಿಸಿಬಿಟ್ಟವೋ ತಿಳಿಯಲೇ ಇಲ್ಲ. ಬೆಳಗಿನ ಹಿತವಾದ ಬಿಸಿಲಿನಲ್ಲಿ ಎಲ್ಲಿಯೂ ನಿಲ್ಲದೆ ಹೀಗೇ ಹೋಗುತ್ತ ಇರಬೇಕು ಎಂದೆನಿಸಿತು ಗಣೇಶನಿಗೆ. ಈವರೆಗೂ ಕುದುರೆಗಾಡಿ ನೋಡಿದವ ನಲ್ಲ, ಕುಳಿತವನೂ ಅಲ್ಲ. ಅವನ ಮನಸ್ಸು ಸಂತೋಷದಲ್ಲಿ ಹಿಪ್ ಹಿಪ್ ಎನ್ನುತ್ತಿದ್ದಂತೆ ಕುದುರೆಗಾಡಿ ನಿಂತಿತು ಒಂದೆಡೆ.

"ಇಲ್ಲೇ ಇಳಿ." ಕುದುರೆಯಿಂದ ಅರ್ಧ ಹೊರಗೆ ಬಗ್ಗಿ ಹೇಳಿದ ಗಾಡಿ ಹೊಡೆಯುವವ, "ಈ ಮಣ್ಣಿನ ರಸ್ತೆ ಪಕ್ಕದಲ್ಲೇ ಹುಣಸೀಮರ ಐದ ಅಲ್ಲ.... ಅದರ ಬದೀಗೆ ಐದ ನೋಡು ಒಂದು ಚಾಳು. ಅಲ್ನೋಡೋ ಒಬ್ಬ ಹುಡುಗ ನಿಂತುಕೊಂಡು ಅದಾನಲ್ಲ. ಆ ಚಾಳಿನ ಹಿಂದಗಡೀನ ನಿನ್ನ ಅಪ್ಪನ ಮನಿ ಐದ. ಹೋಗು, ಸೋಮಣ್ಣನ ಕುದುರೆಗಾಡ್ಯಾಗ ಬಂದೆ ಅನ್ನು."

ಗಣೇಶ ಹಿಂಭಾಗದಿಂದ ಕೆಳಗಿಳಿದ. ಸೋಮಣ್ಣ ಅವನತ್ತ ನೋಡಿ ನಕ್ಕ ಮೃದುವಾಗಿ. ಕುದುರೆ ಮುಂದುವರಿಯಿತು. ನಿಂತಲ್ಲಿಯೇ ಕೈಬೀಸಿದ.

ಗಾಡಿ ಕಣ್ಮರೆಯಾದಮೇಲೆ ಗಣೇಶನಿಗೆ ಒಂದು ಗಳಿಗೆ ತಾನೇನು ಮಾಡಬೇಕೆನ್ನುವದು ತಿಳಿಯಲೇ ಇಲ್ಲ. ಈವರೆಗೂ ಇಲ್ಲದ ಭೀತಿ, ಒಂದು ವಿಧದ ಅಳುಕು, ಇನ್ಯಾವುದೋ ಹೊಸ ಭಾವನೆಯಿಂದ ನಡುಗಿತು ಅವನ ಮೈ. ತಾನು ಹೇಗೆ ವ್ಯವಹರಿಸಬೇಕು? ಒಂದು ಪರಿಚಯದ ಕಾಗದವನ್ನಾದರೂ ನಾಗಪ್ಪಯ್ಯನಿಂದ ಬರೆಯಿಸಿ ತರಬಹುದಿತ್ತು. ಮಾತು ಪ್ರಾರಂಭಿಸುವದು ಹೇಗೆ?—ಚಿಂತಿಸಿತು ಅವನ ಮನಸ್ಸು.

ಸಾಲುಮನೆಗಳ ಚಾಳಿನ ಕೊಳಕನ್ನು ತುಳಿದು ಹಿಂಭಾಗದ ಸ್ಥಳಕ್ಕೆ ಬಂದ. ದೊಡ್ಡದಾದ ಪೇರಲ ಮರದ ಬದಿಯಲ್ಲಿದೆ ಒಂದು ಮನೆ. ಅದರಾಚೆಗೆ ಸಿಮೆಂಟಿನ ಪಾಗಾರ. ಒಂದೆರಡು ಹೂವಿನ ಗಿಡಗಳಿವೆ ಬದಿಯಲ್ಲಿ. ನೋಡಲು ಅಷ್ಟೇನೂ ದೊಡ್ಡದಲ್ಲದ ಮನೆಯ ಹೊರಭಾಗದ ಕೋಣೆಗೆ ಕಬ್ಬಿಣಪಟ್ಟಿಗಳ ಕಿಟಕಿಗಳು. ಮುಚ್ಚಿದ ಬಾಗಿಲಿನ ಹೊರಗೆ ಬಿಸಿಲುಕಾಯಿಸುತ್ತ ಕುಳಿತಿತ್ತು ಒಂದು ಬಿಳಿ ಬೆಕ್ಕು.

ಗಣೇಶ ನಿಧಾನವಾಗಿ ಮೆಟ್ಟಲನ್ನೇರಿ ಬಾಗಿಲ ಚಿಲಕವನ್ನು ಕೈಯಿಂದ ಬಡಿದ ಎರಡು ಬಾರಿ. "ತರಕಾರಿಯವನು ಬಂದನೋ ಏನೋ." ಕೇಳಿಸಿತು ಒಳಗಿನಿಂದ ಸ್ವರ. ಆದರೆ ಯಾರೂ ಬರಲಿಲ್ಲ ಹೊರಗೆ. ಅವನು ಸ್ವಲ್ಪಹೊತ್ತಿನ ಮೇಲೆ ಮತ್ತೊಮ್ಮೆ ಮೆಲ್ಲನೆ ತಟ್ಟಿದ ಬಾಗಿಲನ್ನು. "ಯಾರು ಬಂದಿದ್ದಾರೆ ನೋಡು ಹೊರಗೆ."—ಹೆಣ್ಣಿನ ಧ್ವನಿಯೊಂದು ಸರಿಯಾಗಿ ಕೇಳಿಸಿತು ಅವನಿಗೆ. ಈಗಲೂ ತೆರೆದುಕೊಳ್ಳಲಿಲ್ಲ ಬಾಗಿಲು. ಮೂರನೆಯ ಸಲ ಬಾಗಿಲ ಚಿಲಕವನ್ನು ಸದ್ದು ಮಾಡುತ್ತಿದ್ದಂತೆ ತೆರೆದುಕೊಂಡಿತು.

"ಯಾರು ಬೇಕು?" ತೆರೆದ ಬಾಗಿಲಿನಿಂದ ಕೇಳಿದಳು ಪ್ರಾಯ ಸಂದ ಮುದುಕಿಯೊಬ್ಬಳು.

ಗಣೇಶ ನಿಂತುಬಿಟ್ಟ ಮೆಟ್ಟಲಿನ ಮೇಲೆ. "ಯಾರು ಬೇಕು?" ಎಂದು ಕೇಳುವಾಗ ಏನನ್ನು ಉತ್ತರಿಸಬೇಕು? ಬಾಗಿಲು ತೆರೆದವಳು ಮುದುಕಿ, ಅರವತ್ತು ವರ್ಷಕ್ಕೆ ಹತ್ತಿರದವಳಾಗಿರಬಹುದು. ತಾನು ಅರಸಿಕೊಂಡು ಬಂದವಳು ಇವಳಲ್ಲ. ತನ್ನನ್ನು ಸಾಕಿದ ಅಮ್ಮನಷ್ಟು ಪ್ರಾಯವಂತೆ ಅವಳಿಗೆ.

"ಯಾಕೆ ಬಂದದ್ದು?" ಮತ್ತೊಮ್ಮೆ ಕೇಳಿದಳು ಮುದುಕಿ.

ಅವನ ಕಣ್ಣುಗಳು ಒಳಗೆಲ್ಲ ಹರಿದಾಡಿದವು. ಸಣ್ಣದಾದ ಕೋಣೆ

ಯಲ್ಲಿ ಬಾಗಿಲಿಗೆ ಅರ್ಧ ಮುಖ ಮಾಡಿಕೊಂಡು ಕುಳಿತಿದ್ದಾನೆ ಒಬ್ಬ ಗಂಡಸು. ಅವನ ತೊಡೆಯ ಮೇಲೆ ಒಂದು ಮಗು. ಬದಿಯ ಒರಗುಬೆಂಚಿನ ಮೇಲೆ ಹತ್ತು ವರ್ಷದ ಹುಡುಗನೊಬ್ಬ ಕುಳಿತಿದ್ದಾನೆ. ಒಳಗಿನಿಂದ ಸ್ಟವ್‌ನ ಭರ್ ಭರ್ ಸದ್ದೂ ಕೇಳಿಸುತ್ತಿದೆ.

"ಅಮ್ಮ ಇಲ್ಲವೇ?"—ತಡೆತಡೆದು ಕೇಳಿದ ಮುದುಕಿಯನ್ನು.

ಮುದುಕಿ ಕಡಿಮೆ ಕ್ರಯದ ಬಟ್ಟೆ ತೊಟ್ಟು, ಪಾಸಿದ ಕೈಚೀಲ ಹಿಡಿದು ಕೊಂಡು ನಿಂತ ಗಣೇಶನನ್ನು ನೋಡಿ ಯಾರೋ ಬೇಡಲು ಬಂದವನು ಎಂದುಕೊಂಡು "ಗಣಪೀ" ಎಂದು ಕರೆಯುತ್ತ ನಡೆದಳು ಒಳಗೆ, "ಯಾರೋ ಒಬ್ಬ ಹುಡುಗ ಬಂದಿದ್ದಾನೆ ಭಿಕ್ಷೆಗೆ. ಏನಾದರೂ ಬೆಳಗ್ಗಿಯದು ಮಿಕ್ಕಿದ್ದರೆ ಕೊಟ್ಟು ಕಳಿಸು."

ಗಣೇಶನ ಕಿವಿಗಳಿಗೆ ಮೂರಕ್ಷರದ ಆ ಹೆಸರು ಕೇಳಿಸಿತು ವೀಣೆಯ ಝೇಂಕಾರದಂತೆ. ಪುಳಕಿತಗೊಂಡಿತು ಮೈಯೆಲ್ಲ. ನೂರು ದಾಟಿತು ಹೃದಯದ ಬಡಿತ. ಕಣ್ಣುಗಳು ಹೊಳಪಾಗಿ ಒಳಗಿನಿಂದ ಹೊರಬರುವವಳನ್ನು ನಿರೀಕ್ಷಿಸಿದವು ಕಾತುರದಿಂದ. ಗಣಪಿ....ಅದೇ ಹೆಸರು....ಅವಳು ತನ್ನ....

ಬಳೆಗಳ ಕಣ ಕಣ ನಾದದೊಂದಿಗೆ ಕೇಳಿಸಿತು ಹೆಜ್ಜೆಯ ಸದ್ದು. ಕಾಲುಂಗುರದ ಕಿಣಿಕಿಣಿ ಧ್ವನಿಯಿಂದ ತಲೆ ಎತ್ತಿದ. ಎದುರಿಗೆ ಬಂದು ನಿಂತಿದ್ದಾಳೆ ಅವನು ಈವರೆಗೂ ನೋಡಿರದ, ಅವನಿಗೆ ಜನ್ಮಕೊಟ್ಟವಳು ಎಂದು ಯಾರಿಗೂ ತಿಳಿದಿರದ ಆ ತಾಯಿ! ಗಣೇಶನ ಹೊಳೆಯುವ ಕಣ್ಣುಗಳು ಸಂಧಿಸಿದವು ಅವಳನ್ನು. ನೀಳಕಾಯದ ಗೌರವರ್ಣದ ಹೆಂಗಸು. ಅಗಲವಾದ ಹಣೆಯ ಮೇಲೆ ದೊಡ್ಡ ಕುಂಕುಮ, ತೀಕ್ಷ್ಣವೆನ್ನುವ ಕಣ್ಣುಗಳು, ಹಿಂದೆ ಎತ್ತಿ ಕಟ್ಟಿದ ರಾಶಿ ಕೂದಲಿನಲ್ಲಿ ಮುಖಕ್ಕಿಂತ ದೊಡ್ಡದಾಗಿ ಕಾಣುವ ಕಿವಿಗಳು....! ಅಗಲವಾದ ಕಿವಿಗಳು! ಗಣೇಶ ತನ್ನ ಕಿವಿಗಳನ್ನು ಮುಟ್ಟಿಕೊಂಡ. ಅಕ್ಕ ಎಷ್ಟು ಪ್ರೀತಿಯಿಂದ ಮುಖಕ್ಕಿಂತ ದೊಡ್ಡದಾದ ಅವನ ಕಿವಿಗಳನ್ನು ಸವರುತ್ತಿದ್ದಳಲ್ಲವೇ?....

"ಹಿಡಿ...." ಅವನ ಎದುರು ಬಂದು ನಿಂತವಳು ಉಪ್ಪಿಟ್ಟು ಹಾಕಿದ ಪತ್ರಾವಳಿಯನ್ನು ಹಿಡಿದಳು ಅವನ ಮುಂದೆ. ಆದರೆ ಕೈಯೊಡ್ಡಿ ತೆಗೆದು ಕೊಳ್ಳಲಿಲ್ಲ ಗಣೇಶ. ಇದೇನು ಮನಸ್ಸಿನೊಳಗೆ ಹೀಗಾಗುತ್ತಾ ಇದೆ?

ಯಾವುದೋ ಹೊಸ ಭಾವನೆಗಳನ್ನು ಹೊತ್ತುಕೊಂಡು ತನ್ನ ಹೆತ್ತ ತಾಯಿ ಯನ್ನು ನೋಡಲೆಂದು ಬಂದಿದ್ದಾನೆ ಎಷ್ಟೋ ಮೈಲು ದೂರದಿಂದ. ಸರಿ ಯಾದ ಸ್ಥಳಕ್ಕೆ ಬಂದು ತಲುಪಿದ್ದಾನೆ. ಕಿವಿಗಳಿಗೆ ಸ್ಪಷ್ಟವಾಗಿ ಕೇಳಿಸಿದೆ ಅವಳ ಹೆಸರು. ಕಣ್ಣುಗಳೂ ಮೋಸ ಮಾಡಿಲ್ಲ, ಎದುರಿನಲ್ಲಿ ಪ್ರತ್ಯಕ್ಷವಾಗಿ ಅವಳೇ ನಿಂತಿದ್ದಾಳೆ. ಆಕಾರ, ರೂಪವನ್ನು ಯಾರೂ ಹೇಳಿರದೇ ಇದ್ದರೂ 'ಅಲ್ಲ' ಎನ್ನುವ ಅನುಮಾನವೂ ಇಲ್ಲ. ಕೆದಕಿ ಬೆದಕಿ ನೋಡಿ ಸತ್ಯಸಂಗತಿ ಯನ್ನು ಅರಿತುಕೊಳ್ಳುವುದು ಕಷ್ಟವೇನಿಲ್ಲ. ಆದರೆ ಯಾಕೆ ಮನಸ್ಸು ಹೆಪ್ಪು ಗಟ್ಟುತ್ತಾ ಇದೆ? ಭಾವನೆಗಳು ಪುಟ್ಟಲುಪುಟಲಾಗಿ ಮೇಲೇರಬೇಕಿತ್ತು. ಉಕ್ಕಿಬಂದ ಮಾತೃಪ್ರೇಮದಿಂದ ಅವಳ ಅಡಿದಾವರೆಗಳಲ್ಲಿ ಎರಗಬೇಕಿತ್ತು ಅವನ ಶಿರ. 'ಇದೋ, ನಾನೇ ನಿನ್ನ ಮಗ' ಎಂದು ಬಾಯ್ತುಂಬ ಹೇಳಿ ಅವಳು ವಾತ್ಸಲ್ಯದಿಂದ ನೀಡಿದ ತೋಳತೆಕ್ಕೆಯಲ್ಲಿ ಅಡಗಬೇಕಿತ್ತು. ಆದರೆ ಅವನು ನಿಷ್ಕ್ರಿಯನಾಗಿ, ನಿರ್ವಿಕಾರದಿಂದ ನೋಡಿದ ಅವಳನ್ನು.

"ಹಿಡಿ, ತಗೋ—" ಎಂದಳು ಗದರಿಸುವ ಸ್ವರದಲ್ಲಿ.

"ನಾನು ಬೇಡಲು ಬಂದವನಲ್ಲ." ಗಣೇಶ ನೋಡಿದ ಅವಳ ಕಣ್ಣು ಗಳನ್ನು. "ನಿನ್ನನ್ನು ನೋಡಲೆಂದು ಇಲ್ಲಿಯವರೆಗೂ ಬಂದಿದ್ದೇನೆ. ನಾನು...."

ಮತ್ತೆ ಹಿಂದೇಟು ಹಾಕಿತು ಅವನ ಮನಸ್ಸು. ಯಾಕೋ ಬಹಳ ಸುಲಭವಾಗಿ ಅವಳನ್ನು 'ಅಮ್ಮ' ಎಂದು ಒಪ್ಪಿಕೊಳ್ಳಲೂ ಸಿದ್ಧವಾಗಲಿಲ್ಲ. ಅಕ್ಕುವಿನ ಸೌಮ್ಯವಾದ ನಗು ತುಂಬಿದ ಮುಖ ಕಾಣಿಸಿತು ಕಣ್ಣೆದುರು. ಜಗತ್ತನ್ನು ಕಣ್ತೆರೆದು ನೋಡಿದಂದಿನಿಂದಲೂ ಅಕ್ಕುವಿನ ಮುಖವನ್ನೇ ನೋಡುತ್ತ ಬಂದಿದ್ದಾನೆ. ಇನ್ನೀಗ ಹೊಸ ಮುಖವನ್ನು ಸ್ವೀಕರಿಸಿಕೊಳ್ಳು ವುದೂ ಅವನಿಂದಾಗಲಿಲ್ಲ. ಇವಳು ತನ್ನ ಅಮ್ಮ ಅಲ್ಲ ಎಂದೆನಿಸಿಬಿಟ್ಟಿತು.

"ಏನು ಮುಖ ಮುಖ ನೋಡ್ತ ಇದ್ದಿ? ಬೇಕಾದರೆ ತಗೋ. ನಾನೇನು ಹಳಸಿದ ಉಪ್ಪಿಟ್ಟು ನಿನಗೆ ಕೊಡ್ತಾ ಇಲ್ಲ."

"ನಾನು ಭಿಕ್ಷೆಗೆ ಬಂದಿಲ್ಲ. ತೋನ್ಸೆಯಿಂದ ಬರ್ತಾ ಇದ್ದೇನೆ."

"ತೋನ್ಸೆಯಿಂದ!" ಅಚ್ಚರಿಯ ಉದ್ಗಾರ, "ಯಾರ ಮನೆಯಾಯ್ತು?"

"ಗಂಗಮ್ಮನ ಮನೆ. ನಾನು ಅಕ್ಕುವಿನ ಸಾಕುಮಗ ಗಣೇಶ."

"ಅಕ್ಕುವಿನ ಸಾಕುಮಗ!" ಅವಳ ತೆರೆದ ಬಾಯಿ ಹಾಗೇ ತೆರೆಯಿತು.

ಅರೆಗಳಿಗೆ. ಕಣ್ಣುಗಳು ಇನ್ನಷ್ಟು ದೊಡ್ಡದಾಗಿ ದಿಟ್ಟಿಸಿದವು ಅವನ ಸರ್ವಾಂಗ ವನ್ನು. ಪತ್ರಾವಳಿಯಲ್ಲಿದ್ದ ಉಪ್ಪಿಟ್ಟು ಉದುರಿತು ನೆಲದ ಮೇಲೆ.

"ಅಕ್ಕ ಯಾರು ಎಂದು ತಿಳಿಯಲಿಲ್ಲವೇ? ಗಂಗಯ್ಯನ ಮಗಳು. ನಿನ್ನ ಅಪ್ಪ ಸ್ನೇಹಿತೆಯಂತೆ. ಅವಳೀಗ ಇಲ್ಲ, ತೀರಿಹೋಗಿ ಎರಡು ವರ್ಷಗಳಾದವು."

"ಅಕ್ಕ ತೀರಿಹೋದಳೇ?....ಮತ್ತೆ ನೀನು....ನೀನು...."

ಗಣೇಶ ತನ್ನ ಸಾಕುತಾಯಿ ತೀರಿಹೋದಮೇಲೆ ನಡೆದುದನ್ನೆಲ್ಲ ಹೇಳಲಾರಂಭಿಸುತ್ತಿದ್ದಂತೆ ಅವಳು ಸರ್ರನೆ ಹಿಂದೆ ಸರಿದಳು, "ನೀನ್ಯಾವನೋ ಗತಿ ಕೆಟ್ಟವನು. ನಡಿ ಇಲ್ಲಿಂದ!"

"ಗತಿ ಕೆಟ್ಟವನಂತೆ ಆದದ್ದು ನನ್ನ ಸಾಕಿದ ಅಮ್ಮ ತೀರಿಹೋದಮೇಲೆ! ಅವಳು ಬದುಕಿದ್ದರೆ ನಾನು ಈ ಸ್ಥಿತಿಯಲ್ಲಿ ಇರುತ್ತಿರಲಿಲ್ಲ. ನಾನು ಗಣಪಿಯ ಮಗ ಎಂದು ಬಹಳ ತಡವಾಗಿ ಮೊನ್ನೆಮೊನ್ನೆ ತಿಳಿಯಿತು. ತಿಳಿದಾಕ್ಷಣ ನಿನ್ನನ್ನು ನೋಡಬೇಕೆಂದೇ ಬಂದೆ ಇಲ್ಲಿಗೆ....ಆದರೆ...."

ಅವನ ಮಾತು ಪೂರ್ಣವಾಗುವ ಮೊದಲೇ ಅವಳು ತಡೆದಳು, "ಏಯ್—ಈ ಕಂಪೌಂಡ್ ದಾಟಿದರೆ ಕಾಣುವ ರಸ್ತೆಯ ಬಲಭಾಗಕ್ಕೆ ಏನಿದೆ ಗೊತ್ತ? ಹುಚ್ಚರಾಸ್ಪತ್ರೆ! ನೀನು ಅಲ್ಲಿಂದಲೇ ಬಂದಿರಬೇಕಲ್ಲವೇ?"

"ಇಲ್ಲ, ತೋನ್ಸೆಯಿಂದ ಬಂದವನು." ಗಟ್ಟಿಯಾದ ಸ್ವರ ತೆಗೆದ, "ಬೇಕಿದ್ದರೆ ಈಗಲೇ ತೋನ್ಸೆಗೆ ಅಥವಾ ನನ್ನ ಸಾಕು-ಅಪ್ಪ ಇರುವ. ಬೆಳ್ಳಿಪಾಡಿಗೆ ಬರೆದು ತಿಳಿದುಕೋ."

ಅವಳು ಪಕಪಕನೆ ನಕ್ಕಳು. "ನಿನ್ನ ಹಾಗೆ ನನಗೆ ಮತಿಗೆಟ್ಟಿಲ್ಲ! ಬೀದಿಯಲ್ಲೆಲ್ಲ ಹೀಗೆ ಎಂದು ಹೇಳ್ಕೊಂಡು ಬರಬೇಡ. ನೋಡಿದವರು, ಕೇಳಿದವರು ಏನಂದುಕೊಂಡಾರು?"

"ನಿನ್ನ ಹಾಗೆ ಹೆದರುವವನು ನಾನಲ್ಲ. ನನ್ನ ಎಲ್ಲ ಪರಿಚಯವನ್ನು ಹೇಳಿಕೊಂಡರೂ ನಿನಗ್ಯಾಕೆ ನನ್ನ ಗುರುತು ಸಿಗಲಿಲ್ಲ?" ನಸುಕೋಪದಲ್ಲಿ ಕೇಳಿದ.

"ಅವನದೇನಂತೆ ತಲೆಹರಟೆ?" ಗದರಿಕೊಂಡ ಒಳಗೆ ಕುಳಿತ ಗಂಡಸು.

ಅವಳು ಸಣ್ಣಗೆ ನಡುಗಿ ಅತ್ತಿತ್ತ ನೋಡಿದಳು. "ಯಾವನೋ ಭಿಕಾರಿ ಹುಚ್ಚ! ತಿನ್ನೋದಕ್ಕೆ ಕೊಟ್ಟರೂ ಏನೇನೋ ಹರಟೆ ಮಾಡ್ತ ಇದ್ದಾನೆ."

"ನಾಲ್ಕು ಕಾಸು ಕೊಟ್ಟು ಕಳುಹಿಸು ಅವನನ್ನು."

ಅವಳು ರಪ್ಪನೆ ಮುಚ್ಚಿಬಿಟ್ಟಳು ಬಾಗಿಲನ್ನು. ಗಣೇಶ ನಡುಗಿಹೋದ ಕೋಪದಲ್ಲಿ. ಕಬ್ಬಿಣಪಟ್ಟಿಯ ಬಾಗಿಲನ್ನು ಬಲವಾಗಿ ಗುದ್ದುತ್ತ, "ಬಾಗಿಲು ತೆಗೀ" ಎಂದು ಅರಚಿದ ಜೋರಾಗಿ.

ಅವನ ಸ್ವರ ಕೇಳಿ ಮನೆಯೊಳಗಿನವರೆಲ್ಲ ಒಂದಾದರು ಹೊರಗಿನ ಕೋಣೆಯಲ್ಲಿ. ಗಣೇಶನಿಗಿಂತ ಚಿಕ್ಕವರಾದ ಇಬ್ಬರು ಗಂಡುಮಕ್ಕಳೂ ಇದ್ದರು ಅಲ್ಲಿ. ಅವರಲ್ಲಿ ಒಬ್ಬ "ಅಮ್ಮ, ಯಾರವನು?" ಎಂದು ಕೇಳುತ್ತಿದ್ದಂತೆ ಗಣೇಶ ಉದ್ರೇಕಗೊಂಡು ಇನ್ನೂ ಜೋರಾಗಿ ಬಡಿಯಲಾರಂಭಿಸಿದ ಕಿಟಕಿಯನ್ನು. ಗಂಡನು ಈಗ ಎಚ್ಚೆತ್ತು ಕುಳಿತಲ್ಲಿಂದ ಎದ್ದ.

"ಏನೋ....ಇದೇನು ನಿನ್ನ ಗಲಾಟೆ?"

"ಅವಳು ನನ್ನ ಅಮ್ಮ!...." ಕೈತೋರಿಸಿದ ಗಣೇಶ ಉದ್ವೇಗದಲ್ಲಿ ಹೇಳಿದ:

"ಮಾತನಾಡಿಸೋಣ ಅಂತ ಬಂದರೆ ನನ್ನ ಗುರುತು ಸಿಗಲಿಲ್ಲ....ನಿಜ ಹೇಳ್ತೀನೆ, ಸ್ವಾಮಿ, ನಾನು ಅವಳ ಮಗ, ಅವಳ ಸ್ನೇಹಿತೆಯ ಸಾಕುಮಗ."

"ಎಲ್ಲೋ ಹುಚ್ಚರಾಸ್ಪತ್ರೆಯಿಂದ ತಪ್ಪಿಕೊಂಡು ಬಂದಿದ್ದಾನೆ ಇಲ್ಲಿಗೆ." ಆತಂಕಗೊಂಡಳು ಅವಳು, "ಸುಮ್ಮನೆ ಇಲ್ಲದ ಬೊಬ್ಬೆ!"

"ನನ್ನ ದೊಣ್ಣೆ ಎಲ್ಲಿದೆ?" ಮುಷ್ಟಿಬಿಗಿದ ಗಂಡನು ಬಟ್ಟೆ ಹರಡುವ ಉದ್ದದ ದೊಣ್ಣೆಯನ್ನೆತ್ತಿಕೊಂಡ, "ಈಗೀಗ ಬೀದಿಯಲ್ಲಿ ಇಂತಹ ಭಿಕಾರಿಗಳ, ಹುಚ್ಚರ ಹಾವಳಿ ಅತಿಯಾಗಿದೆ. ತಡಿ, ನಾಲ್ಕು ಬಾರಿಸಿ ಬರ್ತೀನೆ!"

ಅವಳು ದೊಣ್ಣೆಯನ್ನು ಹಿಡಿದೆಳೆದುಕೊಂಡಳು. "ಪರದೇಶಿ ಹುಡುಗ, ನಾವ್ಯಾಕೆ ದಂಡಿಸಬೇಕು? ಒಂದು ರೂಪಾಯಿ ಕೊಡಿ ಹೊರಟುಹೋಗಲಿ."

ದೊಣ್ಣೆಯನ್ನು ನೋಡಿದ ಗಣೇಶ ಹಿಂದೆ ಸರಿದ. ಮುಷ್ಟಿಗಳು ಬಿಗಿದುಕೊಂಡವು. ಕಣ್ಣುಗಳಲ್ಲಿ ಕ್ರೋಧದ ಒಳಗೆ ಗುಸುಗುಸು ಮಾತು. ನನ್ನ ಹುಟ್ಟಿಗೆ ತಾನು ಜವಾಬ್ದಾರಳಲ್ಲ ಎಂಬಂತೆ ವರ್ತಿಸುತ್ತಿದ್ದಾಳೆ. ನಾನು ಯಾರು ಎನ್ನುವ ಸತ್ಯಸಂಗತಿ ತಿಳಿಸಿ ಸರಿಯಾದ ನ್ಯಾಯವನ್ನು ಬೇಡಬೇಕು.

ಅವನು ಮತ್ತೊಮ್ಮೆ ಕಬ್ಬಿಣ ಪಟ್ಟಿಯಲ್ಲಿ ಮುಖವನ್ನಿರಿಸಿ ಗಣಪಿಯ ಹೆಸರನ್ನೆತ್ತುತ್ತಿದ್ದಂತೆ ಅವಳು ಗುಡುಗಿದಳು, "ದೊಣ್ಣೆ ತಗೊಂಡು ಓಡಿಸಿ.

ಇವನ ಮಾತು ಕೇಳಿ ನನ್ನ ತಲೆಯಿಲ್ಲ ಹಾಳಾಗ್ತ ಇದೆ!"

ಇನ್ನು ಹೆಚ್ಚಿನ ಗಲಾಟೆ ಅನಗತ್ಯವೆಂದು ಮನೆಯಾತ ಬಾಗಿಲು ತೆರೆದು ಹೊರಗೆ ಬಂದು ಹಿಂದೆ ಸರಿಯುತ್ತಿದ್ದ ಗಣೇಶನನ್ನು ಬಿಗಿಯಾಗಿ ಹಿಡಿದು ನೂಕಿದ ಅಷ್ಟು ದೂರಕ್ಕೆ. ನೂಕಿದ ರಭಸಕ್ಕೆ ಮಣ್ಣು ನೆಲದ ಮೇಲೆ ಉರುಳಿದ ಗಣೇಶ ಹೆಡೆ ತುಳಿದ ನಾಗರದಂತೆ ಮೇಲೆದ್ದ. ಜ್ವಾಲಾಮುಖಿಯಾದ. ಕೈಯಿಂದ ನೆಲವನ್ನು ಬಡಿದು ಮಣ್ಣು ತೂರಿದ....

"ನೀವ್ಯಾರು ನನ್ನನ್ನು ಕೇಳುವವರು? ನಾನು ಗಣಪಿಯ ಮಗ! ಮದುವೆಗಿಂತ ಮೊದಲೇ ನನ್ನನ್ನು ಹುಟ್ಟಿಸಿ ತನ್ನ ಗೆಳತಿಯ ಮಡಿಲಿಗೆ ಹಾಕಿದ್ದಾಳೆ. ಅಲ್ಲ ಅಂತ ಅವಳು ಪ್ರಮಾಣ ಮಾಡಲಿ....ನೋಡೋಣ...."

"ಏನಂದೆ ನೀನು?" ಮನೆಯಾತ ಅವನ ಹತ್ತಿರ ಬಂದು ಶರ್ಟನ್ನು ಹಿಡಿದುಕೊಂಡ, "ಮರ್ಯಾದೆನಂತರ ಮನೆಗೆ ಬಂದು ಏನು ಬೊಗಳ್ತಾ ಇದ್ದಿ? ಹೇಳು, ನೀನ್ಯಾರ ಮಗ?"

"ಒಳಗಿದ್ದಾಳಲ್ಲ, ಅವಳ ಮಗ. ಕೇಳಿ ಅವಳ ಹತ್ರ."

"ಬುದ್ಧಿ ಸರಿಯಿದೆಯಾ...." ಮನೆಯಾತನಿಂದ ಬಿದ್ದಿತು ಕೆನ್ನೆಯ ಮೇಲೆ ಏಟೊಂದು. ಅವನು 'ಹಾಂ ಹೂಂ' ಎನ್ನುವ ಮೊದಲೇ ಅವಳು ಹೊರಗೋಡಿ ಬಂದು, "ಏನು ಹೇಳಿದೆ ನೀನು, ನಾಲಿಗೆ ಬಿಗಿ ಹಿಡಿ....ಇಲ್ಲ ವಾದರೆ ಕೊಂದುಬಿಡ್ತೀನೆ" ಎನ್ನುತ್ತ ದೊಣ್ಣೆಯೆತ್ತಿದಳು ಅವನ ಮೇಲೆ.

ಅಷ್ಟರಲ್ಲಿ ಸುತ್ತಲಿನ ಮನೆಗಳ ಜನರೆಲ್ಲ ಹೊರಗೆ ಬಂದರು. ಗಲಾಟೆ ಹೆಚ್ಚಿತು. ಏನಾಯ್ತು? ಎಂಬ ಕುತೂಹಲ ಎಲ್ಲರಿಗೂ. ಗಣೇಶ ದೊಣ್ಣೆಯೇಟಿ ನಿಂದ ತಪ್ಪಿಸಿಕೊಂಡು ಕೈಗೆ ಸಿಕ್ಕಿದ ಕಲ್ಲನ್ನು ತೂರಿದ ಅವಳತ್ತ. ಅದು ಅವಳ ಮುಖದ ಎಡಭಾಗಕ್ಕೆ ಬಡಿಯುತ್ತಿದ್ದಂತೆ 'ಹೋಹೋ' ಎಂಬ ನಾಲ್ಕಾರು ಸ್ವರಗಳು ಕೇಳಿಸಿದವು. "ಹಿಡಿದುಕೊಳ್ರೋ ಅವನನ್ನು" ಮನೆಯಾತ ಅಬ್ಬರಿ ಸಿದ ಜೋರಾಗಿ.

"ನಾಲ್ಕು ಒತ್ತ ಹಾಕ್ರೋ ಅವಂಗ. ಇಂಥಾ ಪೋಲಿ ತಿರುಗೋ ಮಕ್ಕಳಿಗೆ ಬುದ್ಧಿ ಬಂದ ಹೊರ್ತು ಉದ್ಧಾರ ಆಗೋದಿಲ್ಲ ಊರು" ಎಂದರು ಹಿರಿಯರೊಬ್ಬರು.

"ದಿನಕ್ಕೊಂದು ಇಂಥವು ಅವತಾರ ಆಗ್ತವೆ. ತಲೆ ಸರಿಯಿಲ್ಲದವ ನಮ್ಮ

ಕಾಂಪೌಂಡ್ ಹುಚ್ಚರಾಸ್ಪತ್ರೆ ಅಂದ್ಕೊಂಡಿದ್ದಾನೆ." ತರುಣನೊಬ್ಬ ಮುಂದೆ ಬಂದು ಅವನ ಮುಖದ ಮೇಲೆ ಗುದ್ದಿದ, "ಗಲಾಟೆ ಮಾಡ್ತಿಯೇನೋ ಇಲ್ಲಿಗ್ಬಂದು?"

"ಹಿಡ್ಕೊಳ್ರಿ ಅವನ್ನ. ಪೋಲೀಸರಿಗೆ ಒಪ್ಪಿಸೋಣ—"ಮತ್ತೊಬ್ಬ ಕಿರುಚಿದ.

ಗಣೇಶ ತನ್ನ ಸುತ್ತಲೂ ನೆರೆದವರನ್ನು ನೋಡುತ್ತ ಹೆದರಿ ಅಸಹಾಯಕನಂತೆ ಅಂಗಲಾಚಿದ, "ಹೊಡೀಬೇಡರಪ್ಪೋ....ನಾನು ಈ ಊರಿನವನಲ್ಲ, ಕಳ್ಳನೂ ಅಲ್ಲ, ಹುಚ್ಚನೂ ಅಲ್ಲ. ನಾನ್ಯಾರು ಅಂತ ಅವಳನ್ನು ಕೇಳಿರಿ.... ಅವಳು...."

"ಹುಚ್ಚರ ಮಾತು ಯಾರ್ರೀ ಕೇಳ್ತಾರೆ"—ಗುಂಪಿನಲ್ಲಿದ್ದವನೊಬ್ಬ ಹೇಳಿದ, "ಇವನಂತವನೇ ಒಬ್ಬ ಈಗ ಹದಿನೈದು ದಿನಗಳ ಮೊದಲು ಇಲ್ಲಿಗೆ ರಾತ್ರಿ ಬಂದು ಗಲಾಟೆ ಮಾಡಿದ್ನಲ್ಲ....ನೆನಪದೆ ಏನು ಎಲ್ಲಾರಿಗೂ?.... ಆ ದಾಮೂನ ಮಗಳನ್ನ ಏಕದಂ ತಮಾಷಿ ಮಾಡ್ತಾ ರಾತ್ರೆ ಹಾಡ್ಕೋತ ಇದ್ದನಲ್ಲ...."

"ಹೌದು....ಹೌದು...." ತಲೆಯಲ್ಲಾಡಿಸಿದ ಮತ್ತೊಬ್ಬ, "ನಾವೆಲ್ಲ ಒಟ್ಟುಸೇರಿ ಅವನನ್ನು ಹೇಗಾದರೂ ಹಿಡ್ದು ಮರತ ಹುಚ್ಚರಾಸ್ಪತ್ರೆಗೆ ಸೇರಿಸಿದ್ವಿ....ಹೋ....ಇವನೂ ಆಸ್ಪತ್ರೆ ಗೋಡೆ ಹಾರಿ ಸಲೀಸಾಗಿ ಬಂದಿರಬೇಕು....ಹಾಕ್ರೋ ನಾಲ್ಕು ಏಟು!"

ಸೇರಿದ ಜನ ಹುಯಿಲೆಬ್ಬಿಸಿದರು. ಹದಿಮೂರು ವರ್ಷದ ಆ ಹುಡುಗನ ಮಾತನ್ನು ಆಲಿಸುವ ತಾಳ್ಮೆಯಿರಲಿಲ್ಲ ಯಾರಿಗೂ. ನಾಲ್ಕಾರು ಜನರು ಮುಗಿದುಬಿದ್ದರು ಅವನ ಮೇಲೆ. ಮೈ, ಮುಖ, ಬೆನ್ನು ಎಲ್ಲೆಲ್ಲೂ ಏಟುಗಳ ಸುರಿಮಳೆ. ಅನಿರೀಕ್ಷಿತ ಆಘಾತ. ಅವನು ನೋವಿನಿಂದ ಒರಲಿದ್ದು ಕೇಳಿಸಲಿಲ್ಲ ಒಬ್ಬರಿಗೂ. ನಿಂತು ನೋಡುತ್ತಿದ್ದ ಅವಳ ಕೈಯಿಂದ ಜಾರಿ ಬಿದ್ದಿತು ದೊಣ್ಣೆ.

"ಬಿಟ್ಟುಬಿಡಿರಿ ಅವನನ್ನು!...." ಆತಂಕಗೊಂಡ ಅವಳು ಅಂದಳು, "ಬಡಪಾಯಿ ಏನೋ ಹೇಳ್ತ್ತಾ. ಹೇಳಿಕೊಳ್ಳಲಿ....ನಮ್ಮ ಮೈಗೆ ಹಿಡಿಯುವದಿಲ್ಲ."

"ಏಯ್...." ಒಬ್ಬಾತ ಅವನನ್ನು ಎತ್ತಿ ಕಿವಿಹಿಂಡಿದ, "ಇನ್ನೊಲೆ ಈ ಕಂಪೌಂಡ್‌ನಾಗ ಬಂದ್ರೆ ಕಾಲು ಮುರ್ದು ಕೈಗೆ ಕೊಡ್ತೀನೆ. ಖಬರದಾರ್...!"

"ಬಡ್ಡಿಮಗನ ಸೊಂಟ ಯಾಕೆ ಮುರೀತೀರಿ." ಹಿರಿಯ ವೃದ್ಧರೊಬ್ಬರು ಕರುಣೆಯ ನೋಟ ಬೀರಿದರು ಹುಡುಗನತ್ತ, "ಏನಲೇ ಮಗನೇ, ನಿನ್ನಪ್ಪ ಎಲ್ಲಿ ಅದಾಳೋ ಅಲ್ಲಿಗ್ಹೋಗಿ ಬದುಕು! ಹೀಂಗ ಕಂಡವರ ಮುನಿ ಬಾಗ್ಲಾಗೆ ಬಂದು 'ನಾನು ನಿಮ್ಮ ಮಗ' ಅಂತ ಒದರಬ್ಯಾಡ."

ಗಣೇಶನನ್ನು ಸುತ್ತುವರಿದವರು ಹಿಂದೆ ಸರಿಯುತ್ತಿದ್ದಂತೆ ಅವನು ನಿಧಾನವಾಗಿ ಎದ್ದು ಉಸಿರು ಬಿಗಿಹಿಡಿದು ಓಟಕಿತ್ತ ಅಲ್ಲಿಂದ. ಹೋ ಹೋ.... ಎಂಬ ನಗುವಿನ ಅಲೆಯೊಂದಿಗೆ ಒಂದೆರಡು ಕಲ್ಲುಗಳು ತೂರಿಬಂದವು ಬೆನ್ನ ಹಿಂದೆ. ಜನರ ಕಾಲತುಳಿತಕ್ಕೆ ಸಿಕ್ಕಿಹೋಗಿತ್ತು ಅವನ ಕೈಚೀಲ. ಎಲ್ಲರೂ ತಮಗೆ ತೋಚಿದ ರೀತಿಯಲ್ಲಿ ಆಡಿಕೊಳ್ಳುತ್ತ ಅಲ್ಲಿಂದ ಚದುರಿದಾಗ ಅವಳ ಕಣ್ಣುಗಳು ಅವನು ಹೋದ ದಿಕ್ಕನ್ನೇ ಹಿಂಬಾಲಿಸಿದವು.

## 22

ಮೂರು ದಿನಗಳು ಕಳೆದವು. ಗಣೇಶ ಸೂತ್ರ ಕಿತ್ತ ಗಾಳಿಪಟದಂತೆ ಎಲ್ಲೆಲ್ಲೋ ಅಲೆದ. ಚೀಲ ಕೈತಪ್ಪಿ ಹೋದುದರಿಂದ ಉಡಲು ಬೇರೆ ಬಟ್ಟೆಯಿಲ್ಲ. ಹೊದೆಯಲು ಹೊದಿಕೆಯಿಲ್ಲ. ವಾಸಿಸಲು ನೆಲೆಯಿಲ್ಲ. ಯಾವ ಮರದ ನೆರಳೋ, ಯಾವ ಹಾದಿಯ ಬದಿಯೋ ಕಳೆದ ಹಗಲುರಾತ್ರಿಗಳನ್ನು. ಯಾರೂ ಇಲ್ಲದ ಸಮಯದಲ್ಲಿ ಮತ್ತೊಮ್ಮೆ ದಿನೇಶ ಕಂಪೌಂಡ್‌ಗೆ ಹೋಗಿ ಅವಳನ್ನು ಕಾಣುವ ಬಯಕೆ. ಆದರೆ ಅವನ ತಲೆ ನೋಡಿದಾಕ್ಷಣ ಅಲ್ಲಿ ಗಲಾಟೆ. ಮತ್ತೆ ಎಲ್ಲಿ ಏಟು ಬೀಳುತ್ತದೆಯೋ, ಪೋಲೀಸರ ವಶವಾಗಿಬಿಡುತ್ತೇನೆಯೋ ಎಂಬ ಭೀತಿ ಅವನಿಗೆ. ಮಣ್ಣುರಸ್ತೆಯ ಬದಿಯಲ್ಲಿರುವ ಹುಣಸೇ ಮರದ ಕೆಳಗೆ ಅವನ ನಿರೀಕ್ಷೆ, ಅವಳು ಈ ದಾರಿಯಾಗಿ ಬಂದರೆ ಮಾತನಾಡಿಸಬಹುದೆಂಬ ದೂರದ ಆಸೆ.

ಮಣ್ಣುರಸ್ತೆಯು ನೇರವಾಗಿ ಬಲಭಾಗದಲ್ಲಿ ಜೈಲಿಗೆ ಹೋಗುವ ಡಾಂಬರು ಹಾಕಿದ ರಸ್ತೆ. ಎಡಭಾಗವಲ್ಲಿ ಸ್ವಲ್ಪ ಮುಂದೆ ಹೆದ್ದಾರಿ. ಅದರ

ಬದಿಯಲ್ಲಿಯೇ ಹುಚ್ಚರಾಸ್ಪತ್ರೆಯ ಕಟ್ಟಡ. ತನ್ನನ್ನು ಈಗದವರ ಕೈಗೆ ಸಿಕ್ಕಿದರೆ ಇವೆರಡರಲ್ಲಿ ಒಂದರಲ್ಲಿ ತನ್ನನ್ನು ಸೇರಿಸುವದು ಖಂಡಿತ ಎಂಬ ನಡುಕ ಹುಟ್ಟಿದೆ ಅವನಲ್ಲಿ. ಅಷ್ಟು ಹೆದರಿಸಿಬಿಟ್ಟಿದ್ದರು ಅವನು ಹುಡುಕಿಕೊಂಡು ಹೋದ ಮನೆಯ ನೆರೆಯವರು!

ಅವನಿಗೆ ಊರಿನ ತುಂಬಾ ತಾನು ಇಂಥವನು ಎಂದು ಹೇಳಿಕೊಂಡು ತಿರುಗಬೇಕೆನ್ನುವ ರೋಷ. ಆದರೆ ಯಾರಿಗೆ ನಂಬಿಕೆಯಿದೆ ಅವನಲ್ಲಿ? ಹಲ್ಲು ತೆಗೆದ ನಾಗರದಂತೆ ಸುಮ್ಮನಿರಲೇಬೇಕು.

"ಈ ಮಧ್ಯೆ ಸೋಮಣ್ಣನ ಕುದುರೆಗಾಡಿ ಸಿಕ್ಕಿತು ಗಾಂಧಿಬಜಾರಿನ ರಸ್ತೆಯ ಬದಿಯಲ್ಲಿ. ಪೇಟೆಗೆ ಹಾಲು ಮಾರಿ ಹಿಂದಿರುಗುವ ತಯಾರಿಯಲ್ಲಿದ್ದ ಸೋಮಣ್ಣ. ತಲೆಗೆದರಿಕೊಂಡು ತಿರುಗುತ್ತಿದ್ದ ಗಣೇಶನನ್ನು ನೋಡಿ ಚಪ್ಪಾಳೆ ತಟ್ಟಿ ಕರೆದ ಹತ್ತಿರಕ್ಕೆ.

"ಏನೋ—ತಮ್ಮಾ? ಅವ್ವ ಸಿಕ್ಕಿದಳೇನು?" ಕೇಳಿದ ಕಳಕಳಿಯಲ್ಲಿ.

"ಸಿಕ್ಕಿದಳು. ಆದರೆ ನನ್ನನ್ನು ಮನೆಗೆ ಸೇರಿಸಿಕೊಳ್ಳಲಿಲ್ಲ!"

"ಯಾಕೆ?" ವಿಸ್ಮಯಗೊಂಡ ಸೋಮಣ್ಣ, "ತನ್ನ ಹೊಟ್ಟೇಲಿ ಹುಟ್ಟಿದ ಮಗನ ಮ್ಯಾಲೂ ಅವಳಿಗೆ ಸಿಟ್ಟು ಬಂದ್ಯೈತೇನು?"

ಗಣೇಶ ಕುದುರೆಗಾಡಿಯ ಚಕ್ರದ ಮೇಲೆ ತಲೆಯಿರಿಸಿ ಭೋರೆಂದು ಅಳಲಾರಂಭಿಸಿದ, "ಅಳಬ್ಯಾಡ, ತಮ್ಮಾ. ಏನಾತು ಹೇಳು. ನಾನೇ ನಿನ್ನ ಅಪ್ಪನ ಹತ್ರ ಕರ್ಕೊಂಡು ಹೋಗ್ತೀನಿ. ನಡಿ, ಗಾಡಿ ಹತ್ತು...."

"ಇಲ್ಲ...." ಗಣೇಶ ಬಿಕ್ಕುತ್ತ ತಾನು ಯಾರು? ಇಲ್ಲಿಗೆ ಯಾಕೆ ಬಂದೆ? ಬಂದಮೇಲೆ ಗಣಪಿ ಮನೆಯೆದುರು ಏನೇನು ನಡೆಯಿತು ಎನ್ನುವದನ್ನೆಲ್ಲ ವಿವರಿಸುತ್ತಿದ್ದಂತೆ ಮೂಕವಿಸ್ಮಿತನಾದ ಸೋಮಣ್ಣ.

"ನೀ ಹೇಳೂದೆಲ್ಲ ಖರೇ ಸಂಗತಿಯೇ?"

"ಹೂಂ, ನನ್ನನ್ನು ಸಾಕಿದ ಅಪ್ಪ-ಅಮ್ಮ, ಮಾವ-ಅಜ್ಜ ಎಲ್ಲರೂ ನಾನು ಯಾರು?—ಎಂದು ಹೇಳದೆ ಮೋಸಮಾಡಿಬಿಟ್ಟರು. ಹುಟ್ಟಿದಾಕ್ಷಣ ನನ್ನನ್ನು ದೂರಮಾಡಿದ ಇಲ್ಲಿರುವ ಅಮ್ಮನಿಗೆ ನಾನು ಯಾರು ಎಂದೂ ತಿಳಿದಿದೆ. ಆದರೆ ಹೇಡಿತನದಿಂದ ಮುಖ ತಿರುಗಿಸಿದ್ದಾಳೆ....ಯಾಕೆ?" ಪರಸ್ಥಳದಲ್ಲಿ ಅಸಹಾಯಕತೆಯ ಕಣ್ಣೀರು ಉಕ್ಕಿಸಿತ್ತು ಅವನಲ್ಲಿ.

ಸೋಮಣ್ಣ ವಿಚಾರಪರವಶನಾದ. ಅವನು ಹಾಲು ಕೊಡುತ್ತಿರುವ ಆ ಮನೆ ಅವನಿಗೆ ಚೆನ್ನಾಗಿ ತಿಳಿದಿದೆ. ಎರಡು ಗಂಡು, ಒಂದು ಹೆಣ್ಣು ಮಗುವಿನ ತಾಯಿ, ಮರ್ಯಾದೆಯ ಹೆಂಗಸು. ಅವಳ ವಿಷಯದಲ್ಲಿ ಯಾವ ಒಡಕೂ ಇಲ್ಲ. ಈ ಹುಡುಗ ಹೇಳುವದೆಲ್ಲ ಸತ್ಯವೋ ಸುಳ್ಳೋ, ಯಾರಿಗೆ ಗೊತ್ತು? ಅವನಂತೂ ಹಾಲು ಕೊಟ್ಟು ತನ್ನ ಪಾಡಿಗೆ ತಾನು ಹೊರಟು ಬರುವವನು. ಹೆರವರ ಮನೆಮಂದಿಯ ವಿಷಯದಲ್ಲೆಲ್ಲ ಅವನಿಗೇಕೆ ಅಧಿಕಪ್ರಸಂಗ? ವಿಷಯವನ್ನು ಲಘುವಾಗಿ ತಳ್ಳಿಹಾಕಿ ಕುದುರೆಗಾಡಿಯನ್ನು ಏರಿದವನೂ ಬಿಕ್ಕಿಬಿಕ್ಕಿ ಅಳುತ್ತಿರುವ ಗಣೇಶನನ್ನು ನೋಡಿ ಕಸಿವಿಸಿಗೊಂಡು ಕೆಳಗಿಳಿದ.

"ಅಳಬೇಡ, ತಮ್ಮಾ. ನಿನ್ನ ಅಪ್ಪ ಮಾಡಿದ್ದು ಸರಿ ಅದ. ಆಕಿ ಮದ್ವಿ ಆಗಿ ಮರ್ಯಾದೆಯಾಗಿ ಅದಾಳೆ ನೋಡು. ನಿನ್ನನ್ನು ಒಂದ್ಸಾರಿ ತ್ಯಜಿಸಿದ ಮೇಲೆ ಮತ್ತೆ ಹ್ಯಾಂಗ ಕರ್ಕೊಂತಾಳೆ ಹೇಳು? ಕರ್ಕೊಂಡರೆ ಜನ ಒಪ್ತದ ಅವಳನ್ನು?"

"ಹಾಗಾದರೆ ನಾನೇನು ಮಾಡಲಿ ಈಗ?"

"ನೀ ಮೊದಲಿಗೆ ಎಲಿದ್ದಿಯೋ ಅಲ್ಲಿಗೇ ಹೋಗಿ ಬಾಳು. ಅದು ನಿನಗೂ ಒಳ್ಳೇದು, ಆಕಿಗೂ ಕ್ಷೇಮ."

ಗಣೇಶ ಗಾಡಿಯ ಚಕ್ರದ ಮೇಲೆ ತಲೆ ಹೊಡೆದುಕೊಂಡ. ರಸ್ತೆಯೆನ್ನುವದನ್ನೂ ಮರೆತು ಕೂಗಾಡಿದ ಸಿಟ್ಟಿನಲ್ಲಿ. ಸೋಮಣ್ಣನಿಗೆ ಅನುಮಾನ. ಇವನಿಗೆಲ್ಲೋ ಬುದ್ಧಿ ಕಡಿಮೆ ಎಂದೆನಿಸಿತು. ಇಂತಹ ವಿಷಯಗಳು ಅಲ್ಲಲ್ಲಿ ನಡೆಯುತ್ತಲೇ ಇರುತ್ತವೆ. ಸುಲಭದಲ್ಲಿ ಬಗೆಹರಿಯುವ ಸಮಸ್ಯೆಯೂ ಅಲ್ಲ. ಯಾವ ಹುತ್ತದಲ್ಲಿ ಯಾವ ಹಾವೋ! ಅದನ್ನೆಲ್ಲ ಕೆದಕಿ ನೋಡುವ ಕುತೂಹಲ ಅವನಿಗಿರಲಿಲ್ಲ. ಸುಮ್ಮನೆ ತಾನು ಮಾತನಾಡಿ ಅವನನ್ನು ಕೆರಳಿಸುವ ಬದಲು ಅವನ ಪಾಡಿಗೆ ಅವನಿರಲಿ ಎಂದುಕೊಳ್ಳುತ್ತ ಗಾಡಿಯನ್ನೇರಿದ ಸೋಮಣ್ಣ. ಚಾಟಿಯನ್ನು ಕೈಗೆತ್ತಿಕೊಂಡು ಕುದುರೆಯ ಮೇಲೆ ಚುಪ್ ಚುಪ್ ಬಾರಿಸಿದ. "ಬರ್ತೀನಪ್ಪೋ ನಾನು" ಎನ್ನುತ್ತಿದ್ದಂತೆ ಕುದುರೆಗಾಡಿ ಸಾಗಿತು ಮುಂದಕ್ಕೆ.

ತನ್ನ ವ್ಯರ್ಥ ಆಲಾಪನೆಯಿಂದ ಯಾವ ಪ್ರಯೋಜನವೂ ಇಲ್ಲ ಎಂದು ತಿಳಿದುಹೋಯಿತು ಗಣೇಶನಿಗೆ. ಕೈಯಲ್ಲಿರುವ ಹಣ ಮುಗಿದ ಮೇಲೆ ಪರಿಸ್ಥಿತಿ ಇನ್ನಷ್ಟು ಗಂಭೀರವಾಯಿತು. ದಿನೇಶ್ ಕಂಪೌಂಡ್‌ನಿಂದ ಹೊರಗೆ

ಬರುವ ಅವಳ ಎರಡು ಹುಡುಗರನ್ನು ನೋಡುವಾಗ ಹೊಗೆಯಾಡಲಾರಂಭಿಸಿತು ಈರ್ಷ್ಯೆ. ಅರಿಯದೆ ಅವನಲ್ಲಿ ಅಂಕುರಿಸಿತು ಒಂದು ವಿಧದ ಕ್ರೌರ್ಯ. ಸಮಾಜದ ಮೇಲೆ ತಿರಸ್ಕಾರ, ಜಿಗುಪ್ಸೆ.

ಬೀದಿಬೀದಿಗಳಲ್ಲಿ ಸುಮ್ಮನೆ ಅಲೆಯುತ್ತಿರುವ ಕೆಲವು ಹುಡುಗರು ಹೊಸಬನಾದ ಗಣೇಶನ ಪರಿಚಯ ಮಾಡಿಕೊಳ್ಳಲು ಮುಂದಾದರು. ತಾವು ಭಿಕ್ಷೆಬೇಡಿ ಸಂಪಾದಿಸಿದ್ದರಲ್ಲಿ ಸ್ವಲ್ಪ ನೀಡಿದರು ಅವನಿಗೆ. ಭಿಕ್ಷಾವೃತ್ತಿ, ಕದಿಯುವ ಗುಣ ಅವರಿಗೆ ರಕ್ತಗತವಾಗಿ ಬಂದ ಚಟ ಎಂದು ಅವನಿಗೆ ಬೇಗನೆ ಅರಿವಾಗಿ ಅವರೆಲ್ಲರಿಂದ ದೂರ ಸರಿದ. ಅಪ್ಪ ಪದೇಪದೇ ಎಚ್ಚರಿಕೆಯ ಬೋಧನೆ ನೀಡಿದ್ದು ಕಿವಿಗಂಟಿದಂತೆ ಕೇಳಿಸುತ್ತಿದೆ, "ದುಡಿಯಲು ಯೋಗ್ಯವಾದ ಕೈಗಳನ್ನು ಯಾವಾಗಲೂ ಇನ್ನೊಬ್ಬರೆದುರು ಬೇಡಬಾರದು. ದಾನಕ್ಕೆ ಯೋಗ್ಯವಾದ ಕೈಗಳಿಂದ ಏನನ್ನೂ ಸ್ವೀಕರಿಸಬಾರದು!" ಅಪ್ಪ! ಅವನ ಮಾತನ್ನು ಯಾವ ಪರಿಸ್ಥಿತಿಯಲ್ಲಿಯೂ ಉಲ್ಲಂಘಿಸುವುದು ಸಾಧ್ಯವಿಲ್ಲ ಅವನಿಂದ.

ಅಂದು ಎಲ್ಲೆಲ್ಲಿಯೋ ಅಲೆದು ದಣಿದು ಕಂಗಾಲಾಗಿ ಬಂದು ಕುಳಿತಿದ್ದಾನೆ ಕಿತ್ತೂರು ಚೆನ್ನಮ್ಮನ ಪಾರ್ಕಿನಲ್ಲಿ. ಮೈಮನಸ್ಸು ಹಿಂಡಿ ಹಿಪ್ಪೆಯಾಗಿಹೋಗಿದೆ. ಹೆಚ್ಚು ಆಲೋಚಿಸುವದಕ್ಕೂ ಮಿದುಳು ಹೂಡಿದೆ ಮುಷ್ಕರ. ಪಾರ್ಕಿನ ಹತ್ತಿರವೇ ಜೈಲ್ ರೋಡಿನ ರಸ್ತೆ. ಹುಚ್ಚರಾಸ್ಪತ್ರೆಯ ದೊಡ್ಡ ಗೇಟು ಸರಿಯಾಗಿ ಕಾಣಿಸುತ್ತದೆ. ಅಲ್ಲೇ ಅಲ್ಲವೇ ದಿನೇಶ್ ಕಂಪೌಂಡು. ಅವನಿಗೆ ಸಮೀಪವಾದ ಆತ್ಮೀಯರು ಎಂದೆನಿಸಿಕೊಳ್ಳಬೇಕಿದ್ದ ಒಂದು ಜೀವವೂ ಅಲ್ಲಿದೆ. ಆದರೆ ಅದೆಷ್ಟು ದೂರ....ಅದೆಷ್ಟು ಅಂತರ....!

ಸಾಯಂಕಾಲದ ಸಮಯ. ಮುಳುಗುವ ಸೂರ್ಯನ ಕೆಂಬಣ್ಣ ಪಾರ್ಕಿನ ತುಂಬ ತುಂಬಿಕೊಂಡಿದೆ. ಅಂದು ಧಾರವಾಡಕ್ಕೆ ಬಂದ ಮೊದಲ ರಾತ್ರಿ ಮಲಗಿದ್ದ ಉದ್ಯಾನವನಕ್ಕಿಂತ ದೊಡ್ಡದಾದ ಕಿತ್ತೂರು ಚೆನ್ನಮ್ಮನ ಪಾರ್ಕು. ಮಧ್ಯದಲ್ಲಿ ಇದೆ ಥ್ಯಾಕರೇ ಸಾಹೇಬನ ಗೋರಿ. ಕಿತ್ತೂರು ಚೆನ್ನಮ್ಮ ಥ್ಯಾಕರೆಯ ರುಂಡವನ್ನು ಚೆಂಡಾಡಿದ ಸ್ಥಳ ಅದು. ಅವನು ಗೋರಿಯ ಬದಿಯಲ್ಲಿ ಹುಲ್ಲಿನ ಮೇಲೆ ಕುಳಿತು ನೋಡುತ್ತಿದ್ದಾನೆ ಎಲ್ಲಿಯೋ. ಗಂಡಸರು, ಹೆಂಗಸರು, ಮಕ್ಕಳು ಬರುತ್ತಾ ಇದ್ದಾರೆ ಸಾಯಂಕಾಲದ

ವಿಹಾರಕ್ಕೆ. ತಂದೆತಾಯಿಯ ಜೊತೆಯಲ್ಲಿ ಚೆಂಡಿನಂತೆ ಪುಟಿಯುತ್ತ ಬರುವ ಮಕ್ಕಳು. ಬಣ್ಣದ ಕಾರಂಜಿಯ ಸುತ್ತಲೂ ಎಳೆಮಕ್ಕಳ ಕೇಕೆಯ ನಗು. ಜಾರುಬಂಡೆಯ ಮೇಲೆ ಎಷ್ಟೊಂದು ಉಲ್ಲಾಸ. ಹತ್ತಿ ಇಳಿಯುವವರ ಗಮನ ವಿಲ್ಲದ ಉತ್ಸಾಹ. ತೂಗುವ ಜೋಕಾಲಿ ಎಲ್ಲೆಲ್ಲಿಯೊ ಏರಿಳಿಯುತ್ತದೆ.

ಗಣೇಶನಿಗೆ ಇದ್ದಕ್ಕಿದ್ದಂತೆ ತನ್ನ ಮೇಲೇ ಅಸಹ್ಯ ಹುಟ್ಟಿಹೋಯಿತು. ತಾನು ಇವರೆಲ್ಲರಂತೆ ಹೀಗೆ ಕಾರಂಜಿಯಂತೆ ಉಲ್ಲಾಸದಿಂದ ಇರಬೇಕಿತ್ತು. ಯಾಕೆ ಇಲ್ಲ? ತನ್ನನ್ನು ಈ ಅವಸ್ಥೆಗೆ ತಂದವರು ಯಾರು? ಎಲ್ಲರಿಂದಲೂ ತಾನು ತಿರಸ್ಕೃತ. ಅಕ್ಕ ಬದುಕಿರುವಷ್ಟು ದಿನಗಳೂ ಕೊರತೆ ಕಾಣದ ಜೀವ. ಈಗ ಆ ಕೊರತೆಯನ್ನು ನೀಗಿಸಲು ಯಾರಿಂದಲೂ ಸಾಧ್ಯವಿಲ್ಲ.

ಅವನ ಯೋಚನೆ ಮುಂದುವರಿಯುತ್ತಿದ್ದಂತೆ ಯಾರೋ ತನ್ನ ಸಮೀಪದಲ್ಲಿ ಬಂದು ನಿಂತಂತೆ ಭಾಸವಾಗಿ ತಲೆ ಎತ್ತಿ ನೋಡಿದ. ಅರೆ!.... ಯಾರನ್ನು ಹುಡುಕಿಕೊಂಡು ಅವನು ಬಂದಿದ್ದನೋ, ಯಾರೊಡನೆ ಮಾತ ನಾಡಬೇಕೆಂದು ತವಕಗೊಂಡಿದ್ದನೋ ಅವಳು....ಅದೇ ಆಕರ್ಷಕ ರೂಪಿನ ಹೆಂಗಸು ಬಂದು ನಿಂತಿದ್ದಾಳೆ ಎದುರಿನಲ್ಲಿ. ಒಬ್ಬಳೇ ಬಂದಿದ್ದಾಳೆ. ಸಂಜೆಯ ಬೆಳಕಿನಲ್ಲಿ ಕರುಣೆ ತುಂಬಿದ ಅವಳ ಮುಖ ಗೋಚರಿಸಿತು ಸ್ಪಷ್ಟವಾಗಿ. ಅವಳು ಉಟ್ಟಿದ್ದು ದೊಡ್ಡ ಅಂಚಿನ ಇಲಕಲ್ ಸೀರೆ. ಅಂತಹದೇ ರವಕೆ. ಕೈಯಲ್ಲಿ ಒಂದು ಗಂಟನ್ನೂ ಹಿಡಿದುಕೊಂಡಿದ್ದಾಳೆ. ಅವನು ನೋಡುತ್ತಿದ್ದಂತೆ ಅವಳ ನೀಳಕಾಯ ನಿಧಾನವಾಗಿ ಅವನಿಂದ ತುಸು ದೂರದಲ್ಲಿ ಕುಳಿತಿತು. ಕಣ್ಣು ಗಳು ಭಯದಿಂದ ಅತ್ತಿತ್ತ ನೋಡಿದವು—ಮೂರುನಾಲ್ಕು ಬಾರಿ.

ಗಣೇಶ ವಿಚಿತ್ರವಾಗಿ ನೋಡಿದ ಅವಳನ್ನು. ಬುದ್ಧಿ, ಮಿದುಳು ಎಲ್ಲವೂ ಒಂದು ಕ್ಷಣ ಸ್ತಬ್ಧವಾಗಿಹೋಗಿದೆ. ಏನೆಂದು ಮಾತನಾಡಿಸುವದು? ಹೇಗೆ ಕರೆಯುವದು? ಅವಳಾಗಿಯೇ ಹುಡುಕಿಕೊಂಡು ಬಂದಿರಬೇಕು. ಅವಳೇ ಮೊದಲು ಮಾತನಾಡಿಸಲಿ....

ಇಬ್ಬರೂ ಮೌನವಾಗಿ ನೋಡಿಕೊಂಡರು ಒಬ್ಬರನ್ನೊಬ್ಬರು. ಪಾರ್ಕಿನ ತುಂಬ ಬೆಳಗಿಕೊಂಡವು ದೀಪಗಳು. ಕಾರಂಜಿ ಬಣ್ಣಬಣ್ಣದ ನೀರಿನೊಂದಿಗೆ ಪುಟಿದೆದ್ದಿತು. ಅವಳು ತನ್ನ ಕೈಯಲಿರುವ ಗಂಟನ್ನು ಅವನ ಮುಂದಿರಿಸಿದಳು. ಅವನೂ ಬಿಚ್ಚಿನೋಡಿದ: ಒಂದು ಜೊತೆ ಹೊಸ ಅಂಗಿಚಡ್ಡಿ ,ಹೊದೆಯುವ

ಉಣ್ಣೆ ಕಾಲು. ಇದೆಲ್ಲ ಏಕೆ? ಎಂಬಂತೆ ನೋಡಿದ ಪ್ರಶ್ನಾರ್ಥಕವಾಗಿ. ಆವಳು ಕೈಸನ್ನೆಯಿಂದಲೇ ಕೇಳಿದಳು 'ಊಟವಾಗಿದೆಯೇ? ಊಟಕ್ಕೇನು ಮಾಡಿದಿ?' ಎಂದು. ಅವನು ಹುಬ್ಬುಗಂಟಿಕ್ಕಿ ಮುಖ ತಿರುಗಿಸಿದ 'ನಿನಗೇಕೆ?' ಎಂಬಂತೆ. ಅವಳು ತನ್ನ ಉಡಿಯಲ್ಲಿ ಅಡಗಿಸಿಕೊಂಡು ಬಂದಿದ್ದ ಇನ್ನೊಂದು ಕಟ್ಟನ್ನು ಇರಿಸಿದಳು ಅವನ ಮುಂದೆ. ಅವನು ಅದನ್ನು ತೆರೆದು ನೋಡಿದ. ಒಂದು ಪತ್ರಾವಳಿಯಲ್ಲಿ ನಾಲ್ಕಾರು ದೋಸೆ-ಚಟ್ನಿ. ಅವನ ಕಣ್ಣುಗಳು ಅವನಿಗರಿಯದಂತೆ ಅರಳಿದವು. 'ತಿನ್ನು' ಎಂದು ಅವಳು ಹೇಳುವ ಮೊದಲೇ ಬೆರಳ ತುದಿಯಿಂದ ಪತ್ರಾವಳಿಯನ್ನು ಎಳೆದುಕೊಂಡಿದ್ದ. ಅವಳ ಚಂಚಲನೇತ್ರಗಳು ಮತ್ತೊಮ್ಮೆ ನೋಡಿದವು ಸುತ್ತಲೂ.

"ಎಷ್ಟು ದಿನ ಹೀಗೇ ಇಲ್ಲಿರುತ್ತೀ?" ಎಂದು ಗಂಭೀರಸ್ವರದಲ್ಲಿ ಮೆಲ್ಲನೆ ಕೇಳಿದಳು ಅವಳು, "ನಿನ್ನ ಬೆನ್ನ ಹಿಂದೆಯೇ ಇಷ್ಟು ದಿನ ಕಣ್ಣೋಡಿಸುವುದು ನನ್ನ ಕೆಲಸವಾಗಿದೆ. ಎಲ್ಲಿ ಮೊನ್ನೆಯಂತೆ ನನ್ನ ಮನೆಗೆ ಬಂದುಬಿಡ್ತೀಯೋ...."

"ಅಂತ ಹೆದರಿದಿ ಅಲ್ಲವೇ?" ಒಮ್ಮೆಲೇ ಬಾಯಿ ತೆರೆದ ಗಣೇಶ, "ನಾನ್ಯಾರು ನಿನ್ನ ಪಾಲಿಗೆ?"

"ಯಾಕೋ ನಿನ್ನನ್ನು ನೋಡಿದಾಕ್ಷಣ, ನೀನು ಊರಿನ ಸುದ್ದಿಯನ್ನೆಲ್ಲ ಹೇಳಿದಾಕ್ಷಣ ಹೊಟ್ಟೆಯೊಳಗೆಲ್ಲ ಸಂಕಟವಾಗಿಹೋಯ್ತು. ನಮಗಿಬ್ಬರಿಗೂ ಏನು ಸಂಬಂಧ ಹೇಳು....? ಅಕ್ಕನ ವಿಷಯ ಕೇಳಿ ಬಹಳ ದುಃಖವಾಯ್ತು ...."

ಅವನು ತಲೆ ತಗ್ಗಿಸಿದ. ಅಕ್ಕನನ್ನು ನೆನೆದುಕೊಂಡರೆ ಅವನಿಗೂ ಸಂಕಟ. ಎದುರು ಕುಳಿತವಳು ಇನ್ನಷ್ಟು ಹತ್ತಿರ ಸರಿದಳು. ಕೃಷ್ಣಯ್ಯನ ವಿಷಯವನ್ನು ಕೇಳಿಕೊಂಡಳು ಆಸಕ್ತಿಯಿಂದ. ಗಣೇಶನೂ ಅವಳು ಕೇಳಿದ ಪ್ರಶ್ನೆಗಳಿಗೆಲ್ಲ ಒಂದೊಂದಾಗಿ ಉತ್ತರಿಸುತ್ತ ಖಾಲಿ ಮಾಡಿದ ಪತ್ರಾವಳಿಯನ್ನು. ಸುಮಿತ್ರಳ ವಿಷಯ ಹೇಳುತ್ತಿದ್ದಂತೆ ಅವಳು ನಿಟ್ಟುಸಿರು ತೆಗೆದು ನೋಡಿದಳು ಆಕಾಶದತ್ತ. ದೀಪದ ಬೆಳಕಿನಲ್ಲಿ ಅವಳ ಕಣ್ಣುಗಳು ನೀರಿನಿಂದ ತುಂಬಿ ಹೊಳೆದವು. ಸ್ವಲ್ಪ ಹೊತ್ತು ಇಬ್ಬರಲ್ಲಿಯೂ ಮೌನ. ಅನಂತರ ಕೇಳಿದಳು ಅವಳು:

"ಕೃಷ್ಣಯ್ಯ ಬಹಳ ಒಳ್ಳೆಯವನು. ಅವನಂಥವರು ಲಕ್ಷಕ್ಕೊಬ್ಬರು ಸಿಗಲಾರರು. ಅಲ್ಲ, ನೀನ್ಯಾಕೆ ಅವನ ಆಶ್ರಯ ಬಿಟ್ಟು ಇಲ್ಲಿಗೆ ಬಂದೆ?"

"ಅವನ ಆಶ್ರಯ ತಪ್ಪಿಸಿ ಇಲ್ಲಿಗೆ ಬರಲಿಲ್ಲ ನಾನು. ನೀನು ಹೇಗಿದ್ದೀ ಅನ್ನೋದನ್ನು ನೋಡಲು ಬಂದವನು. ಅಲ್ಲಿ...." ಗಣೇಶ ಪತ್ರಾವಳಿಯನ್ನು ಮುಷ್ಟಿಮಾಡಿ ಎಸೆದು ಹೇಳಿದ: "ನೀನೂ ಒಬ್ಬಳು ತಾಯಿಯೇ! ಮೊನ್ನೆ ನಿನ್ನ ಮನೆಬಾಗಿಲಿಗೆ ಬಂದಾಗ ನಾಲ್ಕು ಜನರಿಂದ ನನ್ನನ್ನು ಹುಚ್ಚ ಎಂದು ಹೇಳಿಸಿ ಹೊಡೆಯಿಸಿ ಕಳುಹಿಸಿದೆಯಲ್ಲ....ಯಾಕೆ? ಎಲ್ಲರೆದುರು 'ನಾನು ಇವನ ಅಮ್ಮ' ಎಂದು ಹೇಳಬಾರದಿತ್ತೆ?"

ಅವಳು ತನ್ನ ಹಣೆಯ ಮೇಲಿನ ಬೆವರನ್ನು ಒರೆಸಿಕೊಂಡಳು. ಗಣೇಶ ಅವಳು ಕೊಟ್ಟ ಬಟ್ಟೆಯಮೇಲೆ ಕೈಯಾಡಿಸುತ್ತ ಕೇಳಿದ, "ಹಾಗಾದರೆ ಒಂದು ಮಾತು ಕೇಳಲಿ? ನನ್ನ ಅಪ್ಪ ಎಂದೆನಿಸಿಕೊಂಡವರು ಎಲ್ಲಿದ್ದಾರೆ ಹೇಳು?"

ಅವಳು ಬೆಚ್ಚಿಬಿದ್ದಳು ಈ ಪ್ರಶ್ನೆ ಕೇಳಿ. "ನಿನ್ನ ಅಪ್ಪ....!" ಉದ್ಗಾರ ಎತ್ತಿದ ಅವಳ ಧ್ವನಿಯಲ್ಲಿ ಕಂಪನ. "ಈಗ ನೀನೇನು ಮಾಡುತ್ತಿ ಆ ವಿಷಯ ತಿಳಿದು?"

"ಅವರು ಬಹಳ ಶ್ರೀಮಂತರಂತೆ. ನಿನ್ನನ್ನು ನೋಡಿದಂತೆ ನನಗೆ ಅವರನ್ನೂ ನೋಡಬೇಕೆಂಬ ಕುತೂಹಲ. ಎಲ್ಲಿದ್ದಾರೆ....ಹೆಸರೇನು?"

ಅವಳು ತನ್ನ ಕೈಯಲ್ಲಿದ್ದ ಗಾಜಿನ ಬಳೆಯನ್ನು ತಿರುಗಿಸಿದಳು.... ಯಾವದೋ ಒಂದು ಬಳೆ ಒಡೆದಿರಬೇಕು....ಅದರ ಒಡಕು ಧ್ವನಿ ಕೇಳಲು ಇಷ್ಟವಾಗದೆ ಅದನ್ನು ತುಂಡು ಮಾಡಿ ತೆಗೆದು ಹಿಡಿದುಕೊಂಡಳು ಅಂಗೈಯಲ್ಲಿ. ಒಡೆದ ಗಾಜಿನ ಚೂರುಗಳು. ಇನ್ನು ಒಂದು ಮಾಡಲು ಸಾಧ್ಯವೇ ಇಲ್ಲ. ತಲೆ ಸುತ್ತಿಬಂದವಳಂತೆ ಮೊಣಗಂಟಿನ ಮೇಲೆ ತಲೆಯಿರಿಸಿ ಕುಳಿತು ಬಿಟ್ಟಳು ಮೌನವಾಗಿ.

"ನಿನ್ನ ಹೊರತಾಗಿ ಅವರು ಎಲ್ಲಿದ್ದಾರೆ ಎನ್ನುವದು ಯಾರಿಗೂ ತಿಳಿದಿಲ್ಲ...."

"ಓ!....ಹೌದು, ಅವರೆಲ್ಲಿದ್ದಾರೆ ಎನ್ನುವದು ಗೊತ್ತು ನನಗೆ. ಅವರು ಶ್ರೀಮಂತರು ನಿಜ. ಆದರೆ ಗಣೇಶ! ನಿನಗೇನು ಪ್ರಯೋಜನ? ಅಯ್ಯೋ.... ನನಗೇನೋ ಆಗುತ್ತ ಇದೆ." ಅವಳ ಧ್ವನಿ ಗಂಟಲಿನಾಳದಿಂದ ಹೊರಗೆ ಬಂದಿತ್ತು. ಕುಳಿತಲ್ಲಿಂದ ಸರಿದಳು ಹಿಂದೆ ಹಿಂದೆ...."ನನಗೆ ತಿಳಿದಿಲ್ಲ.... ನನ್ನನ್ನು ಏನೂ ಕೇಳಬೇಡ."

“ಯಾಕೆ, ನಿನಗೇನು ನಾಚಿಗೆಯೋ? ಭೀತಿಯೋ?” ಕೇಳಿದ ಅವನು.

“ಛೀ ಛೀ!....ನಿನ್ನನ್ನು ಮಾತನಾಡಿಸಲು ಬಂದು ನಾನು ಮೂರ್ಖಳಾದೆ. ಮನಸ್ಸಿನ ತುಮುಲ ಇನ್ನಷ್ಟು ಹೆಚ್ಚಿತು....ಏನೋ ನಿನ್ನಮೇಲೆ ಕನಿಕರಗೊಂಡು ಇಲ್ಲಿಗೆ ಬಂದರೆ....ಛೆ!....ಸುಮ್ಮನೆ ಹೊರಟುಹೋಗಿಬಿಡು—ಬೆಳ್ಳಿಪಾಡಿಗೆ.” ಅವಳು ಕುಳಿತಲ್ಲಿಂದ ಧಡಕ್ಕನೆ ಎದ್ದಳು, “ಏನು, ಹಣ ಇಲ್ಲವಾ....? ಹಿಡಿ....”

ತಾನು ಉಟ್ಟ ಇಲಕಲ್ ಸೀರೆಯ ಸೆರಗಿನ ತುದಿಗೆ ಹಾಕಿಕೊಂಡ ಗಂಟನ್ನು ಬಿಚ್ಚಿ ಐದು ರೂಪಾಯಿಯ ಐದು ನೋಟುಗಳನ್ನು ಎಸೆದಳು ಅವನ ಮುಂದೆ. “ಊರಿಗೆ ಹೋಗಿ ತಲುಪಲು ಸಾಕು ಈ ಹಣ....” ಮುಂದಕ್ಕೆ ಮಾತನಾಡಲು ಆಗಲಿಲ್ಲ ಅವಳಿಂದ. ಅದೇಕೋ ಕಟ್ಟಿಬಂದಿತು ಗಂಟಲು. ನಿಧಾನವಾಗಿ ಹೊರಟಳು ಅವನೆದುರಿನಿಂದ.

ಗಣೇಶನಿಗೆ ಜೋರಾಗಿ ಕೂಗಬೇಕು ಎಂದೆನಿಸಿಬಿಟ್ಟಿತು. ಆದರೆ ಕುಳಿತು ಬಿಟ್ಟ ಕಲ್ಲಿನಂತೆ. ‘ನಾನು ಅವಳ ಮಗನಲ್ಲ—! ಅವಳು ನನಗೆ ತಾಯಿಯಲ್ಲ!’

ಸ್ವಲ್ಪ ದೂರ ಹೋದ ಅವಳು ಮತ್ತೆ ಹಿಂದಿರುಗಿ ಹತ್ತಿರ ಬಂದಳು.... ಅರೆಗಳಿಗೆ ನಿಂತು ನೋಡಿದಳು. ಯಾವುದೋ ಒಂದು ವಿಷಯ ಹೇಳಲು ಬಹಳವಾಗಿ ಕಷ್ಟಪಡುವಂತಿತ್ತು ಅವಳ ಮುಖಭಾವ. “ಓಹ್!....ದೇವರು ನಿನ್ನ ರಕ್ಷಣೆ ಮಾಡಲಿ!” ತನಗೆ ಮಾತ್ರ ಕೇಳಿಸುವಂತೆ ನುಡಿದು ಸರಸರನೆ ಹೊರಟು ಹೋಗಿಬಿಟ್ಟಳು. ಇನ್ನೊ ಒಂದು ಬಾರಿ ಅವಳು ಹಿಂದಿರುಗಿ ಬರುತ್ತಾಳೆ ಎಂದು ನಿರೀಕ್ಷಿಸಿದ ಗಣೇಶ. ಬರಲಿಲ್ಲ ಅವಳು.

ಗಣೇಶನಿಗೆ ಎಲ್ಲವೂ ಕನಸಿನಂತೆ ತೋರಿತು. ಅವಳು ಬಂದದ್ದು ನಿಜ. ಇಷ್ಟು ಹೊತ್ತು ಅವನೆದುರು ಕುಳಿತು ಮಾತನಾಡಿದ್ದು ನಿಜ. ಅದಕ್ಕೆ ಸಾಕ್ಷಿಯಾಗಿ ಇಲ್ಲೇ ಇವೆ ಅವಳು ಕೊಟ್ಟ ಬಟ್ಟೆ, ರೂಪಾಯಿಗಳು. ಆದರೆ ಯಾವುದು ಬೇಕಿತ್ತೋ ಅದು ಸಿಗಲಿಲ್ಲ. ಒಂದೇ ಒಂದು ಬಾರಿ ಸ್ನೇಹದ ನುಡಿಯಿಲ್ಲ. ‘ನಾನೆ ನಿನ್ನ ತಾಯಿ’ ಎಂದು ವಾತ್ಸಲ್ಯದ ದೃಷ್ಟಿಯಲ್ಲಿ ಹೇಳಲಿಲ್ಲ. ಯಾವುದೋ ಸೆಳತಕ್ಕೆ ಒಳಗಾಗಿ ಬಂದಿದ್ದಳು ಅವನನ್ನು ಹುಡುಕಿಕೊಂಡು. ಹೇಗೆ ಅವಳು ಅವನೆದುರಿಗೆ ಬಂದಿದ್ದಳೋ ಹಾಗೆಯೇ ನಿರ್ಗಮಿಸಿದಳು ಅಪರಿಚಿತಳಂತೆ.

ಗಣೇಶ ರೋಷ, ತಿರಸ್ಕಾರ, ಜಿಗುಪ್ಸೆಯಿಂದ ಅವುಡುಗಚ್ಚಿದ. ಅವನ ಮನದಲ್ಲಿ ಒಂದು ವಿಧದ ತಳಮಳ, ತುಮುಲ, ಕ್ಷೋಭೆ. ಶಂಕರ-ಸುನಂದೆಯರ ನೆನಪು. ತಾಯಿಯಿಲ್ಲದಿದ್ದರೂ ತಂದೆಯ ಪ್ರೇಮವಿದೆ ಅವರ ಪಾಲಿಗೆ. ತಂದೆ ಇಲ್ಲದಿದ್ದರೂ ಸುಮನ, ಯಮುನೆಯರಿಗೆ ತಾಯಿಯ ವಾತ್ಸಲ್ಯದ ಮಡಿಲು ಇದೆ. ಆದರೆ ಅವನಿಗೆ ಅವೆರಡೂ ಇದ್ದರೂ ಇಲ್ಲದಂತೆ! ಅಪ್ಪ ಎನ್ನುವ ವ್ಯಕ್ತಿಯನ್ನು ಹುಡುಕಿಕೊಂಡು ಹೋದರೂ ಅವನು ಈಗ ಗುರುತಿಸಲಾರ. ಗುರುತಿಸಿದರೂ ಜೊತೆಯಲ್ಲಿ ಇಟ್ಟುಕೊಳ್ಳಲಾರ. ನಿಜ, ಜವಾಬ್ದಾರಿಯಿಲ್ಲದ ಹುಟ್ಟು ಅವನದು. ಅದರ ಹೊಣೆ ಈಗ ಯಾರಿಗೂ ಬೇಡ!

ತಾನೀಗ ಎಲ್ಲಿಗೆ ಹೋಗಲಿ? ಅವನಲ್ಲೇ ಎದ್ದಿತು ಪ್ರಶ್ನೆ. ಧಾರವಾಡದ ಅಪರಿಚಿತ ಸ್ಥಳದಲ್ಲಿ ಉಳಿದುಕೊಳ್ಳಲೇ ಅಲೆಮಾರಿಯಂತೆ? ಬೆಳ್ಳಿಪಾಡಿಗೆ ಮತ್ತೆ ಹಿಂದಿರುಗಿ ಹೋಗಲೇ? ಅಥವಾ ತೋನ್ಸೆಯ ಮಡಿಲಲ್ಲಿ ತಲೆಯಿಡಲೇ? ಯಾವ ಗುರಿ ತನಗೆ....? ಅವನ ಯೋಚನೆಗಳೊಂದಿಗೇ ಕಿತ್ತೂರು ಚೆನ್ನಮ್ಮನ ಪಾರ್ಕಿನ ದೀಪಗಳು ಒಂದೊಂದಾಗಿ ಆರುತ್ತ ಬಂದವು. ಅವನೂ ಕುಳಿತಲ್ಲಿಂದ ಎದ್ದು ಬಟ್ಟೆ, ರೂಪಾಯಿಗಳನ್ನು ತೆಗೆದುಕೊಂಡು ಪಾರ್ಕಿನಿಂದ ನಿಧಾನವಾಗಿ ಹೊರಗೆ ಸಾಗಿದ....ಭಾವನೆಗಳು ಬುಡಮೇಲಾದರೂ ಹೊಸದನ್ನು ಸ್ವೀಕರಿಸಿ ಕೊಳ್ಳಲಾರದೆ ಇನ್ನಾವುದೋ ಆಂದೋಲನಕ್ಕೆ ಒಳಗಾಯಿತು ಅವನ ಮನಸ್ಸು. ಬೆಳ್ಳಿಪಾಡಿಯ ಪುಟ್ಟ ಮನೆಯಲ್ಲಿ ಮನೆಯಾಕೆ ತುಚ್ಛವಾಗಿ ನೋಡಿದರೂ ಅವನನ್ನು ಸ್ವಲ್ಪವಾದರೂ ಪ್ರೀತಿ, ಕರುಣೆಯಿಂದ ನೋಡುವ ಒಂದು ಜೀವ ಅಲ್ಲಿದೆ. ಮುಸುಕಿದ ಕತ್ತಲೆಯಲ್ಲಿಯೂ ಅದೇ ಅವನಿಗೆ ಬೆಳಕು!

## 23

ಕೃಷ್ಣಯ್ಯನಿಗೆ ತನ್ನ ನೆರೆಯಲ್ಲಿರುವ ಗೋಪಣ್ಣನ ಮೇಲೆ ಯಾವ ವೈಯಕ್ತಿಕ ದ್ವೇಷಗಳೂ ಇರಲಿಲ್ಲ. ಸುಮಿತ್ರಳ ಕೈಹಿಡಿದುದಿನಿಂದ ತಾವಾಗಿಯೇ ದೂರ ಸರಿದಿದ್ದರು ಅವಳ ತವರುಮನೆಯವರು. ಬೇಲಿಯಾಚೆ ಅವನು ಮುಗುಳ್ನಗೆ ನಕ್ಕರೂ ಅವನ ಮನೆಯ ಒಬ್ಬರೂ ಪ್ರತಿನಗೆ ನಕ್ಕವರಲ್ಲ. ಅವನಾಗಿಯೇ ಬಯಸಿರಲಿಲ್ಲ ನೀರಿನ ಜಗಳವನ್ನು ಹೆಚ್ಚು ಮುಂದುವರಿಯಬಾರದೆಂದು

ತಾನಾಗಿಯೇ ಕೆರೆಯ ಯೋಜನೆ ಹಾಕಿಕೊಂಡು ಜಗಳಕ್ಕೆ ಎಡೆಯಿದ್ದ ಪೂರ್ಣ ವಿರಾಮ. ಸುಮನ-ಯಮುನ ಅಲ್ಲಿಗೆ ಹೋಗಲೇಬೇಕೆಂದು ಅವನದೇ ಒತ್ತಾಯ. ಅಜ್ಜನ ಪ್ರೀತಿ ಮೊಮ್ಮಕ್ಕಳಿಗೆ ಬೇಕು, ಅವರ ಆಶೀರ್ವಾದವೂ ಸಿಗಬೇಕು, ನೆರೆಯಲ್ಲಿದ್ದು ಗೌರವದಿಂದ ಸೌಹಾರ್ದದಿಂದ ಬಾಳಬೇಕು— ಎನ್ನುವವನು. ಅವನ ಒಳ್ಳೆಯತನ ಅನೇಕ ಬಾರಿ ಸುಮಿತ್ರಳನ್ನು ದಿಙ್ಮೂಢ ಳನ್ನಾಗಿ ಮಾಡಿಬಿಟ್ಟಿದೆ. ಮೊದಲೇನೋ ಅವನ ವಿಷಯದಲ್ಲಿ ಅವಳು ಬಹಳ ಹೆದರಿಕೊಂಡಿದ್ದರೂ ಈಗೀಗ ಒಂದು ವಿಧದ ಗೌರವಭಾವನೆ ಉಂಟಾಗುತ್ತಿದೆ ಅವಳಲ್ಲಿ.

ಇದಕ್ಕೆ ಪುಷ್ಟಿಯನ್ನೀಯುವಂತೆ ನಡೆಯಿತು ಒಂದು ಘಟನೆ. ಮೊದಲ ಮಳೆ ಬಂದು ಗದ್ದೆಯನ್ನು ಪ್ರಥಮ ಬಾರಿಗೆ ಹೂಟಿ ಮಾಡುವ ದಿನ ಅನಿರೀಕ್ಷಿತ ವಾಗಿ ಗೋಪಣ್ಣ ಕಾಲು ಜಾರಿ ಬಿದ್ದ ಮನೆ ಅಂಗಳದಲ್ಲಿ. ಏನೋ ಕಾಲು ಜಾರಿದೆ ಎಂದುಕೊಂಡು ಮೇಲೇಳಲು ಪ್ರಯತ್ನಿಸಿದರೆ ಸೊಂಟ ಎತ್ತುವದ ಕ್ಕಾಗದೆ ಮಣ್ಣಿಗೇ ಕುಸಿದ. ಅವನ ಮಕ್ಕಳಿಬ್ಬರೂ ಓಡಿಬಂದರು ಹತ್ತಿರ. ತಂದೆಯನ್ನು ಎತ್ತಲು ನೋಡಿದರು, ಆಗಲೇ ಇಲ್ಲ. ವೃದ್ಧ ತಂದೆ ಕಣ್ಣುಗಳ ಪೊರೆಯಿಂದ ದೃಷ್ಟಿ ಕ್ಷೀಣವಾಗಿದ್ದರೂ ಕೋಲೂರಿಕೊಂಡು ಧಾವಿಸಿದ ಅವನು ಬಿದ್ದ ಸ್ಥಳಕ್ಕೆ. ಗೋಪಣ್ಣ ಏಳಲಾರದೆ ಒದ್ದಾಡುವದನ್ನು ಕಂಡು ಹೌಹಾರಿ ಹೋದಳು ಯಶೋದೆ. ಬೇಡವೆಂದರೂ ಅನಿವಾರ್ಯವಾಗಿ ಹೇಳಿಕಳುಹಿಸಲೇ ಬೇಕಾಯಿತು ನೆರೆಯಲ್ಲಿರುವ ಕೃಷ್ಣಯ್ಯನಿಗೆ. ಆಪತ್ಕಾಲದಲ್ಲಿ ಯಾವ ಅಳುಕು, ಹಗೆತನವೂ ಇಲ್ಲದೆ ಓಡಿಬಂದ ಕೃಷ್ಣಯ್ಯ.

ಸೊಂಟವನ್ನು ಎತ್ತಲಾರದೆ ಒದ್ದಾಡುತ್ತಿದ್ದ ಅವನನ್ನು ಎತ್ತಿತಂದು ಮಲಗಿಸಿದ ಅವರ ಮನೆಯಲ್ಲಿ. ಗೋಪಣ್ಣನ ಕಣ್ಣು ತುಂಬ ನೀರು. "ಸೊಂಟದ ಎಲುಬು ಮುರಿದಿರಬೇಕು. "ನಾನು ಸತ್ತೋಗ್ತೀನೇನೋ, ಕೃಷ್ಣಾ!"

"ಕೆಟ್ಟ ಮಾತನ್ನಾಡಬೇಡ. ಈಗಲೇ ಆಸ್ಪತ್ರೆಗೆ ಕರೆದೊಯ್ಯುತ್ತೇನೆ" ಎಂದ ಕೃಷ್ಣಯ್ಯ ತತ್‌ಕ್ಷಣ ಕರೆದೊಯ್ದ ಉಪ್ಪಿನಂಗಡಿ ಸರಕಾರಿ ಆಸ್ಪತ್ರೆಗೆ.

ಗೋಪಣ್ಣನನ್ನು ಪರೀಕ್ಷಿಸಿದ ಡಾಕ್ಟರು, "ಸೊಂಟದ ಎಲುಬು ಮುರಿದಿದೆ. ಪ್ಲಾಸ್ಟರ್ ಹಾಕ್ಬೇಕು. ಇನ್ನು ಇಪ್ಪತ್ತೊಂದು ದಿನ ಆಸ್ಪತ್ರೆಯಲ್ಲೇ ಇರಬೇಕು" ಎಂದರು. ಔಷಧಿ, ಆರೈಕೆ ಎಲ್ಲ ಕೃಷ್ಣಯ್ಯನ ಪಾಲಿಗೆ.

ಗದ್ದೆ ಹೂಟಿಯ ಕೆಲಸ ಉಳಿದುಹೋಯಿತು ಹಾಗೇ. ಕೃಷ್ಣಯ್ಯ ತನ್ನ ಗದ್ದೆಯನ್ನು ಉತ್ತು ಬಿತ್ತಿದ. ಅನಂತರ ಸೀದಾ ಬಂದ ಗೋಪಣ್ಣನ ಮನೆಗೆ.

"ಅತ್ತಿಗೇ...." ಮೊದಲ ಬಾರಿ ಗೋಪಣ್ಣನ ಹೆಂಡತಿಯನ್ನು ಕರೆದ. "ನೀವೇನೂ ಚಿಂತಿಸಬೇಡಿ. ಹೂಟಿ ಎತ್ತುಗಳು ಎಲ್ಲಿವೆ? ನಿಮ್ಮ ಕೆಲಸದ ಹುಡುಗನನ್ನು ನನ್ನ ಜೊತೆ ಕಳುಹಿಸಿ, ನಿಮ್ಮ ಗದ್ದೆ ಉತ್ತು ಬಿತ್ತಿಬಿಡ್ತೇನೆ."

ಯಶೋದೆ ಮತ್ತು ಅವಳ ತಾಯಿ ಮೂಕವಿಸ್ಮಿತರಾದರು. ವೃದ್ಧ ತಂದೆಗೆ ಅಂಗಳಕ್ಕಿಳಿಯಲೂ ಸಾಧ್ಯವಿಲ್ಲ. ಹಿರಿಯ ಮಕ್ಕಳಿಬ್ಬರಿಗೂ ಹೂಟಿ ಮಾಡಲು, ಕೆಲಸ ಮಾಡಿಸಲೂ ತ್ರಾಣವಿಲ್ಲ. 'ಇನ್ನು ಹೇಗಪ್ಪ ಬೇಸಾಯದ ಕೆಲಸ ಮಾಡುವದು?' ಎಂದುಕೊಳ್ಳುವಾಗಲೇ ಕೃಷ್ಣಯ್ಯನ ಸಹಾಯದ ಸೂಕ್ಷ್ಮತನ ಚಕಿತಗೊಳಿಸಿತು ಅವರನ್ನು.

"ನಿನಗೆ ಯಾಕಪ್ಪ ರಗಳೆ?" ಎಂದು ಯಶೋದೆಯ ತಾಯಿ ಹೇಳುತ್ತಿದ್ದರೂ ಅವನು ಹೂಟಿಯ ಎತ್ತುಗಳನ್ನು ತಾನೇ ಹೊಡೆದುಕೊಂಡು ಹೋಗಿ ಗದ್ದೆಯನ್ನು ಉತ್ತು ಬೀಜ ಬಿತ್ತಿದ. ಮಳೆ ಸರಿಯಾಗಿ ಪ್ರಾರಂಭವಾದಮೇಲೆ ಸಮಯಕ್ಕೆ ಸರಿಯಾಗಿ ನೇಜಿಯನ್ನೂ ನೆಡಿಸುತ್ತೇನೆ ಎಂದು ಆಶ್ವಾಸನೆ ನೀಡಿದ ಮನೆಯವರಿಗೆ. ಈವರೆಗೂ ಅಪರಿಚಿತರಾಗಿಯೇ ಉಳಿದಿದ್ದ ಸುಮಿತ್ರಳ ತವರುಮನೆಯವರನ್ನು ಅವನಾಗಿಯೇ ಹತ್ತಿರ ಮಾಡಿಕೊಳ್ಳಲು ಯತ್ನಿಸಿರಲಿಲ್ಲ. ಈಗ ತಾನಾಗಿಯೇ ಒದಗಿಬಂದಿತ್ತು ಸಂದರ್ಭ.

ತನ್ನ ಮತ್ತು ಗೋಪಣ್ಣನ ಮನೆಯ ಹೊರಕೆಲಸ, ಆಸ್ಪತ್ರೆಯ ಅಲೆದಾಟದ ಮಧ್ಯೆ ಕೃಷ್ಣಯ್ಯನಿಗೆ ಗಣೇಶ ಮನೆಯಲ್ಲಿ ಇಲ್ಲದ ಕೊರತೆ ಬಾಧಿಸಿತು ಬಹಳವಾಗಿ. ತೋನ್ಸೆಯಿಂದ ಹೊರಟುಹೋದ ಗಣೇಶನ ಸುದ್ದಿ ಇರಲಿಲ್ಲ. ಹುಡುಗ ಹೇಗಿದ್ದಾನೆ, ಎಲ್ಲಿದ್ದಾನೆ ಎನ್ನುವ ಚಿಂತೆ ಅವನನ್ನು ಅಧಿಕವಾಗಿ ಕಾಡದೇ ಹೋದರೂ ತನ್ನೊಂದಿಗೆ ಇಷ್ಟು ವರ್ಷಗಳಿಂದಲೂ ಮಗನಂತೆ ಇದ್ದ ಅವನ ಮೇಲೆ ಅವನಿಗರಿಯದಂತೆ ಆವರಿಸಿಹೋಗಿದೆ ಒಂದು ಬಗೆಯ ಮೋಹ, ಪ್ರೀತಿ! ಅದಕ್ಕಿಂತ ಮಿಗಿಲಾಗಿ ಹೇಳಿದ ಕೆಲಸಗಳನ್ನು ನಗುನಗುತ್ತ ಮಾಡುವ ಗಣೇಶ ಈಗ ಸಹಾಯಕ್ಕೆ ಜೊತೆಯಲ್ಲಿ ಇದ್ದಿದ್ದರೆ....?

ಕೃಷ್ಣಯ್ಯನ ಮನದ ಆಲೋಚನೆಗಳಿಗೆ ಸರಿಯಾಗಿಯೇ ಒಂದು ಸಾಯಂಕಾಲ ಚಿಕ್ಕಪಾಡಿಯನ್ನು ತಲಪಿದ ಗಣೇಶ. ಘಾಟನಾಡದಿಂದ

ಹೊರಟವನು ಮೊದಲು ಬಂದದ್ದು ತೋಟ್ಟಿಗೆ. ಅಲ್ಲಿ ನಾಗಪ್ಪಯ್ಯ ಮಾತನಾಡಿಸಲಿಲ್ಲ, ಅನ್ನ ಹಾಕಲಿಲ್ಲ. ಒದೆ ತಿಂದ ನಾಯಿಯಂತೆ ಮತ್ತೆ ಹಿಂದಿರುಗಿದ್ದಾನೆ ಕೃಷ್ಣಯ್ಯನಲ್ಲಿಗೆ.

ಅವನ ನಾಯಿ ವಿಧೇಯ ಸೇವಕನಂತೆ ಗಣೇಶ ಇಲ್ಲದೇ ಇದ್ದರೂ ಮನೆಯೊಡತಿ ಅನ್ನ ಹಾಕಲಿ ಹಾಕದೇ ಇರಲಿ, ಮನೆ ಅಂಗಳದಲ್ಲೇ ಬಿದ್ದುಕೊಳ್ಳುತ್ತ ಇತ್ತು. ಅದರ ಕಣ್ಣುಗಳಲ್ಲಿ ಗಣೇಶನದೇ ಪ್ರತೀಕ್ಷೆ. ಯಾವಾಗ ಅವನು ಮನೆಗೆ ಬಂದು ತಲುಪಿದನೋ ಆಗ ಅದಕ್ಕಾದ ಸಂತೋಷವನ್ನು ಬಾಲ ಅಲ್ಲಾಡಿಸಿ, ಕಾಲು ನೆಕ್ಕಿ ವ್ಯಕ್ತಪಡಿಸಿತು. ಗಣೇಶ ಅದರ ಕಿವಿಗಳನ್ನು ಮುದ್ದಿಸಿ ಸವರಿದ ಮೈಯನ್ನು.

ಕೃಷ್ಣಯ್ಯನನ್ನು ನೋಡಿದಾಕ್ಷಣ ಅದೇಕೋ ಅವನ ಪಿತ್ತ ನೆತ್ತಿಗೆ ಏರಿತು. ಮುಖದ ಮೇಲೆ ನಗುವಿನ ಬದಲು ಒಂದು ವಿಧದ ಕ್ರೌರ್ಯ! ಕೃಷ್ಣಯ್ಯ ಅವನು ಹೋದ ವಿಚಾರ, ಧಾರವಾಡದ ಸುದ್ದಿಗಳನ್ನು ಕೇಳಲಿಚ್ಛಿಸಿದಾಗ ಉತ್ತರಿಸಿದ ಒರಟಾಗಿ. ತಾನು ಯಾರು? ಎಂದು ಈ ತನಕ ತಿಳಿಸದೆ ಮೋಸ ಮಾಡಿದ ಅಪ್ಪ!

ಮನೆಯಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಗಳೇನೂ ಆಗಿರಲಿಲ್ಲ. ಆದರೆ ಬದಲಾವಣೆಯಾದದ್ದು ಗಣೇಶನಲ್ಲಿ. ಮನೆಯ ಕೆಲಸಕಾರ್ಯಗಳನ್ನು ಮೊದಲಿನಂತೆ ಮಾಡಲು ಪ್ರಾರಂಭಿಸಿದರೂ ಒಂದು ವಿಧದ ಮಂಕು ಆವರಿಸಿತ್ತು ಅವನನ್ನು. ಸುಮಿತ್ರ ಮಾತನಾಡಿಸಿದರೆ, ಕರೆದರೆ ಅನೇಕ ವೇಳೆ ಕೇಳಿಸುವುದೇ ಇಲ್ಲ. ಕೊಟ್ಟಿಗೆ ಕೆಲಸದಲ್ಲಿ ನಿರಾಸಕ್ತಿ. ಸರಿಯಾಗಿ ಹಾಲು ಕರೆಯುವುದಕ್ಕೂ ಉದಾಸೀನ. ಕೆಲವೊಮ್ಮೆ ಕರೆದ ಹಾಲು ಅರ್ಧ ಚೊಂಬಿಗೆ, ಮತ್ತೆ ಅರ್ಧ ನೆಲಕ್ಕೆ. ಮೇಯಲು ಹೋದ ದನಗಳನ್ನು ಕಟ್ಟುವುದಕ್ಕೂ ನೆನಪಿರುವುದಿಲ್ಲ. ಒಂದು ದಿನ ಎಮ್ಮೆ, ದನವನ್ನು ಸರಿಯಾಗಿ ಕಟ್ಟದೇ ಒಂದಕ್ಕೊಂದು ಹಾರಿ ಎಗರಿ ಕೋಡುಗಳಿಂದ ಹಾಯ್ದುಕೊಳ್ಳುವಾಗ ಅವನ್ನು ಬಿಡಿಸುವುದೇ ಪ್ರಯಾಸದ ಕೆಲಸವಾಯಿತು ಕೃಷ್ಣಯ್ಯನಿಗೆ. ಮನೆಯಲ್ಲಿ ಗಂಟುಮುಖ. ಆದರೆ ನರಸಿಂಹಭಟ್ಟರ ಮನೆ ಅಡಿಗೆಕೆಲಸಗಳಿಗೆ ಹೋದನೆಂದರೆ ನಗುಮುಖ.

ನರಸಿಂಹಭಟ್ಟರಿಗೆ ಗಣೇಶನ ವಿಷಯವೆಲ್ಲ ತಿಳಿದದ್ದು ಅವನು ಜಿಕ್ಕಿಪಾಡಿಗೆ ಹಿಂದಿರುಗಿದಮೇಲೆ. ಅವರಂತೆ ಇನ್ನು ಅನೇಕರಿಗೆ ತಿಳಿದುಹೋಯಿತು

ಅವನು ಯಾರು ಎಂದು. ಕೆಲವರು ಮುಸಿಮುಸಿ ನಕ್ಕರು ತಮ್ಮಲ್ಲೇ. ಕೆಲವರು ಮೆಚ್ಚಿದರು ಕೃಷ್ಣಯ್ಯನ ವಿಶಾಲಗುಣಕ್ಕೆ. ಇನ್ನು ಒಂದಿಬ್ಬರು ಗಣೇಶನನ್ನೇ ನೇರವಾಗಿ ಕೇಳಲಾರಂಭಿಸಿದರು, 'ನೀನು ಯಾರ ಮಗ?' ಎಂದು. ಅವನಿಗೆ ಉತ್ತರಿಸುವುದಕ್ಕೂ ಕಷ್ಟ. ಉತ್ತರಿಸದೆ ಇರಲಾರ. ವಿಚಿತ್ರ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಜನರ ಬದಲಾದ ದೃಷ್ಟಿಗೆ ಹೊಂದಿಕೊಳ್ಳಲೇಬೇಕಿತ್ತು ಅವನು. ಅವರ ಕುತ್ಸಿತ ನೋಟಕ್ಕೆ ಬಲಿಯಾದ. ಮಾತಿಗೆ ವಸ್ತುವಾದ. ಜನರು ತನ್ನನ್ನು ಅವಹೇಳನ ಮಾಡುತ್ತಿದ್ದಾರೆ ಎನ್ನುವ ಭ್ರಮೆ ಆವರಿಸಿತು ಅವನನ್ನು. ಆ ಭ್ರಮೆಯಿಂದಾಗಿ ತನ್ನೊಳಗೇ ಅಂತರ್ಮುಖಿಯಾದ. ಸುಮಿತ್ರ ತನ್ನನ್ನು ಯಾಕೆ ದೂರವಿರಿಸಿದ್ದಾಳೆ? ಅಜ್ಜನ ಮನೆಯವರೆಂದು ನಂಬಿ ಕೊಂಡಿದ್ದ ಜನರೂ ತನ್ನನ್ನು ಯಾಕೆ ಇಟ್ಟುಕೊಳ್ಳಲಿಲ್ಲ? ಪರದೇಶಿಯಂತೆ ತನ್ನನ್ನು ಎಲ್ಲರೂ ಯಾಕೆ ನೋಡುತ್ತಾರೆ? ಎಂದು ಯೋಚಿಸುತ್ತಿದ್ದರೆ ಅವನ ಬಾಲಮನಸ್ಸು ತಿರುಗಣೆಯ ಮಡುವಾಗಿ ಅವನನ್ನು ಬೆಚ್ಚಿಬೀಳುವಂತೆ ಮಾಡುತ್ತದೆ....

## 24

ಗೋಪಣ್ಣನ ಸೊಂಟದ ಪ್ಲ್ಯಾಸ್ಟರ್ ಹಾಕಿದ್ದು ಸರಿಯಾಗಲಿಲ್ಲವೋ ಅಥವಾ ಅವನ ದುರದೃಷ್ಟವೋ ಇನ್ನೊಮ್ಮೆ ಪ್ಲ್ಯಾಸ್ಟರ್ ಹಾಕಿ ಮತ್ತೆ ಇಪ್ಪತ್ತೆರಡು ದಿನಗಳೂ ಆಚೆ ಈಚೆ ಮಗ್ಗಲು ಹೊರಳಿಸದಂತೆ ಮಲಗಿದಲ್ಲೇ ಇರಬೇಕೆಂದು ಅಪ್ಪಣೆ ಮಾಡಿದರು ಉಪ್ಪಿನಂಗಡಿ ಡಾಕ್ಟರರು. ಇಪ್ಪತ್ತೆರಡು ದಿನಗಳೂ ಆಸ್ಪತ್ರೆಯಲ್ಲಿದ್ದ ಗೋಪಣ್ಣ ಇನ್ನೂ ತನಗೆ ಮನೆಗೆ ಹೋಗಲಾಗಲಿಲ್ಲವೆಂದು ತಲೆಬಿಸಿ ಮಾಡಿಕೊಂಡ. ಸರಕಾರಿ ಆಸ್ಪತ್ರೆಗಳ ಹಣೆಬರಹವೇ ಹೀಗೆ ಎಂದು ಹಳಿದ ಎಲ್ಲ ಡಾಕ್ಟರುಗಳನ್ನು. ಕೃಷ್ಣಯ್ಯ ಮಗುವಿನಂತೆ ಸಮಾಧಾನಪಡಿಸಿದ ಅವನನ್ನು,

"ಕಷ್ಟ ಅನ್ನುವದು ಎಲ್ಲರಿಗೂ ಬರುತ್ತವೆ. ನಿನ್ನ ಗದ್ದೆಬೇಸಾಯದ ಬಗ್ಗೆ ಸುಮ್ಮನೆ ಚಿಂತಿಸಬೇಡ. ನಾನಿದ್ದೇನೆ"

ಮಳೆಗಾಲ ಪ್ರಾರಂಭವಾದಮೇಲೆ ಅವನ ಮತ್ತು ಗೋಪಣ್ಣನ ಗದ್ದೆ

ಕೆಲಸಗಳು ಜೊತೆಯಲ್ಲಿಯೇ ಮುಂದುವರಿಯಿತು. ಕೃಷ್ಣಯ್ಯ ನಿಧಾನವಾಗಿ ಹತ್ತಿರವಾಗಲಾರಂಭಿಸಿದ ಗೋಪಣ್ಣನ ಮನೆಯವರಿಗೆ. ಈಗ ಅವನು ಅವರಲ್ಲಿಗೆ ಬಂದಾಗಲೆಲ್ಲ ಯಶೋದೆಯಿಂದಲೇ ಆದರದ ಉಪಚಾರ. ತಂದೆ ಮಾತನಾಡಿಸುತ್ತಾನೆ ತನ್ನ ಮಗನೆಂಬ ಕಳಕಳಿಯಲ್ಲಿ! ಈಗೀಗ ಅವನಿಗೂ ಬಹಳ ನಿಶ್ಚಿಂತೆ.

"ಕಣ್ಣಿನ ಪೊರೆ ಬಂದು ಸರಿಯಾಗಿ ಕಾಣಿಸುವುದೇ ಇಲ್ಲ, ಕೃಷ್ಣಾ. ದೃಷ್ಟಿ ಕಳಕೊಂಡ ಜೀವ ಹೆಚ್ಚು ಸಮಯ ಇರಬಾರದು ನೋಡು" ಎಂದ ಒಂದು ದಿನ ಹೀಗೆ ಕೃಷ್ಣಯ್ಯನೊಂದಿಗೆ ಮಾತನಾಡುತ್ತ.

ಕೃಷ್ಣಯ್ಯನಿಗೆ ಅವನ ಕಣ್ಣುಗಳನ್ನು ನೋಡುತ್ತಿದ್ದಂತೆ ಮಿಂಚಿನಂತೆ ಹೊಳೆಯಿತು. ಆಪರೇಶನ್ ಮಾಡಿಸಿ ಪೊರೆಯನ್ನು ತೆಗೆದುಹಾಕಿದರೆ ದೃಷ್ಟಿ ಹಿಂದಿರುಗಿ ಬರುವ ಸಾಧ್ಯತೆ ಇಲ್ಲದೇ ಇಲ್ಲ. ಅವನು ತತ್‌ಕ್ಷಣ ಮುದುಕನನ್ನು ಆಸ್ಪತ್ರೆಗೆ ಕರೆದೊಯ್ದು ಡಾಕ್ಟರರನ್ನು ಭೇಟಿಯಾಗಿ ಆಪರೇಶನ್‌ಗೆ ಬೇಕಾದ ಏರ್ಪಾಟನ್ನೂ ಮಾಡಿಸಿಬಿಟ್ಟ. ಪೊರೆ ತೆಗೆಯಿಸಿದರೆ ಕಣ್ಣುಗಳು ಕಾಣಬಹುದೆಂಬ ಸಂತೋಷದಲ್ಲಿಯೇ ವೃದ್ಧನಲ್ಲಿ ಉಕ್ಕಿ ಹರಿದಿತ್ತು ನವತಾರುಣ್ಯ.

ಒಂದು ಕಡೆ ಗೋಪಣ್ಣ. ಇನ್ನೊಂದು ಕಡೆ ಅವನ ಮಾವ. ಅವರಿಬ್ಬರ ಆರೈಕೆಯ ಹೊಣೆ ಕೃಷ್ಣಯ್ಯನ ಮೇಲೆ. ಗಣೇಶ ತನಗೆ ಬಲಗೈಯಾಗಿ ಇರಬಲ್ಲನೆಂದು ನಂಬಿಕೊಂಡಿದ್ದ ಕೃಷ್ಣಯ್ಯ. ಆದರೆ ಗಣೇಶ ಅವನಿಗೆ ಯಾವ ಕೆಲಸಗಳ ಸಹಾಯಗಳಿಗೂ ಸಿಗಲಿಲ್ಲ. "ಆಸ್ಪತ್ರೆಗೆ ಊಟ ತಗೊಂಡು ಹೋಗು. ಗೋಪಣ್ಣನನ್ನು ಮಾತನಾಡಿಸಿ ಬಾ" ಎಂದು ಹೇಳಿದರೂ ಕೇಳಲಾರ.

"ಅವರ ಮನೆಗೆ ರಾತ್ರಿ ಮಲಗಲು ಹೋಗು. ನಾಲ್ಕು ಜನರಿದ್ದಾರೆ, ಅಲ್ಲಿಯ ಹೆಂಗಸರಿಗೂ ಧೈರ್ಯ" ಎಂದಾಗ ಗಣೇಶನ ಕಣ್ಣುಗಳು ಗರಗರನೆ ತಿರುಗಿದವು.

"ಇಲ್ಲಿ ನನ್ನನ್ನು ಇಟ್ಟುಕೊಳ್ಳಬಾರದೆಂದು ಅಲ್ಲಿಗೆ ಕಳುಹಿಸುವ ಉಪಾಯ. ನನಗೆ ಬೇಡ ಇನ್ನೊಬ್ಬರ ಮನೆ ವಾಸ!"

ಕೃಷ್ಣಯ್ಯನಿಗೆ ಅವನ ಮೊಂಡುಹಟ ನೋಡಿ ನಾಲ್ಕು ಬಿಗಿಯಬೇಕು ಎನ್ನುವಂತಹ ಸಿಟ್ಟು. ಆದರೆ ಮಾತನಾಡಲಿಲ್ಲ. ಅವನು ಬುದ್ಧಿ ಹೇಳಿದರೂ ಕೇಳುವ ತಾಳ್ಮೆಯಿರಲಿಲ್ಲ ಗಣೇಶನಲ್ಲಿ. ಒಂದುವಿಧದ ಮೊಂಡುತನ, ಹಟ ದಿನೇ ದಿನೇ ವೃದ್ಧಿಯಾಗುತ್ತ ಇದೆ. ಕೃಷ್ಣಯ್ಯನ ಮಾತು ಕಾಲಕಸ. ಸುಮಿತ್ರಳನ್ನು

ಗಣನೆಗೇ ತಂದುಕೊಳ್ಳುವವನಲ್ಲ. ಸುಮನ, ಯಮುನಳನ್ನು ಕಂಡರೆ ಸುಮ್ಮನೆ ಜಗಳವಾಡುವ ಕೆಚ್ಚು. ಅವರ ನೆರಳು ಕಂಡರೂ ಸಿಡುಕು.

ಮಧ್ಯಾಹ್ನದ ಊಟದ ಸಮಯದಲ್ಲಿ ಮಾತ್ರ ಮನೆಯಲ್ಲಿ. ಉಳಿದ ಹೊತ್ತು ಊರೆಲ್ಲೆಲ್ಲ ಅಲೆದಾಟ. ಪುಂಡುಹುಡುಗರೊಡನೆ ಸ್ನೇಹ. ಮಳೆಗಾಳಿಯಲ್ಲಿ ಕಾಡು, ಬೆಟ್ಟಗಳಲ್ಲಿ ಸುತ್ತಾಟ. ಮೀಸೆ ಅಣ್ಣನ ಅಂಗಡಿಯಲ್ಲಿ ಎಷ್ಟು ತಿಂದರೂ ಸಾಲದು. ಸಾಲದ ಬಾಲ ಬೆಳೆಯುವದು ಅವನಿಗೆ ಲೆಕ್ಕವೇ ಇಲ್ಲ. ಮೀಸೆ ಅಣ್ಣ ಮೊದಮೊದಲು ಅನುಕಂಪದ ಉಪಚಾರ ಮಾಡಿದರೂ ಕೊನೆಗೆ ನಿಲ್ಲಿಸಿಬಿಟ್ಟ ಕೊಡುವ ಸಾಲವನ್ನು. ಅಂಗಡಿ ಬಾಗಿಲಿಗೆ ಅವನು ಬಂದಾಕ್ಷಣ "ಹೋಗೋ ಹೊರಗೆ" ಎನ್ನಲಾರಂಭಿಸಿದ. ಅವನು ಬಂದು ಗಿರಾಕಿಗಳೊಡನೆ ಕುಳಿತರೂ ನೀರಿನ ಗ್ಲಾಸನ್ನು ಅವನೆದುರು ಇಡುವುದಿಲ್ಲ. "ಮೊದಲು ನಿನ್ನ ಲೆಕ್ಕ ತೀರಿಸು. ಆಮೇಲೆ ಉಳಿದ ಲೆಕ್ಕಾಚಾರ" ಎನ್ನುತ್ತಾನೆ ನೇರವಾಗಿ. ಮೈದುಕುಂಞಾಯ ಹಣ್ಣಿನಂಗಡಿಯಲ್ಲಿಯೂ ಇದೇ ಹಾಡು. ಅಲ್ಲೂ ಸಾಲದ ಮೊಳಕೆಯಿದ್ದಿದೆ. ಗಣೇಶ ಹತ್ತಿರ ಸುಳಿಯುವದಕ್ಕೂ ಬಿಡುವದಿಲ್ಲ.

ಗಣೇಶನಿಗೆ ಊರಲ್ಲಿ ಯಾರ ಹೆದರಿಕೆಯೂ ಇಲ್ಲ. ಆಗಾಗ ಹೋಗುತ್ತಾನೆ ಶಾಲೆಯ ಹತ್ತಿರ. ಅಲ್ಲಿರುವ ಹುಡುಗ-ಹುಡುಗಿಯರನ್ನು ನೋಡಿದಾಗ ಏನೇನೋ ಮನಸ್ಸಿನಲ್ಲಿ ಕಲ್ಪನೆಗಳು. ಕಲಿಯುವ ಆಸೆ ಅವನಿಗೂ ಎಷ್ಟೊಂದು ಇತ್ತು....ಆದರೆ ಇಲ್ಲಿ ಎಲ್ಲ ಏರುಪೇರು. ಶಾಲೆಗೆ ಹೋಗಿಬರುವವರೊಡನೆ ಮಾತನಾಡುವ ನೆವದಲ್ಲಿ ಸುಮ್ಮನೆ ಜಗಳವಾಡುತ್ತಾನೆ. ಒಂದು ದಿನ ಅವನಿಗೆ ಏನನ್ನಿಸಿತೋ ಶಾಲೆಯ ಮಾಡಿನ ಮೇಲೆಲ್ಲ ಕಲ್ಲು ತೂರಿ ಓಡಿಬಂದ. ಇನ್ನೊಂದು ದಿನ ಕಾಡುದಾರಿಯಲ್ಲಿ ಮನೆಗೆ ಬರುವ ಹುಡುಗಿಯರನ್ನು ಚೇಷ್ಟೆ ಮಾಡುತ್ತ, ಛೇಡಿಸುತ್ತ ಹಿಂಬಾಲಿಸಿದ ಅವರನ್ನು.

ನಿಜವಾಗಿಯೂ ಕಳವಳಗೊಂಡಳು ಸುಮಿತ್ರ. ಮರ್ಯಾದೆಯಾಗಿರುವದನ್ನು ಬಿಟ್ಟು ಇದೆಂತಹ ದಾಂಧಲೆ ನಡೆಸಿದ್ದಾನೆ. ತಾವು ಕುಣಿಸಿದಂತೆ ಕುಣಿಯುತ್ತಿದ್ದ ಗೊಂಬೆ ಈಗ ಮಂಗನಂತಾಗಿದೆ. ಅದನ್ನು ಎಸೆದುಬಿಡಬಾರದೇ? ಆದರೆ ಕೃಷ್ಣಯ್ಯ ಎಷ್ಟೇ ಕಷ್ಟವಾದರೂ ಗಣೇಶನನ್ನು ದೂರಮಾಡದೆ ಅನೇಕ ಬಾರಿ ಗದರಿಸಿದ. ನಾಲ್ಕಾರು ಬಾರಿ ಬೆತ್ತ ಎತ್ತಿಕೊಂಡು ದಂಡಿಸಿದ. ಎರಡು ದಿನ ಉಪವಾಸವಿಟ್ಟ. ಆದರೆ ಯಾವುದಕ್ಕೂ ಜಗ್ಗಲಿಲ್ಲ ಗಣೇಶ. ಯಾರ

ಅಂಕೆಗೂ ಒಳಪಡಲಿಲ್ಲ. ಯಾರದೋ ಮೇಲಿನ ಸೇಡು ತೀರಿಸುವಂತಿತ್ತು ಅವನ ವರ್ತನೆ. ಸಮಾಜದ ಮೇಲೆಯೇ ತಿರಸ್ಕಾರ, ಜಿಗುಪ್ಸೆ. ರಾತ್ರಿ ಹೊತ್ತು ಸುಮ್ಮನೆ ಆಗಸದತ್ತ ನೋಡುತ್ತ ಕುಳಿತುಬಿಡುತ್ತಾನೆ. ಧಾರವಾಡದ ನೆನಪು ಭಾವಿಸುತ್ತದೆ ಅತಿಯಾಗಿ. ಮೌನವಾಗಿ ತನ್ನೊಳಗೇ ಕರಗಿಹೋಗುತ್ತಾನೆ.

ಈಗೀಗ ಕೃಷ್ಣಯ್ಯ ಸುಮಿತ್ರಳೊಂದಿಗೆ ಎಷ್ಟು ಹೊಂದಿಕೊಂಡುಬಿಟ್ಟಿದ್ದಾನೆಂದರೆ ಸಾಯಂಕಾಲ ಕುಡಿಯುವವನ್ನು ನಿಲ್ಲಿಸಿದ್ದಾನೆ. ಅವರೀರ್ವರಲ್ಲಿ ಮೊದಲು ಆಗೊಮ್ಮೆ ಈಗೊಮ್ಮೆ ಘರ್ಷಣೆಯ ಕಿಡಿಗಳೇಳುತ್ತಿದ್ದವು. ಆದರೆ ಈಗ ಸಮಾಧಾನದ ನುಡಿಗಳು, ಪರಸ್ಪರ ಚಿಂತನೆ. ಸುಮಿತ್ರ ನಿಧಾನವಾಗಿ ಕೃಷ್ಣಯ್ಯನ ಮೇಲೆ ಮನೆಯ ಭಾರ ಹೊರಿಸುತ್ತಿದ್ದಾಳೆ. ಅವನಿಗೆ ಮಾಡುವ ಉಪಚಾರವೂ ಹೆಚ್ಚಿದೆ. ಆದರೆ ಇವರಿಂದ ಇನ್ನಷ್ಟು ಉಳಿದುಹೋಗಿದ್ದಾನೆ ಗಣೇಶ. ತಾನು ಎಲ್ಲರಿಂದಲೂ ಬೇರೆಯಾಗಿ ಹೋಗುತ್ತಿದ್ದೇನೆ....ತನ್ನವರು ಎನ್ನುವವರು ಯಾರೂ ಇಲ್ಲವಲ್ಲ ಎಂದು ಮನದೊಳಗೇ ಹಾಲಾಹಲ.

ಈ ಮಧ್ಯೆ ಅವನ ಸಾಕುನಾಯಿಗೆ ಹಿಡಿಯಿತು ಹುಚ್ಚು. ಅದು ಜೊಲ್ಲು ಸುರಿಸುತ್ತ ಊರಲ್ಲಿರುವ ಕೆಲವು ನಾಯಿಗಳಿಗೂ ಕಚ್ಚಿ ಓಡುತ್ತಿದ್ದಾಗ ಅನೇಕರು ಕಲ್ಲುದೊಣ್ಣೆಗಳನ್ನು ಎತ್ತಿಕೊಂಡು ಹೇಗೋ ಕಷ್ಟಪಟ್ಟು ಹೊಡೆದು ಕೊಂದುಹಾಕಿಬಿಟ್ಟರು. ಗಣೇಶನಿಗೆ ಸುದ್ದಿ ತಿಳಿದಾಗ ಹೊಂಡ ತೋಡಿ ಅದನ್ನು ಹುಗಿದು ಮುಗಿಸಿಯೂ ಆಗಿಹೋಗಿತ್ತು. ಗಣೇಶ ಏನನ್ನೋ ಕಳೆದುಕೊಂಡವನಂತೆ ಎಲ್ಲರ ಮೇಲೆಯೂ ಹಾರಾಡಿದ. ಎರಡು ದಿನ ಮುಟ್ಟಲಿಲ್ಲ ಆಹಾರ.

"ನಿನಗೂ ಏನಾದರೂ ಆಗಿಹೋಯ್ತೇ?" ಅರ್ಥವಾಗದೆ ಕೇಳುವ ಕೃಷ್ಣಯ್ಯ, "ಹುಚ್ಚು ಹಿಡಿದ ನಾಯಿಯನ್ನು ಹಾಗೇ ಬಿಟ್ಟಿದ್ದರೆ ಇನ್ನಷ್ಟು ಅನರ್ಥವಾಗ್ತಿತ್ತಲ್ಲ. ಒಂದೋ ಮೊದಲೇ ಚಿಕಿತ್ಸೆ ಮಾಡಬೇಕಿತ್ತು. ಇಲ್ಲಾ ಅದು ಸಾಯುವದೇ ವಾಸಿ ಅನ್ನು!"

ಸುಮಿತ್ರಳ ತಂದೆಯ ಒಂದು ಕಣ್ಣಿನ ಆಪರೇಶನ್ ಸರಿಯಾಗಿ ಇನ್ನೊಂದು ಕಣ್ಣಿನ ಆಪರೇಶನ್ ಮಾಡಿ ಬ್ಯಾಂಡೇಜ್ ಕಟ್ಟಿಸಿಕೊಂಡು ಹಿಂದಿರುಗಿ ಮನೆಗೆ ಕರೆದುಕೊಂಡು ಬಂದ ಕೃಷ್ಣಯ್ಯ. ಸೊಂಟದ ಎಲುಬು ಕೂಡಿ ಕೊಂಡಿದ್ದರಿಂದ ಗೋಪಣ್ಣನೂ ಪ್ಲ್ಯಾಸ್ಟರ್‌ನಿಂದ ಮುಕ್ತನಾಗಿದ್ದ. ಆದರೂ ಕೆಲವು ದಿನ ಓಡಾಡುವುದು ಕಷ್ಟಕರ. ಕೃಷ್ಣಯ್ಯ ತಾನೇ ಸಮಾಧಾನ ಹೇಳಿದ:

"ನಾಲ್ಕು ದಿನ ಹೆಚ್ಚಾಗಿಯೇ ವಿಶ್ರಾಂತಿ ತೆಗೆದುಕೋ. ಮತ್ತೆ ಯಾವಾಗಲೂ ಸೊಂಟನೋವು ಬರಬಾರದು. ಅತ್ತಿಗೆ, ನಿಮ್ಮ ಗಂಡನನ್ನು ಜಾಗ್ರತೆ ನೋಡಿಕೊಳ್ಳಿ."

ಯಶೋದೆಯ ಕಣ್ಣುಗಳು ತುಂಬಿಬಂದವು. ಹೌದು, ಇವನು ಒಡಹುಟ್ಟಿದ ಸೋದರನಿಗಿಂತಲೂ ಹೆಚ್ಚು. ತನ್ನ ಎರಡನೆಯ ಹೆಂಡತಿಯ ಬಂಧುಗಳೆಂದು ಒಂದಿನಿತೂ ತಾತ್ಸಾರಮನೋಭಾವ ಇಲ್ಲದವ. ಏನಾಶ್ಚರ್ಯ! ಸುಮಿತ್ರ ಎಷ್ಟು ಜನ್ಮದ ತಪಸ್ಸುಮಾಡಿದ್ದಾಳೋ ಇವನನ್ನು ಪಡೆಯಲು!

ಮುಂದೆ ಕೆಲವೇ ದಿನಗಳಲ್ಲಿ ಎರಡೂ ಮನೆಗಳಲ್ಲಿ ಪ್ರಾರಂಭವಾಯಿತು ಓಡಾಟ. ಮಾತುಕತೆ ಹೆಚ್ಚಿತು ಅಕ್ಕ-ತಂಗಿಯರಲ್ಲಿ. ಅದೊಂದು ದಿನ ಯಶೋದೆಯ ಮನೆಯಲ್ಲಿಯೇ ಸುಮಿತ್ರ, ಕೃಷ್ಣಯ್ಯ ಮತ್ತು ಮಕ್ಕಳಿಗೆ ಔತಣದೂಟ. ಕೃಷ್ಣಯ್ಯ ಎಲ್ಲರ ಅಂತರಂಗವನ್ನೂ ಕಲಕಿದ್ದ. ವಿಧವೆಯನ್ನು ಮದುವೆಯಾಗಿ ನ್ಯೂನತೆಯಿಲ್ಲದ ಜೀವನ ನಡೆಸಬಹುದೆಂದು ಸಾಧಿಸಿ ತೋರಿಸಿದ್ದ. ಧೀರತನದ ಹೆಜ್ಜೆ ಅವನದು. ಆಸ್ತಿಯ ಆಸೆಗೆ ಮದುವೆ ಆಗಿದ್ದರೂ ತನ್ನಿಂದ ಇನ್ನೊಬ್ಬರಿಗೆ ಉಂಟುಮಾಡಲಿಲ್ಲ ನಿರಾಶೆ. ಯಶೋದೆ ತಂಗಿಯನ್ನು ಉಪಚರಿಸುತ್ತ ಹಳೆಯ ಕಹಿಗಳಿಗೆ ಎಳ್ಳುನೀರನ್ನೆರೆದು ಅಂದಳು:

"ಅವನ ಮಕ್ಕಳನ್ನೂ ನಿನ್ನ ಮನೆಗೆ ಕರೆಯಿಸಿಕೊಳ್ಳಬಾರದೇ?"

ತಾಯಿ ಮಗಳಿಗೆ ಕುಂಕುಮದ ಬೊಟ್ಟು ಇಟ್ಟು, "ಮುತ್ತೈದೆಯಾಗಿ ಇರು" ಎಂದು ಹರಸಿದಳು ಮನತುಂಬಿ.

ಸುಮಿತ್ರಳ ಹೃದಯವೂ ತುಂಬಿತ್ತು. ಅರಳಿತ್ತು ಅವಳ ಮನ, ತೆರೆದಿತ್ತು ಒಳಗಣ್ಣು. ಹತ್ತಿರದಲ್ಲಿದ್ದ ಹುಡುಗಿಯರನ್ನು ನೋಡಿದಳು. ಕೃಷ್ಣಯ್ಯನ ಪ್ರೀತಿಧಾರೆಯಲ್ಲಿ ಮಿಂದ ಸಸಿಗಳು! ಒಂದು ದಿನವಾದರೂ ಬಾಯಿತಪ್ಪಿ ಅವನು ಹುಡುಗಿಯರ ತಂದೆಯನ್ನು ಕುರಿತು ಮಾತನಾಡಿಲ್ಲ, ಕೆಣಕಲಿಲ್ಲ. ಹುಡುಗಿಯರೂ ಹೊಂದಿಕೊಳ್ಳುತ್ತ ಇದ್ದಾರೆ. ಅವನು ತನ್ನೊಡನೆಯೂ ಹಾಗೇ ಇದ್ದಾನೆ. ಒಮ್ಮೆಯಾದರೂ ಕುಡಿದ ಅಮಲಿನಲ್ಲಿ ಬಿರುನುಡಿಯಾಡಿಲ್ಲ. ಹಳೆಯದನ್ನು ಕೆದಕಿಲ್ಲ, ಆಸೆಯ ಕೆಂಬೂತದಂತೆ ಸೋಮಾರಿಯಾಗಿಲ್ಲ. ಸಮಾಜದಲ್ಲಿ ಗೌರವದ ವ್ಯಕ್ತಿಯಾಗಿ ಬಾಳುವ ಅವಕಾಶವನ್ನು ಕಲ್ಪಿಸಿ ಕೊಟ್ಟಿದ್ದಾನೆ. ತಾನು ಅವನ ಮೇಲೆ ನಿಜವಾದ ಹಕ್ಕನ್ನು ಸ್ಥಾಪಿಸಿಕೊಂಡೇ ಇದ್ದೆ ಈವರೆಗೂ. ಈಗನಿಸುತ್ತದೆ ಅವನು ಮೊದಲಿನಿಂದಲೂ ಸಂಪೂರ್ಣವಾಗಿ ಗೆದ್ದುಕೊಂಡುಬಿಟ್ಟಿದ್ದಾನೆ ಎಂದು.

ಆಗ ಅವಳಿಗೆ ತನ್ನ ಮನೆ ಗೃಹಪ್ರವೇಶದ ದಿನ ಮುಖ ಸಣ್ಣಮಾಡಿ ಕೊಂಡು ಹೋದ ಎಳೆಯರಿಬ್ಬರ ನೆನಪಾಯಿತು. ಕೃಷ್ಣಯ್ಯ ಅನೇಕ ಬಾರಿ 'ಅವರನ್ನೂ ಕರೆಯಿಸೋಣ' ಎಂದಿದ್ದ. ಆತ ನಿದ್ರೆಕಣ್ಣಿನಲ್ಲಿಯೂ ಮಕ್ಕಳ ಹೆಸರು ಹಿಡಿದು ಕನವರಿಸಿದ್ದುಂಟು. ಆದರೆ ತನಗೆ ಯಾಕೆ ಹಟವೊ? ಮಲ ತಾಯಿ ಧೋರಣೆ. ಸ್ಮರಣೆ ಒಂದಿನಿತೂ ಇಲ್ಲ. ತನ್ನ ಮಕ್ಕಳು, ಅವನ ಮಕ್ಕಳು ಜೊತೆಯಲ್ಲಿ ಇರಲು ಸಾಧ್ಯವೇ ಇಲ್ಲ ಎಂದುಕೊಂಡಿದ್ದೆ. ತಂದೆಯಿಂದ ಮಕ್ಕಳನ್ನು ಅಗಲಿಸಿ ಕಟ್ಟಿಕೊಂಡಿದ್ದೇನೆ ಪಾಪವನ್ನು. ತಾನೂ ತನ್ನ ಮಕ್ಕ ಳಿಂದ ಅಗಲಿ ಇರುವಂತೆ ಆಗಿಹೋಗಿದ್ದರೆ....? ಈ ಯೋಜನೆಯಿಂದ ಸಣ್ಣಗೆ ನಡುಗಿದಳು ಸುಮಿತ್ರ.

ಗಣೇಶನಾದರೆ ಇರಬಲ್ಲ ಹೇಗಾದರೂ. ಮನೆಮಗನಂತೆ ಅವನನ್ನು ತಮ್ಮೊಂದಿಗೆ ಇಟ್ಟುಕೊಳುವದು ಸಾಧ್ಯವಿಲ್ಲ. ನರಸಿಂಹಭಟ್ಟರ ಮನೆಯಲ್ಲಿ ಅವನಿಗೆ ಖಾಯಂ ಕೆಲಸ, ರಾತ್ರಿ ಆಶ್ರಯದ ವ್ಯವಸ್ಥೆಯಿತ್ತು. ಗಣೇಶ ತಿರಸ್ಕರಿಸಿದ್ದಾನೆ ಅವನಾಗಿಯೇ. ಅವನ ಬುದ್ಧಿಗೆ ಏನಾಯಿತೊ! ಈವತ್ತಿನ ಔತಣದೂಟಕ್ಕೂ ಬಂದಿಲ್ಲ. ಎಲ್ಲಿ ಅಲೆಯುತ್ತಿದ್ದಾನೊ? ಮನೆಯಲ್ಲಿ ಕೆಲಸ ಗಳ್ಳ. ಜೊತೆಯಲ್ಲಿ ದುಷ್ಟರ ಸ್ನೇಹ. ಆಗಾಗ ಸಿಕ್ಕಿದವರ ತೋಟಗಳಿಗೆ ನುಗ್ಗಿ ಕದಿಯಲು ಪ್ರಾರಂಭಮಾಡಿದ್ದಾನೆ. ಮೊನ್ನೆ ರಂಗಪ್ಪಾಚಾರಿಯ ಮನೆಯವರು

ಬಂದು, "ನಮ್ಮ ತೋಟದಿಂದ ತೆಂಗಿನಕಾಯಿ ಕದ್ದುಕೊಂಡು ಬಂದಿದ್ದಾನೆ ಗಣೇಶ—" ಎಂದು ತಂದಿದ್ದರು ದೂರನ್ನು. ಇನ್ನೊಮ್ಮೆ ಗೌಡರ ಮನೆಯ ಕೋಳಿಯನ್ನು ಕದ್ದು ಮಾರಿದ ಯಾರಿಗೋ. ಮೊದಲಿನ ಗಣೇಶ ಇವನೇ ಎನ್ನುವ ಅನುಮಾನ! ಈವತ್ತೂ ಹೋಗಿರಬೇಕು ಯಾರದೋ ತೋಟಕ್ಕೆ ಕದಿಯಲು. ಇಂಥ ಮಕ್ಕಳು ಸಮಾಜಕ್ಕೆ ಹೊರೆ, ಕಂಟಕಪ್ರಾಯರು. ಓ!.... ಶಂಕರ–ಸುನಂದೆಯನ್ನು ತಾನು ಅದೇ ದಾರಿಗೆ ತಳ್ಳುತ್ತಿದ್ದೇನೆಯೇ?....

ಯಶೋದೆ ಮನೆಯಿಂದ ಹಿಂದಿರುಗಿ ಬಂದಾಕ್ಷಣ ಕೃಷ್ಣಯ್ಯನಿಗೆ ಅಚ್ಚರಿಯಾಗುವಂತೆ ಅವಳೆಂದಳು, "ನಿಮ್ಮ ಮಕ್ಕಳಿಬ್ಬರನ್ನೂ ಇಲ್ಲಿಗೇ ಕರೆಸುತ್ತೇನೆ. ನಮ್ಮ ಜೊತೆಯಲ್ಲಿ ಅವರೂ ಉಳಿಯಲಿ!"

ಮುಂದೆ ಒಂದು ವಾರದಲ್ಲಿ ಶಂಕರ–ಸುನಂದೆ ಬಂದಿಳಿದರು ಬೆಳ್ಳಿಪಾಡಿಯಲ್ಲಿ. ಕೃಷ್ಣಯ್ಯ ಹತ್ತಿರದ ಶಾಲೆಗೆ ಸೇರಿಸಿದ ಇಬ್ಬರನ್ನೂ. ಅವರು ಬಂದಂದಿನಿಂದ ಗಣೇಶನ ಸ್ವಭಾವದಲ್ಲಿ ಮತ್ತಷ್ಟು ಬದಲಾವಣೆ. ಮನೆಯಲ್ಲಿ ಯಾರ ಒಡನೆಯೂ ಮಾತಿಲ್ಲ. ಶಂಕರ–ಸುನಂದೆಯ ಎದುರಿನಲ್ಲಿ ಸುಳಿಯಲು ಇಚ್ಛಿಸಲಿಲ್ಲ. ಅವರು ಮಾತಿಗೆಳೆದರೂ ಇವನು ಮೌನಿ. ನಸುಕಿನಲ್ಲಿ ಸುಮಿತ್ರ ತಿನ್ನಲು ಕೊಟ್ಟರೆ ತಿನ್ನುವ. ಇಲ್ಲವಾದರೆ ತನ್ನ ಪಾಡಿಗೆ ತಾನು ಹೊರಟುಹೋಗುತ್ತಾನೆ. ಮಧ್ಯಾಹ್ನ ಬಡಿಸಿದರೆ ಮಾತ್ರ ಊಟ. ತಾನಾಗಿಯೇ 'ನನಗೆ ಬಡಿಸಿ ದೊಡ್ಡಮ್ಮ' ಎಂದು ಕೇಳಲಾರ. ರಾತ್ರಿ ಕೊಟ್ಟಿಗೆ ಮೂಲೆಯಲ್ಲಿ ಹೊತ್ತಲ್ಲದ ಹೊತ್ತಿನಲ್ಲಿ ಬಂದು ಬಿದ್ದುಕೊಳ್ಳುತ್ತಾನೆ.

ಇದರೊಂದಿಗೆ ಊರಿನ ಜನರೂ ದಿನಕ್ಕೊಂದು ದೂರು ತರಲಾರಂಭಿಸಿದರು ಕೃಷ್ಣಯ್ಯನ ಹತ್ತಿರ. 'ಇವತ್ತು ನಮ್ಮ ಬಾಳೆಗೊನೆ ಹೋಗಿದೆ', 'ಇವತ್ತು ತೆಂಗಿನಕಾಯಿ ಕದ್ದ', 'ನಿನ್ನೆ ಸಂಜೆ ಹಲಸಿನ ಹಣ್ಣು ತಿಂದ', 'ಮೇಯಲು ಬಿಟ್ಟ ಆಡು ಮನೆಗೆ ಬಂದಿಲ್ಲ. ಗಣೇಶ ಕದ್ದು ಮಾರಿದ್ದಾನೆ' —ಹೀಗೆ ಊರಿನಲ್ಲಿ ನಡೆದ ಎಲ್ಲ ಅಪರಾಧ, ಕಳವು ಗಣೇಶನ ತಲೆಯ ಮೇಲೆ. ಕೃಷ್ಣಯ್ಯ ಕೆಲ ದಿನ ಕೂಡಿಹಾಕಿದ ಕೋಣೆಯಲ್ಲಿ. ಆದರೆ ಹೊರಗೆ ಬಿಟ್ಟಾಕ್ಷಣ ಮತ್ತೆ ಅದೇ ಬುದ್ಧಿ.

ಅಂದು ನರಸಿಂಹಭಟ್ಟರ ಮನೆಗೆ ಅಡಿಗೆಸಹಾಯಕ್ಕೆಂದು ಹೋದವನು ಯಾರಿಗೂ ತಿಳಿಯದಂತೆ ಕದ್ದು ತಂದಿದ್ದ ಐದು ಪವನ ತೂಕದ ಚಿನ್ನದ

ಸರವನ್ನು! ಕದಿಯುವ ಯಾವ ಉದ್ದೇಶವೂ ಸ್ಪಷ್ಟವಾಗಿ ಅವನಲ್ಲಿರಲಿಲ್ಲ. ಅವರ ಗುಟ್ಟು ಹೊರಬಿದ್ದದ್ದು ಸಾಯಂಕಾಲ ಅವರ ಮಗ ಗಣೇಶನನ್ನು ಹುಡುಕಿ ಕೊಂಡು ಬಂದಾಗಲೇ. ಬಚ್ಚಲುಮನೆಯ ಹತ್ತಿರ ಗೇರುಬೀಜಗಳನ್ನು ಸುಡುತ್ತ ಕುಳಿತಿದ್ದ ಅವನನ್ನು ಹಿಡಿದೆಳೆದು ಗದರಿಸುತ್ತಿದ್ದಂತೆ ಕೃಷ್ಣಯ್ಯ-ಸುಮಿತ್ರ ಓಡಿಬಂದರು. ಗಣೇಶ ಚಿನ್ನದ ಸರ ಕದ್ದು ತಂದಿದ್ದಾನೆ!

"ಅಡಿಗೆಕೋಣೆಯ ಬಿಸಿಗೆ ಮೇಲೆ ಅಮ್ಮ ಮರೆತು ಇಟ್ಟುಬಿಟ್ಟಿದ್ದಳು. ಇವನ ದೃಷ್ಟಿಗೆ ಅದು ಯಾವಾಗ ಬಿದ್ದಿತೋ....ಏಯ್! ಎಲ್ಲಿಟ್ಟಿದ್ದಿ, ಕೊಡು ಬೇಗ." ನರಸಿಂಹಭಟ್ಟರ ಮಗ ನಾರಸಿಂಹನ ಅವತಾರ ತಳೆದಿದ್ದ.

ತನಗೆ ತಿಳಿಯದೆಂಬಂತೆ ಗಣೇಶ ತಲೆಯಲ್ಲಾಡಿಸುತ್ತಿದ್ದಂತೆ ಕೃಷ್ಣಯ್ಯ ಅನುಮಾನಪಡುತ್ತ ಅಂದ, "ನಮ್ಮ ಗಣೇಶನಿಗೆ ಅಂತಹ ಬುದ್ಧಿ ಇಲ್ಲವಲ್ಲ."

"ನಾವೂ ಹಾಗೇ ಅಂದುಕೊಂಡಿದ್ದೆವು. ನಮ್ಮ ಮನೆಯಿಂದ ಒಂದು ಕಡ್ಡಿಯನ್ನು ಆಚೀಚೆ ಸರಿಸಿದವನಲ್ಲ. ಈಗ ಏನೋ ತಮಾಷೆಗಾಗಿ ತಂದು ಇಲ್ಲೆಲ್ಲೋ ಇಟ್ಟಿರಬೇಕು. ಒಳ್ಳೆಮಾತಿನಲ್ಲಿ ಕೊಟ್ಟುಬಿಡು."

ಬಹಳ ಹೊತ್ತು ಗದರಿಸಿದ ಮೇಲೆ, ಅಲ್ಲೆಲ್ಲಾ ಹುಡುಕಾಡಿದ ಮೇಲೆ ಅವನ ಹಾಸಿಗೆಯ ಕೆಳಗೇ ಸಿಕ್ಕಿತು ಚಿನ್ನದ ಸರ. ನರಸಿಂಹಭಟ್ಟರ ಮಗ ಅದನ್ನು ಎತ್ತಿ ಹಾರಿಸುತ್ತ ಅಟ್ಟಹಾಸದಿಂದ ನಕ್ಕ,

"ನೋಡಿದೆಯೇನೋ ಕೃಷ್ಣಯ್ಯ, ನಂಬಿಗಸ್ಥ ಹುಡುಗ ಎಂದು ಕೊಂಡಿದ್ದೆವು. ಇವನು ನೋಡಿದರೆ ಕಳ್ಳ! ಇನ್ಮೇಲೆ ನಮ್ಮ ಮನೆ ಹೊಸ್ತಿಲು ತುಳಿದರೆ ಜೋಕೆ!"

ಕೃಷ್ಣಯ್ಯ ಕೋಪದಲ್ಲಿ ಎತ್ತಿಕೊಂಡ ಬೆತ್ತವನ್ನು. ತಾನುಂಡ ಮನೆಯಿಂದ ಆಭರಣಗಳನ್ನು ಕದಿಯುವಷ್ಟು ದುಷ್ಟನಾದನೆ ಈ ಮಗ? ಇವನಿಂದ ತನಗೂ ಅವಮರ್ಯಾದೆ. ಯಾಕೆ ಹೀಗಾದ? ಎಲ್ಲಿಗೆ ಕಳುಹಿಸಲಿ ಇವನನ್ನು? ಆದರೆ ಹಿಂದೆ ಅದೇ ಮನೆಯವರ ತೋಟದ ಕಾವಲಿಗೆ ಹೋಗುವಾಗ 'ತಿನ್ನುವದಕ್ಕೆ ಒಂದಾದರೂ ಅಡಿಕೆಯನ್ನು ತಾರೋ' ಎಂದು ಸುಮಿತ್ರ ಹೇಳಿದರೆ 'ಒಂದೇ ಒಂದು ಅಡಿಕೆಯನ್ನು ಕದ್ದು ಮುಚ್ಚಿ ತರುವವನು ನಾನಲ್ಲ; ನೀನು ಬೇಕಿದ್ದರೆ ಅಂಗಡಿಯಿಂದ ತಗೋ' ಎನ್ನುತ್ತಿದ್ದ....

ಅವನ ಕೈಯಿಂದ ಬೆತ್ತ ಜಾರಿಬಿದ್ದಿತು ಕೆಳಗೆ. ಜೋಲು ಮುಖ

ಮಾಡಿಕೊಂಡು ನಿಂತ ಗಣೇಶನನ್ನು ನೋಡಿದಾಕ್ಷಣ ಕರುಳು ಹಿಂಡಿದಂತೆ ಆಯಿತು. ಅಕ್ಕನನ್ನು ಶಪಿಸಿದ ಮನಸ್ಸಿನಲ್ಲಿ. ತಾಯಿಯಾಗಿ ತನ್ನ ಕರ್ತವ್ಯವನ್ನು ಮಾಡದ ಗಣಪಿಯನ್ನೂ ಶಪಿಸಿದ. ಅವಳ ಜೊತೆಯಲ್ಲಿದ್ದರೆ ಗಣೇಶ ಸರಿಹೋದಾನು ಎಂಬ ಅನುಮಾನವೂ ಮೂಡಿತು. ತತ್‌ಕ್ಷಣ,

"ಗಣಪಿ ವಿಳಾಸ ಎಲ್ಲಿದೆ?" ಕೇಳಿದ ಗಣೇಶನ ಹತ್ತಿರ ಬಂದು. ಅವನು ಕಣ್ಣರಳಿಸಿದ, "ನಂಗೊತ್ತಿಲ್ಲ."

"ವಿಳಾಸ ಹೇಳು, ನೀನು ಹೋಗಿದ್ದಿಯಲ್ಲ ಅಲ್ಲಿಗೆ...."

"ದಿನೇಶ್ ಕಂಪೌಂಡ್, ಜೈಲ್ ರೋಡ್ ಅಂತ ಕಾಣಿಸುತ್ತದೆ. ನಂಗೆ ಸರಿ ಗೊತ್ತಿಲ್ಲ. ಯಾಕೆ? ಅವಳ ಹೆಸರನ್ನು ಎತ್ತಬೇಡ ನನ್ನೆದುರು....!"

ಆದರೆ ಅಷ್ಟೇ ಸಾಕಾಯಿತು ಕೃಷ್ಣಯ್ಯನಿಗೆ. ಅದೇ ದಿನ ಅವನು —ಗಣೇಶನನ್ನು ಹಿಂದಿರುಗಿ ಕರೆಯಿಸಿಕೊಂಡು ಅವನಿಗೆ ಪ್ರೇಮದ ಆಸರೆ ನೀಡುವಂತೆ ಗಣಪಿಗೆ ತಿಳಿಸಿ ಇಲ್ಲಿಯ ವಿಷಯಗಳನ್ನೆಲ್ಲ ವಿವರಿಸುತ್ತ ಸುದೀರ್ಘವಾದ ಕಾಗದವನ್ನು ಬರೆದುಹಾಕಿದ ಧಾರವಾಡಕ್ಕೆ.

ಒಂದೇ ವಾರದಲ್ಲಿ ಅಲ್ಲಿಂದ ಬಂದಿತು ಉತ್ತರ. ಸ್ವತಃ ಗಣಪಿಯೇ ಬರೆದಿದ್ದಳು ಕಾಗದವನ್ನು:

"ನಿಮ್ಮ ಕಾಗದ ಯಾರೂ ಇಲ್ಲದ ಹೊತ್ತಿನಲ್ಲಿ ನನಗೆ ತಲುಪಿದ್ದು ನನ್ನ ಪುಣ್ಯ. ಅದೇನಾದರೂ ಮನೆಯವರ ಕೈಗೆ ದೊರೆತಿದ್ದರೆ ನನ್ನ ಪಾಡು ಏನಾಗುತ್ತಿತ್ತು ಎನ್ನುವದನ್ನು ಯೋಚಿಸಿ. ಗಣೇಶನ ವಿಷಯವನ್ನೋದಿ ಬಹಳ ಬೇಸರವಾಯಿತು. ಆದರೆ ನಾನು ನಿಸ್ಸಹಾಯಕಳು. ಇಷ್ಟು ವರ್ಷಗಳನಂತರ ಅವನಿಗೆ 'ನಾನು ತಾಯಿ' ಎಂದು ತಿಳಿಸಿ ನನ್ನಲ್ಲಿಗೆ ಕಳುಹಿಸುವ ಅಗತ್ಯವೂ ಇರಲಿಲ್ಲ. ಅನಿರೀಕ್ಷಿತವಾಗಿ ಬಂದ ಅವನನ್ನು ಹೇಗೋ ಸಾಗಹಾಕಿದೆ ಇಲ್ಲಿಂದ. ಈಗ ಮತ್ತೆ ಬರೆದಿದ್ದೀರಿ ಕಾಗದವನ್ನು, 'ಅವನನ್ನು ನೀನೇ ಕರೆಯಿಸಿಕೊಳ್ಳುತ್ತೀಯಾ?' ಎಂದು. ಅವನನ್ನು ಹಿಂದೆ ನಿಮ್ಮ ವಶಕ್ಕೆ ಒಪ್ಪಿಸದೇ ಬೀದಿಪಾಲು ಮಾಡಿಬಿಟ್ಟಿದ್ದರೇ ಚೆನ್ನಾಗಿರುತ್ತಿತ್ತು ಎಂದು ಈಗ ಅನಿಸುತ್ತಿದೆ. ಕನ್ಯೆಯಿರುವಾಗಲೇ ಮಗುವನ್ನು ಪಡೆದು ಅದನ್ನು ಬೀದಿಪಾಲು ಮಾಡುವ ಹುಡುಗಿಯರೆಷ್ಟು ಮಂದಿಯಿಲ್ಲ? ಅನಾಥಾಶ್ರಮಕ್ಕೆ

ಹೋದರೆ ಕುಲಗೋತ್ರಗಳಿಲ್ಲದ ಅಸಂಖ್ಯಮಕ್ಕಳನ್ನು ಕಾಣುತ್ತೇನಲ್ಲ. ಅವರಲ್ಲಿ ಯಾರೂ ತಮ್ಮ ತಂದೆತಾಯಿಯರನ್ನು ಹುಡುಕಿಕೊಂಡು ಹೋಗುವದಿಲ್ಲ! ಸಧ್ಯ ನನ್ನ ಮಗುವಿನ ವಿಷಯದಲ್ಲಿ ನಾನೆಂದೂ ಕಟುಕಳಾಗಲಿಲ್ಲ. ಮಗು ಹುಟ್ಟಿದಾಗಲೇ ಅಪ್ಪ ಕೊಂದುಬಿಡಬೇಕು ಎಂದುಕೊಂಡಿದ್ದ. ಆದರೆ ಮಾತೃವಾತ್ಸಲ್ಯದಿಂದ ನಾನೇ ಮಗುವನ್ನು ಅಕ್ಕುವಿನ ಮಡಿಲಿಗೆ ಹಾಕಿ ಅದಕ್ಕೆ ಬದುಕುವ ಭಾಗ್ಯವನ್ನು ಕರುಣಿಸಿದೆ. ಮಾನವೀಯತೆ ಇಲ್ಲದ ಧರ್ಮವಿಲ್ಲ ನಿಜ, ಆದರೆ ಸಮಾಜದ ಕೆಲವು ಕಟ್ಟುಪಾಡುಗಳಿವೆ. ಅದನ್ನು ಮೀರುವ ಧೈರ್ಯ ಆಗ ನನ್ನಲ್ಲಿ ಇರಲಿಲ್ಲ. ಈಗಲೂ ಇಲ್ಲ! ನೀವು ಮಾತ್ರ ದಿಟ್ಟತನದಿಂದ ನಿಮ್ಮ ಮಗುವಿನಂತೆ ಸಾಕಿದ್ದೀರಿ. ನನ್ನ ಪರಿಸ್ಥಿತಿಯನ್ನೂ ಒಂದು ಬಾರಿ ಆಲೋಚಿಸಿ. ಮೂರು ಮಕ್ಕಳ ತಾಯಿ ನಾನು. ತುಂಬಿದ ಕುಟುಂಬದ ಸೊಸೆ. ನನ್ನ ಸುಂದರ ಬದುಕಿಗೆ ಕೊಳ್ಳಿ ಇಡಬೇಡಿ. ಅವನಿಗೆ ತಂದೆಯಾಗಿ, ಅಕ್ಕುವಿನ ಸ್ಥಾನದಲ್ಲಿ ತಾಯಿಯಾಗಿ ನೀವಿರುವಾಗ ನನ್ನ ಅಗತ್ಯವೇ ಇಲ್ಲ. ಕೈಮುಗಿದು ಕೇಳಿಕೊಳ್ಳುತ್ತೇನೆ. ದಯವಿಟ್ಟು ಇನ್ನುಮೇಲೆ ಪತ್ರವ್ಯವಹಾರ ಮಾಡಬೇಡಿ. ಗಣೇಶ ಎಲ್ಲಿದ್ದರೂ ನಿಮ್ಮ ಮಗನಾಗಿಯೇ ಇರಲಿ ಎಂದು ಆಶೀರ್ವಾದ ಮಾಡಲೇ?"

ಸಹಿ ಇಲ್ಲದ ಕಾಗದವನ್ನು ಎರಡೆರಡು ಬಾರಿ ಓದಿದ ಕೃಷ್ಣಯ್ಯ. ಗಣಪಿ ಬರೆದದ್ದು ನೂರಕ್ಕೆ ನೂರೂ ಸತ್ಯ. ತಾನೆಂತಹ ಮೂರ್ಖ! ಅವಳಿಗೆ ಬರೆದು ತಿಳಿಸುವ ಅಗತ್ಯವೇ ಇರಲಿಲ್ಲ. ಅವಳ ಸಂಸಾರಕ್ಕೆ ಕಿಚ್ಚನ್ನಿಟ್ಟಿಸುವ ಹುಚ್ಚು ತನಗೇಕೆ?

ಅವನು ಕಾಗದವನ್ನು ಹಾಗೇ ತೆಗೆದಿರಿಸಿದ ಒಳಗೆ.

## 26

ಅಂದು ಬೆಳಗ್ಗೆಯಿಂದಲೇ ಪ್ರಾರಂಭವಾಗಿತ್ತು ಮಳೆ. ಮಧ್ಯಾಹ್ನದ ಮೇಲೆ ಇನ್ನಷ್ಟು ಹೆಚ್ಚಿತು. ಹೊರಕೆಲಸಗಳಿಲ್ಲದೆ ಮನೆಯೊಳಗೆ ಮಕ್ಕಳೊಡನೆ ಪಗಡೆ ಆಟಕ್ಕೆ ಕುಳಿತಿದ್ದ ಕೃಷ್ಣಯ್ಯ. ಅಷ್ಟರಲ್ಲಿ ನರಸಿಂಹಭಟ್ಟರ ಮನೆಯ ಒಬ್ಬ ಆಳು

ಬಂದು "ನೀವು ಈಗಲೇ ಗಣೇಶನನ್ನು ಕರ್ಕೊಂಡು ಅವರ ಮನೆಗೆ ಬರಬೇಕಂತೆ" ಎಂದ.

ದಿಗ್ಗನೆ ಎದ್ದ ಕೃಷ್ಣಯ್ಯ, "ಯಾಕೆ ಕರೆದಿದ್ದಾರೆ?" ಎಂದ.

"ಗೊತ್ತಿಲ್ಲ, ಅವರ ಮನೆಗೆ ಯಾರೋ ಮೈಸೂರಿನಿಂದ ಬಂದಿದ್ದಾರೆ. ತುರ್ತಾಗಿ ನಿಮ್ಮನ್ನು ಕರೆದು ಬಾ ಅಂದ್ರು."—ಆಳು ಹೊರಟುಹೋದ.

ಕೃಷ್ಣಯ್ಯ ಅವಸರದಲ್ಲಿ ಅಂಗಿ ಹಾಕಿಕೊಳ್ಳುತ್ತ ಕೊಡೆ ಎತ್ತಿಕೊಂಡು ಗಣೇಶನಿಗಾಗಿ ಹುಡುಕಿದ ಅತ್ತ ಇತ್ತ....ಅವನು ಮನೆಯಲ್ಲಿದ್ದರೆ ತಾನೇ? ಇವತ್ತು ಬೆಳಗ್ಗೆಯೇ ಹೊರಟುಹೋಗಿದ್ದಾನೆ ಎಲ್ಲಿಗೋ. ಮಧ್ಯಾಹ್ನದ ಊಟಕ್ಕೂ ಬಂದಿಲ್ಲ. ಈಗ ತುರ್ತಾಗಿ ನರಸಿಂಹಭಟ್ಟರು ಕರೆದಿದ್ದಾರೆ, ಅಂದರೆ ಗಣೇಶ ಇನ್ನೇನೋ ಪೀಕಲಾಟ ಮಾಡಿರಬೇಕು. ತನಗೆ ಎಚ್ಚರಿಕೆ ಹೇಳುವದಕ್ಕೆ ಕರೆಯುತ್ತಿದ್ದಾರೆ. ದೇವರೇ, ಈ ಹುಡುಗ ದಿನೇ ದಿನೇ ಸಮಸ್ಯೆಯವನಾಗಿ ಹೋಗುತ್ತಿದ್ದಾನೆ!

'ನಾನೀಗ ಬರುತ್ತೇನೆ' ಎಂದು ಸುಮಿತ್ರಳಿಗೆ ತಿಳಿಸಿ ಒಬ್ಬನೇ ಹೊರಟು ಬಂದ ನರಸಿಂಹಭಟ್ಟರ ಮನೆಗೆ. ಸುರಿಯುವ ಮಳೆ ಅರ್ಧಮೈಯನ್ನು ನೆನಸಿಬಿಟ್ಟಿತ್ತು. ಅವರ ಮನೆ ಜಗಲಿಯ ಹೊರಗೆ ಕೊಡೆಯನ್ನು ಒರಗಿಸಿಟ್ಟು ಬಟ್ಟೆಯನ್ನು ಮುದುರಿಕೊಳ್ಳುತ್ತ ಕಾಲಿರಿಸಿದ ಒಳಗೆ. ಅವನ ಮೈಯಿಂದ ಬೊಟ್ಟುಬೊಟ್ಟು ಇಳಿಯಿತು ನೀರು. ಅವನಿಗಾಗಿಯೇ ಕಾಯುತ್ತ ಇದ್ದರು ನರಸಿಂಹಭಟ್ಟರು. ಅವರ ಜೊತೆಯಲ್ಲಿ ಕುಳಿತಿದ್ದಾರೆ ಲಕ್ಷಣವಾದ ಮುಖದ ಐವತ್ತು ವರ್ಷಕ್ಕೆ ಹತ್ತಿರದ ಒಬ್ಬ ಗಂಡಸು. ಶುಭ್ರವಾದ ಬಿಳಿಪಂಚೆ ಉಟ್ಟಿದ್ದಾರೆ. ಕೈಗಳಲ್ಲಿ ಏನೇನೋ ಕಾಗದಪತ್ರಗಳು. ಕೃಷ್ಣಯ್ಯ ಒಳಗೆ ಕಾಲಿರಿಸುವಾಗ ಇಬ್ಬರಲ್ಲಿಯೂ ಗಹನವಾದ ಮಾತುಕಥೆಗಳಾಗುತ್ತ ಇತ್ತು.

ಅವನು ನೆಲದ ಮೇಲೆ ಕುಳಿತುಕೊಳ್ಳುತ್ತಿದ್ದಂತೆ ನರಸಿಂಹಭಟ್ಟರು ಕುರ್ಚಿಯನ್ನು ಅವನೆದುರಿಗೆ ಸರಿಸಿ, "ಇಲ್ಲಿ ಕೂತ್ಕೋ" ಎಂದರು. ಒಳಗಿನಿಂದ ಬಿಸಿ ಕಾಫಿ ಬಂದಿತು, ಮಳೆಯ ಚಳಿಗೆ ಪರಿಹಾರಕ್ಕೋಸ್ಕರ. ನರಸಿಂಹಭಟ್ಟರ ಕಣ್ಣುಗಳು ಹೊರಬಾಗಿಲತ್ತ ನೋಡಿದವು. ಹುಡುಗ ಬರಲಿಲ್ಲವೇ ಎಂದೂ ಕೇಳಿದರು ಕೃಷ್ಣಯ್ಯನನ್ನು. ಬೆಳಗ್ಗೆಯಿಂದಲೇ ಮನೆಯಲ್ಲಿಲ್ಲವೆಂದು ವಿನಯದಲ್ಲಿ ಹೇಳಿಕೊಂಡ ಅವನು.

"ನಿನಗೊಂದು ಅನಿರೀಕ್ಷಿತವ ಸುದ್ದಿ. ನೀನಂತಹ ಪುಣ್ಯವಂತ ಅನ್ನುತ್ತೀನಿ....ಗಣೇಶ ಯಾರ ಮಗ, ಹೇಳು?"—ಕೇಳಿದರು ನರಸಿಂಹಭಟ್ಟರು.

ಕೃಷ್ಣಯ್ಯ ತಬ್ಬಿಬ್ಬಾಗಿ ಎದುರು ಕುಳಿತವರನ್ನು ನೋಡಿದ. ಅವರು ಗಂಭೀರವಾಗಿ ನೋಡುತ್ತಿದ್ದಾರೆ ಅವನನ್ನು. ಮನದಲ್ಲೇ ಬೆಚ್ಚಿದ. ಗಣಪಿಯು ಕಾಗದ ಬಂದಂದಿನಿಂದ ಅವನು ದೃಢವಾದಿಕೊಂಡಿದ್ದಾನೆ, ಇನ್ನು ಎಷ್ಟು ಮಾತ್ರಕ್ಕೂ ತನ್ನಿಂದ ಅವಳಿಗೆ ತೊಂದರೆಯಾಗಬಾರದು ಎಂದು. ಈಗ ಅವನ ಹೆಸರು ಹೇಗೆ ಹೇಳುವದು? "ಅವನು ನನ್ನ ಮಗ...."—ಎಂದ ಈ ಪ್ರಶ್ನೆ ಯಾಕೆ ಬಂದಿತು ಎಂದು ಹೆದರಿ.

"ಹೋಹೋ!....ನೀನು ಸಾಕಿದ ಮಗನಲ್ಲವೇ?" ನರಸಿಂಹಭಟ್ಟರು ಜೋರಾಗಿ ನಗುತ್ತ ಅಂದರು, "ಇದ್ದಕ್ಕಿದ್ದಂತೆ ನಿನ್ನ ಗಣೇಶ ದೊಡ್ಡ ಮನುಷ್ಯನಾಗಿ ಹೋದನಲ್ಲ. ಇವರು ನೋಡು....ಮೈಸೂರಿನಲ್ಲಿರುವ ನನ್ನ ನೆಂಟರು. ಇವರ ತಮ್ಮ ಶ್ರೀಹರಿಪ್ರಸಾದ. ಅವನನ್ನು ಗೊತ್ತ ನಿನಗೆ? ಗೊತ್ತಿರಬೇಕಲ್ಲ."

ಇಲ್ಲ ಎಂಬಂತೆ ತಲೆಯಲ್ಲಾಡಿಸಿ ಎದುರು ಕುಳಿತವರನ್ನು ಮತ್ತೆ ನೋಡಿದ. ಅವರು ಕಾಗದಪತ್ರಗಳನ್ನೇ ನೋಡುತ್ತ ಇದ್ದರು.

"ನಿನಗೆ ಗೊತ್ತಿಲ್ಲದೆ ಏನಂತೆ? ನಿನ್ನ ಹತ್ರ ಎಲ್ಲ ಕೇಳಿಕೊಂಡು ಪ್ರತ್ಯಕ್ಷವಾಗಿ ಗಣೇಶನನ್ನು ನೋಡಲು ಬಂದಿದ್ದಾರೆ ಇವರು." ನರಸಿಂಹ ಭಟ್ಟರು ತಮ್ಮ ನೆಂಟನತ್ತ ಹೊರಳಿದರು, "ನೀನೇ ಹೇಳು ಎಲ್ಲ ವಿಷಯ ಗಳನ್ನು."

'ಬೇಡ, ನೀನೇ ಹೇಳು' ಎಂಬಂತೆ ಕೈಸನ್ನೆಮಾಡಿದರು ಅವರು. ತಮ್ಮ ಕೈಯಲ್ಲಿದ್ದ ಕಾಗದಪತ್ರಗಳಿಂದ ಎರಡು ಕಾಗದಗಳನ್ನು ತೆಗೆದು ಬದಿಗಿರಿಸಿ ದರು. ಮುಖ ಇನ್ನಷ್ಟು ಗಂಭೀರವಾಗಿದೆ. ಹಣೆಯ ಮೇಲೆ ನಿರಿಗೆಗಳು. ಕೃಷ್ಣಯ್ಯನಿಗೆ ಹೇಳುವ ವಿಷಯವಾದರೂ ಏನಿದೆ?—ಎಂಬ ಕುತೂಹಲ.

"ಶ್ರೀಹರಿ ಯಾರು ಅನ್ನುವದು ಚೆನ್ನಾಗಿ ಬಲ್ಲೆ ನೀನು. ಅದರೂ ಇಲ್ಲ ಅನ್ನುತ್ತಿಯಲ್ಲ, ಏನಾಶ್ಚರ್ಯ! ಕೃಷ್ಣಯ್ಯ, ಶ್ರೀಹರಿ ತಾನು ಸಾಯುವ ಮೊದಲು ತನ್ನ ಚಿರಚರ ಸೊತ್ತುಗಳನ್ನೆಲ್ಲ ಒಬ್ಬ ಅನಾಥ ಹುಡುಗನ ಹೆಸರಿಗೆ ಬರೆದುಹಾಕಿದ್ದಾರೆ....ಏನೋ ಮುಖ ಮುಖ ನೋಡ್ತ ಇದ್ದೀ?...."

ಯಾವ ಶ್ರೀಹರಿಪ್ರಸಾದನೋ....ಎಲ್ಲಿಯ ಅನಾಥ ಹುಡುಗನೋ!

ತನ್ನ ಮುಂದೆ ಇವನ್ನೆಲ್ಲ ಯಾಕೆ ಹೇಳುತ್ತಿದ್ದಾರೆ....? ಯಾಕೋ ಎದುರಿಗೆ ಕುಳಿತವರ ದೃಷ್ಟಿಯನ್ನು ಎದುರಿಸಲಾಗುತ್ತಿಲ್ಲ ತನ್ನಿಂದ. ಬೇಗಬೇಗ ಕರೆಯಿಸಿದ ಕಾರಣವನ್ನು ಹೇಳಿಬಿಟ್ಟಿದ್ದರೆ ತೆಪ್ಪಗೆ ಹೊರಟುಹೋಗುತ್ತಿದ್ದೆನಲ್ಲ.

"ಶ್ರೀಹರಿಗೆ ಮದುವೆಯಾಗಿರಲಿಲ್ಲ...." ನಿಧಾನವಾಗಿ ನರಸಿಂಹಭಟ್ಟರು ನೆಂಟನ ಮುಖದತ್ತ ನೋಡಿ ಅಂದರು, "ಮಕ್ಕಳೂ ಇರಲಿಲ್ಲ! ಅವನು ಉಬ್ಬಸದ ರೋಗಿ. ಎಲ್ಲೆಲ್ಲೋ ಚಿಕಿತ್ಸೆಗಾಗಿ ಅಲೆದಾಡುತ್ತ ಇದ್ದ. ಅನೇಕ ವರ್ಷಗಳಿಂದ ನರಳಿನರಳಿ ಈಗ ಒಂದು ತಿಂಗಳ ಹಿಂದೆ ತೀರಿಹೋದ. ನಿನಗೂ ನನಗೂ....ಯಾರಿಗೂ ನಂಬುವದಕ್ಕೇ ಸಾಧ್ಯವಿಲ್ಲ: ಅವನು ತನ್ನ ವಿಲ್‌ನಲ್ಲಿ ಏನು ಬರೆದಿದ್ದಾನೆ ಗೊತ್ತೇನೋ....ನೋಡು, ನನಗೆ ಗಣೇಶನನ್ನು ನೋಡುವಾಗಲೆಲ್ಲ ನನ್ನ ಬಂಧುವೊಬ್ಬರನ್ನು ನೋಡಿದ ನೆನಪು ಬರ್ತಾ ಇತ್ತು. ಹಿಂದೊಮ್ಮೆ ಶ್ರೀಹರಿಯ ಅಣ್ಣ....ಇದೇ ಇಲ್ಲಿ ಕುಳಿತಿದ್ದಾರಲ್ಲ ಇವರು ಮತ್ತು ಇವರ ಹೆಂಡತಿ ನಮ್ಮಲ್ಲಿಗೆ ಬಂದಾಗ ಗಣೇಶನನ್ನು ನೋಡಿ, 'ಈ ಹುಡುಗ ಥೇಟ್ ನಮ್ಮ ಶ್ರೀಹರಿಯ ಹಾಗೆ ಅಲ್ಲವೇ?....' ಎಂದಿದ್ದರು."

"ನೀವೇನು ಹೇಳ್ತಾ ಇದ್ದೀರಿ?"—ಕೃಷ್ಣಯ್ಯನಿಗೆ ಮಾತಿನ ಎಳೆ ತಿಳಿಯಲೇ ಇಲ್ಲ.

"ಅದೇ ಶ್ರೀಹರಿ ಸಕಲೇಶಪುರದಲ್ಲಿರುವ ತನ್ನ ಎಂಟು ಎಕರೆ ಕಾಫಿ ತೋಟ, ಮೈಸೂರಿನಲ್ಲಿರುವ ಮನೆ, ಬ್ಯಾಂಕ್ ಹಣ, ಅದೂ ಸಾಲದೆಂಬಂತೆ ಅರವತ್ತು ಸಾವಿರ ರೂಪಾಯಿಯ ಇನ್ಸೂರೆನ್ಸ್ ಪಾಲಿಸಿ ಎಲ್ಲಾ...."

"ಅವನಿಗೆ ನಾವ್ಯಾರೂ ಇರಲಿಲ್ಲವೇ?" ಎದುರು ಕುಳಿತವರ ಗಂಭೀರ ಧ್ವನಿ ಹೊಡೆದೆಬ್ಬಿಸಿತು ಕೃಷ್ಣಯ್ಯನನ್ನು. "ನನಗೆ ಇದ್ದರಲ್ಲ ನಾಲ್ಕು ಗಂಡು ಮಕ್ಕಳು. ನನ್ನ ಇನ್ನೊಬ್ಬ ತಮ್ಮನಿಗೂ ಇಬ್ಬರಿದ್ದಾರೆ. ಶ್ರೀಹರಿ ತನ್ನದೆಲ್ಲ ಒಡಹುಟ್ಟಿದ ಸಹೋದರರ ಮಕ್ಕಳಿಗೆ ಕೊಡ್ತಾನೆ ಅಂತ ಅಂದ್ಕೊಂಡಿದ್ದೆವು. ಸಾಯುವ ಕಾಲಕ್ಕೆ ನಮ್ಮ ಮನೆಯಲ್ಲೇ ಇದ್ದ....ಆದರೂ....ಹಿಡಿ....ಈ ವಿಲ್‌ನಲ್ಲಿ ಎಲ್ಲ ಬರೆದಿದ್ದಾನೆ. ಮೂರು ಜನ ವಕೀಲರ ಸಹಿಯೂ ಇದೆ ಇದರಲ್ಲಿ. ಓದಿ ನೋಡಪ್ಪ...."

ಕೃಷ್ಣಯ್ಯ ನಡುಗುವ ಹಸ್ತದಿಂದ ತೆಗೆದುಕೊಂಡ ಕಾಗದವನ್ನು. ವಕೀಲರ ಸಹಿಗಳ ಜೊತೆಯಲ್ಲಿ ಶ್ರೀಹರಿಪ್ರಸಾದರ ಸಹಿಯೂ ಇತ್ತು. ಓದುತ್ತ

ಓದುತ್ತ ಮಂಜಾದವು ಕಣ್ಣುಗಳು, ನಡುಗಿತು ಮೈ, ಅದುರಿತು ತುಟಿ. ತಾನು ಓದುತ್ತಾ ಇರುವುದು ಕನಸೇ, ನನಸೇ? ಏನಿದು....? ಮುದ್ದಾದ ದೊಡ್ಡ ಅಕ್ಷರಗಳಲ್ಲಿ ಬರೆದಿದ್ದಾರೆ ಸ್ಪಷ್ಟವಾಗಿ:

"ತೋನ್ಸೆ ನಿವಾಸಿಯಾದ ಹೊನ್ನಪ್ಪನ ಮಗಳು ಗಣಪಿ ಎಂಬ ಕನ್ಯೆಯಲ್ಲಿ ಹದಿಮೂರು ವರ್ಷಗಳ ಹಿಂದೆ ಹುಟ್ಟಿದ ನನ್ನ ಮಗು ಹೆಣ್ಣಾಗಲೀ ಗಂಡಾಗಲೀ—ನನ್ನ ಈ ಎಲ್ಲ ಸಂಪತ್ತಿಗೂ ಭಾಧ್ಯಸ್ಥನು(ಳು). ಆ ಮಗು ಬದುಕಿ ಉಳಿಯದೇ ಇದ್ದಲ್ಲಿ ಈ ಎಲ್ಲ ಸಂಪತ್ತನ್ನೂ ಮಕ್ಕಳ ಅನಾಥಾಶ್ರಮಗಳಿಗೆ ಹಂಚತಕ್ಕದ್ದು."

ಕೃಷ್ಣಯ್ಯನ ತಲೆ ತಿರುಗಿತು. 'ತೋನ್ಸೆಯ ಹೊನ್ನಪ್ಪನ ಮಗಳ ಮಗ ಗಣೇಶ! ಅವನು ಶ್ರೀಹರಿಯ ಸಂಪತ್ತಿನ ಒಡೆಯ! ಅವನ ಬಾಯಿಯಿಂದ ಹೊರಡಲಿಲ್ಲ ಮಾತುಗಳು. ಎದೆಬಡಿತ ತೀವ್ರವಾಯಿತು. ಬಿಸಿಯಾಯಿತು ಮೈ....

"ಓದಿದೆಯ ಎಲ್ಲ?...." ಕೇಳಿದರು ನರಸಿಂಹಭಟ್ಟರು, "ನಿನ್ನ ಗಣೇಶನ ಭಾಗ್ಯ ನೋಡು! ಇವರು ವಿಲ್‌ನಲ್ಲಿ ಬರೆದುದನ್ನು ನೋಡಿ ಶ್ರೀಹರಿಗೆ ಬುದ್ಧಿ ಸರಿಯಿರಲಾರದು ಎಂದುಕೊಂಡು ತೋನ್ಸೆಗೆ ಹೋಗಿದ್ದರಂತೆ. ಅಲ್ಲಿ ಹೊನ್ನಪ್ಪ ಇಲ್ಲವಂತೆ....ನಿನ್ನ ಭಾವ, ಮಾವನ ಹತ್ರ ಅವನ ವಿಷಯಗಳನ್ನು ಕೇಳಿ ತಿಳಿದುಕೊಂಡಿದ್ದಾರೆ....ಎಂತಹ ದೊಡ್ಡ ಮನಸ್ಸು ನಿನ್ನದು....! ಗಣೇಶ ನಿನ್ನ ಅಂಗೈಮೇಲೆ ಬೆಳೆಯದೇ ಹೋಗಿದ್ದರೆ....? ಅದೂ ಒಂದು ವಿಧಿಯ ಆಟ ಅನ್ನು...."

"ಹೊನ್ನಪ್ಪ ಕಾರವಾರದಲ್ಲಿ ಇದ್ದಾನಂತಲ್ಲ?...." ಶ್ರೀಹರಿಯ ಅಣ್ಣ ಹೇಳಿದರು ಕಾಗದವನ್ನು ತನ್ನತ್ತ ತೆಗೆದುಕೊಂಡು, "ಹುಡುಗ ನಿನ್ನ ಹತ್ತಿರ ಇದ್ದಾನೆಂದು ಕೇಳಿ ಸೀದಾ ಇಲ್ಲಿಗೇ ಬಂದೆ...."

ಕೃಷ್ಣಯ್ಯನಿಗೆ ಅವರು ಹೇಳಿರುವುದು ಕೇಳಿಸಲೇ ಇಲ್ಲ ಸರಿಯಾಗಿ. ಶ್ರೀಮಂತ ವ್ಯಕ್ತಿ ಮರವಂತೆ ಸಮುದ್ರತೀರದಲ್ಲಿ....ಉಬ್ಬಸ....ರೋಗಿ ಗಣಪಿಯೊಡನೆ ಸಂಬಂಧ....ಗಣಪಿ ಗರ್ಭಿಣಿ ಎಂದು ತಿಳಿದಾಗ ಕೇಳಿದಷ್ಟು ಹಣ ಚೆಲ್ಲಿದ ಉದಾರಿ....ಮಗುವನ್ನು ಎತ್ತಿಕೊಂಡು ತನ್ನ ಮನೆಬಾಗಿಲಲ್ಲಿ ನಿಂತ

ಹೊನ್ನಪ್ಪ....ಒಂದೊಂದಾಗಿ ಪದರುಪದರಾಗಿ ಬಿಚ್ಚಿಕೊಂಡಿತು · ಹಳೆಯ ನೆನಪುಗಳು. ಆ ಶ್ರೀಮಂತನೇ ಶ್ರೀಹರಿಪ್ರಸಾದ! ಇಷ್ಟು ವರ್ಷಗಳನಂತರ ತನ್ನ ಸೊತ್ತನ್ನು ಕಾಣದ ಮಗುವಿಗೆ ಒಪ್ಪಿಸಿದ್ದಾನೆಯೇ? ಇದು ಸುಳ್ಳಾಗ ಲಾರದಷ್ಟೇ?....

"ಆದರೆ....? ಇಷ್ಟು ವರ್ಷಗಳಿಂದಲೂ ಶ್ರೀಹರಿ ತನ್ನ ಮಗುವಿನ ಬಗ್ಗೆ ಆಸಕ್ತಿ ತಳೆಯಲಿಲ್ಲ ಯಾಕೆ? ಅಕ್ರಮವಾಗಿ ಹುಟ್ಟಿದ ಮಗುವನ್ನು ಒಂದು ಬಾರಿಯಾದರೂ ನೋಡಲಿಲ್ಲ ಯಾಕೆ? ಗಣಪಿಯನ್ನಾಗಲೀ, ಹೊನ್ನಪ್ಪ ನನ್ನಾಗಲೀ ಹುಡುಕಿಕೊಂಡು ಹೋಗಲಿಲ್ಲ. ಒಮ್ಮೆಲೇ ಅನಿರೀಕ್ಷಿತವೆಂಬಂತೆ ಎಲ್ಲ ಸಂಪತ್ತನ್ನೂ ಅವನ ಹೆಸರಿಗೆ ಬರೆದು ಈ ಲೋಕವನ್ನು ತ್ಯಜಿಸಿದ್ದಾರೆ ನಿಶ್ಚಿಂತೆಯಲ್ಲಿ....

ಅವನ ಕಣ್ಣುಗಳಿಂದ ಇಳಿಯಿತು ನೀರು. ಯಾವದೇ ಸ್ವಾರ್ಥವಿಲ್ಲದೆ ಅಕ್ಕ ಸಾಕಿದ್ದಳು ಮಗುವನ್ನು. ಬಡತನದಲ್ಲಿಯೂ ಅವಳಿಗೆ ಅವನ ಮೇಲೆ ಅಪಾರ ವಾತ್ಸಲ್ಯ. ತಾನೂ ಅಷ್ಟೇ, ಆಗಾಗ ತನಗೆ ಹೊರೆಯಾದಂತೆ ಅನ್ನಿಸಿ ದರೂ ಅಕ್ಕನ ದಾರಿಯಲ್ಲೇ ನಡೆಸಿದ್ದೇನೆ ಅವನನ್ನೂ.

"ವಿಲ್‌ನಲ್ಲಿ ನನ್ನ ತಮ್ಮ ಹೀಗೆ ಬರೆದಿದ್ದರೂ ಅದರ ಬಗ್ಗೆ ಸಂಪೂರ್ಣ ತನಿಖೆ ಆಗಲೇಬೇಕು. ಹೊನ್ನಪ್ಪ ಎಲ್ಲಿದ್ದರೂ ಹುಡುಕಿ ಅವನನ್ನೂ ಕೇಳ ಬೇಕು...."

"ಇನ್ನು ಕೇಳೋದು ಏನಿದೆ?"—ತಟ್ಟನೆ ಅಂದರು ನರಸಿಂಹಭಟ್ಟರು. "ಕೃಷ್ಣಯ್ಯ ತಾಜಾ ಮನುಷ್ಯ. ನಿಸ್ವಾರ್ಥಪ್ರೇಮದಲ್ಲಿ ತನ್ನ ಮಗನಂತೆ ಸಾಕಿಕೊಂಡಿದ್ದಾನೆ. ನಾವೂ ಹುಡುಗ ಅವನ ಮಗನೇ ಎಂದು ಮೊನ್ನೆಮೊನ್ನೆ ಯವರೆಗೂ ತಿಳಿದಿದ್ದೆವು....ಇಲ್ಲಿ ನಯಾಪೈಸೆ ಅನುಮಾನ ಬೇಡ. ಹುಡುಗನೂ ಹದಿನಾರಾಣೆ ಚೊಕ್ಕ ಚಿನ್ನ!"

ಅವರು ತಮ್ಮ ಹಣೆಯ ನಿರಿಗೆಗಳನ್ನು ದ್ವಿಗುಣಗೊಳಿಸಿ ಕಾಗದಪತ್ರ ಗಳನ್ನು ಒಳಗಿರಿಸಿದರು. "ಆದರೂ ಬಹಳ ದೊಡ್ಡ ಸಂಪತ್ತು. ಅವನು ಶ್ರೀಹರಿಯ ಮಗನೇ ಎಂದು ಪ್ರಮಾಣವಾಗಬೇಕು....ಹೋಗು, ಬೇಗ ಹುಡುಗನನ್ನು ಕರ್ಕೊಂಡು ಬಾ."

ಕೃಷ್ಣಯ್ಯ ಕುಳಿತಲ್ಲಿಂದ ಎದ್ದು ಇಬ್ಬರಿಗೂ ವಂದಿಸಿ ಬೇಗ ಕಲೆದು

ಕೊಂಡು ಬರುತ್ತೇನೆಂದು ತಿಳಿಸಿ ಜಗಲಿಯ ಹೊರಗೆ ಇರಿಸಿದ್ದ ಕೊಡೆಯನ್ನು ಎತ್ತಿಕೊಂಡು ಅಂಗಳಕ್ಕಿಳಿದ.

## 27

ಮಳೆ ಸಂಪೂರ್ಣ ನಿಂತು ಶುಭ್ರವಾಗಿತ್ತು ಆಗಸ. ದಾರಿಯಲ್ಲೆಲ್ಲ ಕೆಸರೋ ಕೆಸರು. ಮರಗಳಿಂದ ಟಪಟಪಾ ಎಂದು ಇನ್ನೂ ಸುರಿಯುತ್ತಿದೆ ಮಳೆಹನಿ. ಸಣ್ಣ ಗಾಳಿ ಬಂದರೂ ಸಾಕು ಮೈಮೇಲೆಲ್ಲ ಪನ್ನೀರ ಹನಿ. ತೋಟದ ಅಂಚು, ಗದ್ದೆ ಹುಣಿ, ಕಾಡಿನ ಇಳಿಜಾರಿನಲ್ಲಿ ಸ್ವಲ್ಪ ಹೆಜ್ಜೆ ತಪ್ಪಿದರೆ ಸಾಕು, ಜಾರಿ ಬೀಳುವದು ಖಂಡಿತ. ಮಳೆ ನಿಂತು ಬಂದ ಬಿಸಿಲಿಗೆ ಅಸಂಖ್ಯ ಪತಂಗಗಳು ರೆಕ್ಕೆ ಬಿಚ್ಚಿ ಹಾರುತ್ತ ಇವೆ.

ಕೆಸರನ್ನು ತುಳಿಯುತ್ತ, ಎಲ್ಲಿಯೂ ಜಾರಿ ಬೀಳದೆ ಶರವೇಗದಲ್ಲಿ ಮನೆಗೆ ಬಂದ ಕೃಷ್ಣಯ್ಯನಿಗೆ ಗಣೇಶ ಇನ್ನೂ ಮನೆಗೆ ಬಂದಿಲ್ಲ ಎನ್ನುವದು ತಿಳಿಯಿತು. ನಿಜ, ಹೊತ್ತಲ್ಲದ ಹೊತ್ತಿನಲ್ಲಿ ಮನೆಗೆ ಬರುವವನು. ಇಷ್ಟು ದಿನಗಳೂ ಲಕ್ಷ್ಯವನ್ನೇ ಇಟ್ಟಿಲ್ಲ. ಶಂಕರ-ಸುನಂದೆ ಮನೆಗೆ ಬಂದಮೇಲೆ ಇನ್ನೂ ನಿರ್ಲಕ್ಷ್ಯ ಪ್ರಾರಂಭವಾಗಿದೆ. ನಾಲ್ಕು ಮಕ್ಕಳನ್ನು ನೋಡಿಕೊಳ್ಳುವದೇ ಕಷ್ಟಕರ ಎಂದೆನಿಸುವಾಗ ಗಣೇಶ ತೀರ ನಿಕೃಷ್ಟನಾಗಿ ಕಾಣಿಸಿಕೊಂಡಿದ್ದಾನೆ.

ಆದರೆ ಅವನ ಅದೃಷ್ಟಕ್ಕೆ ಅಚ್ಚರಿಯಾಗಿದೆ. ಶ್ರೀಹರಿಯ ಸಂಪತ್ತಿಗೆ ವಾರಸುದಾರನಾಗುವ ಭಾಗ್ಯ! ಅವನ ಜೀವನ ಇದ್ದಕ್ಕಿದ್ದಂತೆ ಪಡೆಯಿತು ಹೊಸ ಆಯಾಮ! ಹೊಸ ಬದುಕಿನತ್ತ ಇರಿಸಿದ್ದಾನೆ ಹೆಜ್ಜೆಯನ್ನು! ಕೆಳಸ್ತರದಿಂದ ಮೇಲೆ-ನೆಗೆತ!

ಕೃಷ್ಣಯ್ಯನ ಮನಸ್ಸೂ ನೆಗೆಯಿತು ಸಂತೋಷದಲ್ಲಿ. ಅಪ್ರಾಪ್ತವಯಸ್ಕನಾದ ಗಣೇಶನಿಗೆ, ಅವನ ಹೊಸ ಸಂಪತ್ತಿಗೆ ಈಗ ಅವನೇ ಪೋಷಕನಾಗಿ ನಿಲ್ಲಬೇಕಾಗಿದೆ. 'ಓ!....ಈಗ ಅಕ್ಕ ಇದ್ದಿದ್ದರೆ ಎಷ್ಟು ಸಂತೋಷಪಡುತ್ತ ಇದ್ದಳೋ....ಗಣೇಶಾ!....' ಎಂದು ತನ್ನೊಳಗೇ ಹೇಳಿಕೊಂಡ ಆನಂದತುಂದಿಲನಾಗಿ.

"ಈಗಲೇ ಅವನನ್ನು ಹುಡುಕಿಕೊಂಡು ಬರ್ತೇನೆ. ಒಂದು ವೇಳೆ ನಾನು

ಅತ್ತ ಹೋದ ಹಾಗೇ ಅವನು ಇತ್ತ ಬಂದರೆ ಎಲ್ಲಿಗೂ ಹೋಗಲು ಬಿಡಬೇಡ. ವಿಷಯವನ್ನೆಲ್ಲ ಆಮೇಲೆ ಹೇಳ್ತೀನೆ....ಜಾಗ್ರತೆ ಮಾಡು ಅವನನ್ನು" ಎಂದು ಸುಮಿತ್ರಳತ್ತ ಕಿರುನಗೆ ಬೀರಿ ಓಡಿದ ಯಶೋದೆಯ ಮನೆಗೆ.

ಆದರೆ ಅವರ ಮನೆಯವರಾರೂ ಗಣೇಶನನ್ನು ನೋಡಿರಲಿಲ್ಲ. "ಮಳೆಯಲ್ಲಿ ಯಾವುದಾದರೂ ಅಂಗಡಿ ಬಾಗಿಲಿನಲ್ಲಿ ಇರಬಹುದು" ಎಂದ ಗೋಪಣ್ಣ.

ಕೃಷ್ಣಯ್ಯ ಹಾರಿಕೊಂಡು ಬಂದ ಮೀಸೆ ಅಣ್ಣನ ಅಂಗಡಿಗೆ. ಸಾಮಾನ್ಯವಾಗಿ ಅವನು ಚಹ ಕುಡಿಯುವುದು ಅಲ್ಲಿಯೇ. "ಅವನು ನನ್ನ ಅಂಗಡಿಗೆ ಕಾಲಿಡದೆ ತಿಂಗಳು ಸಂದವು! ಇವತ್ತಂತೂ ಅವನ ಮುಖವನ್ನೇ ಕಂಡಿಲ್ಲ!" ಎಂದ ಮೀಸೆ ಅಣ್ಣ ನಗುತ್ತ.

ನಿರಾಶನಾದ ಅವನು ಶಾಲೆಯ ಹತ್ತಿರ ಇರಬಹುದೇನೋ ಎಂಬ ಸಂಶಯ ತಳೆದು ಹೆಜ್ಜೆ ಹಾಕಿದ....ಆದರೆ ಮುಚ್ಚಿದ್ದ ಶಾಲೆಯ ಎದುರು ಒಂದು ನರಹುಳವೂ ಇರಲಿಲ್ಲ. ಅಲ್ಲಿಂದ ಹಿಂದಿರುಗುತ್ತಿದ್ದಂತೆ ದಾರಿಯಲ್ಲಿ ಎದುರಾದ ಮೈದುಕುಂಞ. ಅವನನ್ನೂ ವಿಚಾರಿಸಿದ ಕೃಷ್ಣಯ್ಯ.

"ಬೆಳಗ್ಗೆ ಒಂದು ಗಳಿಗೆ ನನ್ನ ಹಣ್ಣಿನಂಗಡಿ ಹತ್ರ ನಿಂತಿದ್ದ. ಆಮೇಲೆ ಇದೇ ದಾರಿಯಾಗಿ ದೊಡ್ಡ ರಸ್ತೆಯತ್ತ ಹೋದನಲ್ಲ....ಯಾಕೆ ಮನೆಗೆ ಬರಲಿಲ್ಲವೇ ಹಾಳಾದ ಹುಡುಗ?"

ಅಷ್ಟರಲ್ಲಿ ಅಲ್ಲಿಗೆ ಬಂದ ಗೌಡರ ಮಗ ನರಹರಿ. "ಅವನು ಮಧ್ಯಾಹ್ನ ಮೂರುಗಂಟೆಯ ಹೊತ್ತಿನಲ್ಲಿ ಬಸ್ಸು ಕಾಯ್ತಾ ಇದ್ದ ರಸ್ತೆಯ ಬದಿಗೆ. ಬಸ್ಸು ಹತ್ತಿ ಹೋಗಿರಬೇಕು ಎಲ್ಲಿಗೋ."

ಅಧೀರನಾದ ಕೃಷ್ಣಯ್ಯ ಓಡಿದ ಬಸ್ಸು ರಸ್ತೆಯತ್ತ. ಕೆಸರು ನೀರು ಪಚ್ ಪಚ್ ಎಂದು ಹಾರಿತು ಮೈಮೇಲೆ. ಗಣೇಶ ಎಲ್ಲಿಗೆ ಹೋದ? ಉಪ್ಪಿನ ಅಂಗಡಿ ಬದಿಗೇ? ಅಥವಾ ಮಂಗಳೂರಿನತ್ತ ಹೊರಟುಹೋದನೇ? ನಿನ್ನೆಯಿಂದ ಒಂದು ತುತ್ತು ಆಹಾರ ಸೇವಿಸಿಲ್ಲ ಮನೆಯಲ್ಲಿ. ಯಾಕೆ ಮುನಿದುಕೊಂಡನೋ? ಈಗ ಹುಡುಕುವುದಾದರೂ ಎಲ್ಲಿ? ಕೃಷ್ಣಯ್ಯನಿಗೆ ತನ್ನ ತಪ್ಪಿನ ಅರಿವಾಗಿ ತುಂಬಿಬಂದವು ಕಣ್ಣುಗಳು. ತಾನೊಬ್ಬ ಅವನಿಗಿದ್ದಿದ್ದರೆ ಅವನೂ ಸರಿಯಾಗಿ ಇರುತ್ತಿದ್ದ. ತಾನು ತಂದೆಯಲ್ಲ ಎಂದು ತಿಳಿದರೂ ಎಲ್ಲೆಲ್ಲಿಯೋ ಸುತ್ತಿ ತನ್ನ ಬಳಿಗೇ ಹಿಂದಿರುಗಿದ್ದಾನೆ. ಅವನ ಕಣ್ಣಲ್ಲಿ ತನಗಾಗಿ ಎಷ್ಟೊಂದು

ಪ್ರೀತಿ! ಈ ಎರಡು ವರ್ಷಗಳಿಂದ ಅವನು ಪಟ್ಟ ಬವಣೆ ಅಷ್ಟಿಷ್ಟಲ್ಲ. ಆದರೆ ನಾನೇ ಬೆಪ್ಪ, ಅವನನ್ನು ಅರ್ಥಮಾಡಿಕೊಳ್ಳಲಾರದೆಯೇ ಹೋದೆ....ಈಗ ಹೊರಟುಹೋಗಿದ್ದಾನೆ ಮನೆ ಬಿಟ್ಟು ಬೇರೆ ಎಲ್ಲಿಗೋ....

ಯೋಚಿಸುತ್ತಿದ್ದಂತೆ ಬಹಳ ಅಧೀರವಾಯಿತು ಅವನ ಮನಸ್ಸು. ನೋಡುತ್ತಾನೆ, ಬಾನ ಅಂಗಳದಲ್ಲಿ ಮತ್ತೆ ಮೋಡಗಳ ದಂಡು. ಅವುಗಳಿಗೆ ಎದುರಾಗಿ ರಂಗುರಂಗಿನ ಕಾಮನ ಬಿಲ್ಲು! ಇನ್ನೇನು ಸ್ವಲ್ಪ ಹೊತ್ತಿಗೆ ಪ್ರಾರಂಭವಾಗಿಬಿಡುತ್ತದೆ ಮಳೆ. ತಾನು ಕೊಡೆಯನ್ನು ತಂದಿಲ್ಲವೆಂದು ನೆನಪಾಗಿ ಹಳಹಳಿಸಿಕೊಂಡ ತನ್ನಲ್ಲೇ. ಇನ್ನೆಲ್ಲಿ ಹುಡುಕಲಿ ಗಣೇಶನನ್ನು?

ಅಷ್ಟರಲ್ಲಿ ಆ ದಾರಿಯಾಗಿ ಬಂದ ಹುಡುಗನೊಬ್ಬ, "ಗಣೇಶನನ್ನು ಹುಡುಕುತ್ತಾ ಇದ್ದೀರ? ಅವನು ಆ ಕಾಡಿನಲ್ಲಿ (ಕೈ ತೋರಿಸುತ್ತ) ಅದೇ ಆ ತಿರುವು ಕಾಣಿಸುತ್ತಲ್ಲ....ಅಲ್ಲೇ ಮೇಲೆ ನಾಗಸಂಪಿಗೆ ಮರದ ಕೆಳಗೆ ಇದ್ದಾನೆ" ಎಂದ.

"ಯಾವಾಗ ನೋಡಿದೆ ನೀನು?"—ಆತಂಕದಿಂದ ಸರ್ರನೆ ತಿರುಗಿದ.

"ಆಗಿನಿಂದಲೂ ಅಲ್ಲೇ ಬಿದ್ದುಕೊಂಡಿದ್ದಾನೆ!"

ಅವನು ಮಾತು ಮುಗಿಸುವ ಮೊದಲೇ ಕೃಷ್ಣಯ್ಯ ಓಡಿದ ನಾಗಸಂಪಿಗೆ ಮರ ಇರುವ ಸ್ಥಳಕ್ಕೆ. 'ಆಗಿನಿಂದಲೂ ಅಲ್ಲೇ ಬಿದ್ದುಕೊಂಡಿದ್ದಾನೆ!'—ಅಂದರೆ....ಅವನಿಗೆ ಏನಾಗಿದೆ? ದಾರಿಯ ತಿರುವು ದಾಟಿ ಮುಂದುವರಿದರೆ ಕಾಣಿಸುತ್ತದೆ—ಅದೋ ಅಲ್ಲಿ ಕುರುಚಲು ಹುಲ್ಲು, ಪೊದೆಯ ಬಳಿಯಲ್ಲಿ ನಾಲ್ಕಾರು ನಾಗಸಂಪಿಗೆಯ ಮರಗಳು. ಅವುಗಳ ಹಳದಿ ಮಿಶ್ರಿತ ಬಿಳಿ ಹೂವುಗಳು ಮಳೆಗೆ ಉದುರಿವೆ ಕೆಸರಿನ ಮೇಲೆ. ಅವನ ಕಣ್ಣುಗಳು ಅರಸಿದವು ಸುತ್ತಲೂ. ಅಲ್ಲಿ ಆ ಮರದ ಕೆಳಗೆ ಮುದ್ದೆಯಾಗಿ ಮುರುಟಿಕೊಂಡು ಬಿದ್ದಿದ್ದಾನೆ ಗಣೇಶ.

ಕೃಷ್ಣಯ್ಯ ಆತಂಕ, ಆತುರದಿಂದ ಓಡಿಯೋಡಿ ಬಂದ ಮರದ ಕಡೆಗೆ. ನೋಡುತ್ತಾನೆ, ಅವನ ಬಟ್ಟೆಯೆಲ್ಲ ಒದ್ದೆ, ಕೆಸರಿನ ಮುದ್ದೆ. ಮೈದಡವಿದ, ಸುಡುವ ಜ್ವರ ತಲ್ಲಣಿಸಿತು ಅವನನ್ನು. ಕರೆದ, ಓಗೊಡಲಿಲ್ಲ! ಮೈಮೇಲೆ ಪ್ರಜ್ಞೆಯಿಲ್ಲದವನಂತೆ ಬಿದ್ದಿದ್ದಾನೆ. ಏನಾಯಿತು ಇವನಿಗೆ? ಕಳವಳದಿಂದ ಬಗ್ಗಿದ ಅವನತ್ತ.

"ಏಳು....ಇಲ್ಲಿ ಯಾಕೆ ಮಲಗಿದ್ದಿ? ಎಚ್ಚರ ಮಾಡಿಕೊ, ಗಣೇಶ!...." ಅವನ ಭುಜಗಳನ್ನು ಅಲುಗಿಸಿದ ಎರಡು ಬಾರಿ.

"ಅಪ್ಪಾ!...." ಕ್ಷೀಣ ಸ್ವರದಲ್ಲಿ ನರಳಿದ ಗಣೇಶ ಒಂದು ಬಾರಿ. ಕಣ್ತೆರೆದು ನೋಡಿದ ಕೃಷ್ಣಯ್ಯನನ್ನು. ಅವನ ಮುಖದ ಮೇಲೆ ಮಿಂಚಿ ಮಾಯವಾಯಿತು ನಗೆಯ ಸುಳಿಯೊಂದು.

ಕೃಷ್ಣಯ್ಯನ ಮನಸ್ಸು, ಹೃದಯ ಹಿಂಡಿ ಎಸೆದಂತಾಯಿತು ಬೆಂಕಿಯ ಮಡುವಿಗೆ. ತನ್ನಿಂದ ಏನನ್ನೂ ಅಪೇಕ್ಷಿಸದ ಹುಡುಗ ಜ್ವರದ ಬೇಗೆಯಲ್ಲಿಯೂ 'ಅಪ್ಪಾ....!' ಎನ್ನುತ್ತಿದ್ದಾನೆ. ಆ ಒಂದೇ ಒಂದು ಕರೆ, ಆ ನಗು ಈವರೆಗೂ ಅವನಲ್ಲಿದ್ದ ಯಾವುದೋ ಒಂದು ಅನುಮಾನವನ್ನು ಸಂಪೂರ್ಣವಾಗಿ ತೊಡೆದುಹಾಕಿತು. ತನ್ನ ಎರಡೂ ಕೈಗಳನ್ನು ಮುಂದಕ್ಕೆ ಚಾಚಿ ತಬ್ಬಿಕೊಂಡ ಅವನನ್ನು........

---

# ಕೆಲವು ಉತ್ತಮ ಕಾದಂಬರಿಗಳು

| ಪುಸ್ತಕ | | |
|---|---|---|
| ನಾಲ್ಕು × ನಾಲ್ಕು = ಒಂದು—ತ.ರಾ.ಸು. ... | 7 | 50 |
| ಶಾಪ—ವಿ. ಎಂ. ಇನಾಂದಾರ್ ... ... | 10 | 00 |
| ಕನಸಿನ ಮನೆ (ಮೋಹಿನಿ – ಭಾಗ 1)—ವಿ. ಎಂ. ಇನಾಂದಾರ್ ... | 5 | 00 |
| ಕಟ್ಟಿದ ಮನೆ (ಮೋಹಿನಿ – ಭಾಗ 2)—ವಿ. ಎಂ. ಇನಾಂದಾರ್ ... | 7 | 50 |
| ಬಾಡಿದ ಹೂ (ಮೋಹಿನಿ – ಭಾಗ 3)—ವಿ. ಎಂ. ಇನಾಂದಾರ್ ... | 6 | 50 |
| ಕತ್ತಲೆಯ ಕಡಲು (ಮೋಹಿನಿ – ಭಾಗ 4)—ವಿ. ಎಂ. ಇನಾಂದಾರ್ | 6 | 00 |
| ಸ್ವರ್ಗದ ಬಾಗಿಲು—ವಿ. ಎಂ. ಇನಾಂದಾರ್ ... ... | 7 | 50 |
| ಮೂರಾಬಟ್ಟೆ—ವಿ. ಎಂ. ಇನಾಂದಾರ್ ... ... | 5 | 00 |
| ಈ ಪರಿಯ ಸೊಬಗು—ವಿ. ಎಂ. ಇನಾಂದಾರ್ ... ... | 6 | 00 |
| ವಿಜಯಯಾತ್ರೆ—ವಿ. ಎಂ. ಇನಾಂದಾರ್ ... ... | 5 | 50 |
| ಯಾತ್ರಿಕರು—ವಿ. ಎಂ. ಇನಾಂದಾರ್ ... ... | 6 | 00 |
| ಮುಗಿಯದ ಕಥೆ—ವಿ. ಎಂ. ಇನಾಂದಾರ್ ... ... | 5 | 50 |
| ನವಿಲುನೌಕೆ—ವಿ. ಎಂ. ಇನಾಂದಾರ್ ... ... | 7 | 50 |
| ಊರ್ವಶಿ—ವಿ. ಎಂ. ಇನಾಂದಾರ್ ... ... | 10 | 75 |
| ವಾತ್ಸಲ್ಯಪಥ—ವ್ಯಾಸರಾಯ ಬಲ್ಲಾಳ ... ... | 9 | 00 |
| ಉತ್ತರಾಯಣ—ವ್ಯಾಸರಾಯ ಬಲ್ಲಾಳ ... ... | 10 | 00 |
| ಸನಾದಿ ಅಪ್ಪಣ್ಣ—ಕೃಷ್ಣಮೂರ್ತಿ ಪುರಾಣಿಕ ... ... | 6 | 00 |
| ಪಾವನಗಂಗಾ—ಕೃಷ್ಣಮೂರ್ತಿ ಪುರಾಣಿಕ ... ... | 13 | 50 |
| ಮೌನಗೌರಿ—ಕೃಷ್ಣಮೂರ್ತಿ ಪುರಾಣಿಕ ... ... | 6 | 00 |
| ಧೂಮಕೇತು—ರಾವ ಬಹಾದ್ದೂರ ... ... | 4 | 00 |
| ಬಿತ್ತಿ ಬೆಳೆದವರು—ರಾವ ಬಹಾದ್ದೂರ ... ... | 15 | 00 |
| ಬಾಳು ಬಂಗಾರ—ರಾವ ಬಹಾದ್ದೂರ ... ... | 10 | 00 |
| ಜ್ಯೋತಿ ಬೆಳಗುತಿದೆ—ಎಚ್. ತಿಪ್ಪೇರುದ್ರಸ್ವಾಮಿ ... ... | 7 | 50 |
| ಭೂಮಿ—ನಿಶುಕುಮಾರ್ ... ... | 3 | 50 |
| ಕರ್ಮ—ನಿಶುಕುಮಾರ್ ... ... | 5 | 00 |
| ಮದರ್—ನಿಶುಕುಮಾರ್ ... ... | 10 | 50 |
| ಕರಾವಳಿ—ನಿಶುಕುಮಾರ್ ... ... | 10 | 50 |
| ವಿಪ್ಲವ—ನಿಶುಕುಮಾರ್ ... ... | 7 | 50 |
| ಹಂಸಕ್ಷೀರ—ನಿಶುಕುಮಾರ್ ... ... | 7 | 50 |
| ಪರಿಗ್ರಹಣ—ಎಚ್. ಎಸ್. ಗೋಪಾಲರಾಯ ... ... | 8 | 50 |
| ವೆಂಕಪ್ಪಯ್ಯನ ಕೊನೆಯ ಅಕ್ಷರಗಳು—ಡಿ.ವಿ.ಕೆ. ಮೂರ್ತಿ ... | 4 | 00 |
| ಹರಿಯೂಪಿಯಾ—ವೈ. ಎಸ್. ಲೂಯಿಸ್ ... ... | 5 | 00 |
| ಅತೃಪ್ತಿ—ಎ. ಪಿ. ಮಾಲತಿ ... ... | 6 | 00 |

---

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು

ಹೊಸ ಹೆಜ್ಜೆ / ರೂ. 15